ದೇವಲಮುನಿವಿರಚಿತ

# ಮಹಾಸಂಕಲ್ಪಃ

( ಮೂಲ, ವಿಸ್ತೃತ ವಿವರಣೆ ಸಹಿತ )

ಮುನ್ನುಡಿ :

ಶ್ರೀ ಶ್ರೀ ರಂಗಪ್ರಿಯ ಮಹಾದೇಶಿಕರು, ಬೆಂಗಳೂರು

ವಿವರಣಕಾರರು :

ಚಂ. ಸತ್ಯನಾರಾಯಣ, ನಂಜನಗೂಡು

ಟಿ. ಎನ್. ಪ್ರಭಾಕರ, ತುರುವೇಕೆರೆ

ಪ್ರಕಾಶಕರು :

ಸುರಭಿ ಸಂಗಮ, ತುರುವೇಕೆರೆ (ತುಮಕೂರು ಜಿಲ್ಲೆ) - 572 227

ಹಾಗೂ

ಜ್ಞಾನಭಾರತೀ ಪ್ರಕಾಶನ, ಮಂಗಳೂರು - 575 008

shrinath.udupa@gmail.com

**MAHASANKALPAHA** (Kannada)

The Original text composed by Sage Devala with detailed commentary in Kannada by **C. Sathyanarayana**(Nanjanagud) and **T. N. Prabhakara** (Turuvekere)

**PUBLISHED BY SURABHI SANGAMA,**
Bhagath Singh Road, Turuvekere (Tumkur District) - 572 227

and

**JNANA BHARATHI PRAKASHANA,**
Yeyyadi, Mangalore - 575 008

| | | |
|---|---|---|
| ಮೊದಲ ಮುದ್ರಣ | : | ತಾರಣನಾಮ ಸಂವತ್ಸರ, ತುಲಾ ಸಂಕ್ರಮಣ ೧೯೨೬ (17-10-2004) |
| ಬೆಲೆ | : | 60.00 ರೂಪಾಯಿಗಳು |
| ಪುಟಗಳು | : | (xx)+133 |
| ಹಕ್ಕುಗಳು | : | ಪ್ರಕಾಶಕರವು (ಪ್ರಕಾಶಕರು) |
| ಮುದ್ರಕರು | : | ದಿಗಂತ ಮುದ್ರಣ, ಯೆಯ್ಯಾಡಿ, ಮಂಗಳೂರು - 8 ದೂರವಾಣಿ - 0824- 5514870,72 |
| ಅಕ್ಷರ ಜೋಡಣೆ ಮತ್ತು ಮುಖಪುಟ ವಿನ್ಯಾಸ | : | ಅಕ್ಷರೋದ್ಯಮ, ಮಂಗಳೂರು - 3 ದೂರವಾಣಿ -2496726 |




# ಪ್ರಕಾಶಕರ ನುಡಿ

ತುರುವೇಕೆರೆಯ ಸುರಭಿ ಸಂಗಮ ಸೇವಾ ಸಂಸ್ಥೆಯು ಕಳೆದ ಹದಿನಾಲ್ಕು ವರ್ಷಗಳಿಂದ ತುರುವೇಕೆರೆಯೆಂಬ ಸಣ್ಣ ಊರಿನಲ್ಲಿ ಕೆಲವು ಸಾಂಸ್ಕೃತಿಕ ಶೈಕ್ಷಣಿಕ ಚಟುವಟಿಕೆಗಳನ್ನು ನಡೆಸುತ್ತಿದೆ. ಈ ಊರಿನಲ್ಲಿ ಇರುವ ಎರಡು ಹೊಯ್ಸಳ ದೇವಾಲಯಗಳನ್ನು ಹತ್ತು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ವಿವಿಧ ಸಂಸ್ಥೆಗಳ ನೆರವಿನಿಂದ ಜೀರ್ಣೋದ್ಧಾರಗೊಳಿಸಿರುವುದಲ್ಲದೆ ಕೆಲವು ಪುಸ್ತಕಗಳನ್ನೂ ಪ್ರಕಟಿಸುತ್ತಿದೆ.

ಇದೇ ರೀತಿ ಮಂಗಳೂರಿನ ಜ್ಞಾನಭಾರತೀ ಪ್ರಕಾಶನವು ಮೌಲಿಕ ಪುಸ್ತಕಗಳನ್ನು ಪ್ರಕಾಶಿಸಿ ಜನರಲ್ಲಿ ದೇಶಭಕ್ತಿ- ಧಾರ್ಮಿಕಪ್ರಜ್ಞೆಗಳನ್ನು ಉದ್ದೀಪನಗೊಳಿಸುವುದರಲ್ಲಿ ಯಶಸ್ವಿಯಾಗಿದೆ. ಈ ಪುಸ್ತಕಗಳಿಗೆ ಮೂರ್ಧನ್ಯವೆನಿಸುವಂತೆ 'ಮಹಾಸಂಕಲ್ಪ'ದ ವಿಸ್ತೃತವಿವರಣೆಯನ್ನು ಈಗ ಎರಡೂ ಸಂಸ್ಥೆಗಳು ಸೇರಿ ಪ್ರಕಟಿಸುತ್ತಿರುವುದು ಒಂದು ಯೋಗಾಯೋಗ.

ಇತ್ತೀಚೆಗೆ ಹಿರಿಯಚಿಂತಕರೊಬ್ಬರು ಮಹಾಸಂಕಲ್ಪದಲ್ಲಿ ಅಡಗಿರುವ ರಾಷ್ಟ್ರೀಯ ಮೌಲ್ಯಗಳ ಬಗ್ಗೆ ಜನರಿಗೆ ಪರಿಚಯಿಸಬೇಕಾದ ಅಗತ್ಯವನ್ನು ಶಿವಮೊಗ್ಗೆಯ ಸಭೆಯೊಂದರಲ್ಲಿ ಒತ್ತಿ ಹೇಳಿದ್ದರು. ಅದನ್ನು ಕೇಳಿದ ಹಿರಿಯ ಕಾರ್ಯಕರ್ತರೊಬ್ಬರು ಅದರ ಅನುಷ್ಠಾನಕ್ಕಾಗಿ ಪ್ರಯತ್ನಿಸಿ ಎಂಟು ವರ್ಷಗಳ ಬಳಿಕ ಈಗ ಅದು ಸಾರ್ಥಕತೆ ಕಂಡಿದೆ. ಈ ಪುಸ್ತಕದಲ್ಲಿರುವ ವಿವರಣೆಯನ್ನು ಸುರಭಿ ಪುಸ್ತಕಮಾಲೆಯ ಸಂಪಾದಕ ಶ್ರೀ ಚಂ. ಸತ್ಯನಾರಾಯಣ ಹಾಗೂ ಕಡೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಪ್ರಾಚಾರ್ಯರಾದ ವಿದ್ವಾನ್ ಟಿ. ಎನ್. ಪ್ರಭಾಕರ ಬರೆದಿದ್ದಾರೆ. ಈ ವಿವರಣೆಯನ್ನು ಬರೆಯಲು ಅವರು ಹತ್ತಾರು ಗ್ರಂಥಗಳನ್ನೂ ನೂರಾರು ಲೇಖನಗಳನ್ನೂ ಪರಾಮರ್ಶಿಸಿದ್ದಾರೆ. ಅನೇಕ ಹಿರಿಯರ ಸಲಹೆಗಳನ್ನು ಪಡೆದಿದ್ದಾರೆ. ಒಂದೂವರೆ ವರ್ಷಗಳ ನಿರಂತರ ಚಿಂತನೆ, ವಿಷಯ ಸಂಗ್ರಹಗಳಿಂದಾಗಿ ಈ ಸಾಹಿತ್ಯವು ಸಿದ್ಧಗೊಂಡಿತು. ಸಿದ್ಧಗೊಂಡ ಈ ಸಾಹಿತ್ಯವು ಪರಿಶುದ್ಧವಾಗಿ ಮುದ್ರಣಗೊಳ್ಳಲು ಅನೇಕ

shrinath.udupa@gmail.com

ತಿಂಗಳುಗಳೇ ಹಿಡಿದುವು. ಈ ಪುಸ್ತಕವನ್ನು ಮೂಲತಃ ಪರಿಶೀಲಿಸಿ ಸೂಕ್ತ ಸಲಹೆಗಳನ್ನು ನೀಡಿ ಬೆಂಗಳೂರಿನ ಶ್ರೀ ಶ್ರೀ ರಂಗಪ್ರಿಯ ಮಹಾದೇಶಿಕರು ಆಶೀರ್ವಾದದ ಮುನ್ನುಡಿಯನ್ನು ಅನುಗ್ರಹಿಸಿದ್ದಾರೆ. ಅವರಿಗೆ ಪ್ರಕಾಶನದ ಪರವಾಗಿ ಅನಂತ ಪ್ರಣಾಮ ಪರಂಪರೆಗಳು. ಈ ವಿವರಣೆಯ ಲೇಖಕರಿಗೂ ಮುದ್ರಣವನ್ನು ಮನೋಜ್ಞವಾಗಿ ನಿರ್ವಹಿಸಿದ ಮಂಗಳೂರಿನ ದಿಗಂತ ಮುದ್ರಣಕ್ಕೂ ಹಾರ್ದಿಕ ವಂದನೆಗಳು. ತಾರಣ ಸಂವತ್ಸರದ ಶ್ರೀ ಗಣೇಶನು ನಮ್ಮೆಲ್ಲರನ್ನೂ ಸಂಕಷ್ಟಗಳ ಆಚೆಗಿನ ತೀರಕ್ಕೆ ಸಾಗಿಸಲೆಂದು ಪ್ರಾರ್ಥಿಸುತ್ತೇವೆ. ಓದುಗರು ರಾಷ್ಟ್ರೀಯಮೌಲ್ಯವುಳ್ಳ ಈ ಗ್ರಂಥವನ್ನು ಸ್ವಾಗತಿಸುತ್ತಾರೆಂಬ ವಿಶ್ವಾಸವನ್ನು ಹೊಂದಿದ್ದೇವೆ.

| | |
|---|---|
| ತಾರಣ ಸಂವತ್ಸರ | **ಪ್ರಕಾಶಕರು** |
| ತುಲಾ ಸಂಕ್ರಮಣ | ಸುರಭಿ ಸಂಗಮ, ತುರುವೇಕೆರೆ (ತುಮಕೂರು) |
| 17-10-2004 | ಜ್ಞಾನಭಾರತೀ ಪ್ರಕಾಶನ, ಮಂಗಳೂರು |



shrinath.udupa@gmail.com

॥ ಶ್ರೀರಂಗಸದ್ಗುರವೇ ನಮಃ ॥

# ಆಶೀರ್ವಚನ

ಶ್ರೀಮತ್ಪರಮಹಂಸ
ಶ್ರೀ ಶ್ರೀ ರಂಗಪ್ರಿಯ ಮಹಾದೇಶಿಕ
ಶ್ರೀ ಶ್ರೀ ಗಳವರಿಂದ

ಐಹಿಕ ಅಥವಾ ಪಾರಮಾರ್ಥಿಕವಾದ ಯಾವುದೇ ಕರ್ಮವನ್ನು ಆಚರಿಸಬೇಕಾದರೂ ಸಂಕಲ್ಪಪೂರ್ವಕವಾಗಿಯೇ ಮಾಡಬೇಕು. ಸಂಕಲ್ಪವಿಲ್ಲದೆ ಮಾಡಲ್ಪಡುವ ಕರ್ಮವು ಉದ್ದಿಷ್ಟವಾದ ಫಲವನ್ನು ಕೊಡದೇ ಇರುವುದು ಮಾತ್ರವಲ್ಲದೇ ಅನಿಷ್ಟ ಫಲವನ್ನು ಕೊಡುವ ಸಂಭವವೂ ಉಂಟು. ಆದುದರಿಂದ ಸನಾತನ ಆರ್ಯಭಾರತೀಯ ಮಹರ್ಷಿಗಳು ಸ್ನಾನ, ಸಂಧ್ಯಾವಂದನೆ, ಯಜ್ಞ, ದಾನ ಮುಂತಾದ ಯಾವುದೇ ಶ್ರೌತ ಸ್ಮಾರ್ತ ಕರ್ಮವನ್ನು ಆಚರಿಸಬೇಕಾದರೂ ಆರಂಭದಲ್ಲಿ ಆ ಕರ್ಮವನ್ನು ಆಚರಿಸುವ ನಿರ್ದಿಷ್ಟವಾದ ಕಾಲ, ದೇಶ, ಉದ್ದೇಶ, ಗೊತ್ತು, ಗುರಿ ಮುಂತಾದವುಗಳನ್ನು ನೆನೆಯುವ 'ಸಂಕಲ್ಪ' ಎಂಬುದನ್ನು ಆಚರಣೆ ಮಾಡಬೇಕೆಂದು ವಿಧಾನ ಮಾಡಿದ್ದಾರೆ. ಸಂಕಲ್ಪ ಎಂಬುದು ಮಾನಸ ಕರ್ಮವಾಗಿದ್ದರೂ ಅದಕ್ಕೆ ಅನುಗುಣವಾದ ಸಾಹಿತ್ಯವನ್ನೂ ಸಂಕಲ್ಪವೆಂದು ಕರೆಯುವ ಸಂಪ್ರದಾಯವಿದೆ. ಪ್ರತಿದಿನದಲ್ಲಿ ಆಚರಿಸಬೇಕಾದ ಕರ್ಮದಲ್ಲೂ ಸಂಕಲ್ಪವಿಧಾನವಿದ್ದರೂ ಮಹಾದಾನ, ವ್ರತ, ಪ್ರಾಯಶ್ಚಿತ್ತ, ನದೀ ಸ್ನಾನ ಮುಂತಾದ ವಿಶಿಷ್ಟವಾದ ಶುಭ -ಪುಣ್ಯ ಕರ್ಮಗಳ ಆಚರಣೆಯ ಪ್ರಾರಂಭದಲ್ಲಿ ಈ ಸಂಕಲ್ಪದ ವಿಸ್ತೃತರೂಪವನ್ನು ಅನುಸಂಧಾನ ಮಾಡುವ ವಿಧಿ ಇದೆ. ಇದನ್ನು ಮಹಾಸಂಕಲ್ಪ ಎಂದು ಕರೆಯುತ್ತಾರೆ.

"ಮಹಾದಾನೇಷು ಯಜ್ಞಾದೌ ಪ್ರಾಯಶ್ಚಿತ್ತೇಷು ಕರ್ಮಸು ।
ಕನ್ಯಾದಾನೇ ನದೀಸ್ನಾನೇ ಮಹಾಸಂಕಲ್ಪಮಾಚರೇತ್ ॥
ಕೃತ್ವಾ ಯತ್ಕುರುತೇ ಕರ್ಮ ತದಾನನ್ತ್ಯಾಯ ಕಲ್ಪತೇ ॥

ಈ ಅನಂತವೂ ಅದ್ಭುತವೂ ಆದ ಸೃಷ್ಟಿಯ ಮೂಲಕರ್ತನಾದ ಆದಿಪುರುಷ ಪರಮಾತ್ಮ ಪರಂಜ್ಯೋತಿ ಪರಮೇಶ್ವರನು ಕಾಲಾತೀತನಾಗಿದ್ದರೂ ಪರಿಮಿತ ಕಾಲದಲ್ಲಿ ತನ್ನ ಇಚ್ಛೆಯಿಂದ ಅವತರಿಸುತ್ತಾನೆ. **"ವಯಂ ದೇವಸ್ಯ ಧೀಮಹಿ ಸುಮತಿಗ್ಂ ಸತ್ಯರಾಧಸಃ"** ಎಂದು ಶ್ರುತಿ ಮಾತೆಯು ಮೊಳಗುವಂತೆ ಸತ್ಯಕಾಮ, ಸತ್ಯಸಂಕಲ್ಪ ಮತ್ತು ಸತ್ಯಸಿದ್ಧಿಯುಳ್ಳವನಾಗಿ ಈ ವಿಶ್ವವ್ಯವಹಾರವನ್ನು ನಿರ್ವಹಿಸುತ್ತಿದ್ದಾನೆ. ಆದುದರಿಂದ ಮಹಾಸಂಕಲ್ಪದ ಆದಿಯಲ್ಲಿ ಅಂತಹ ಪರಮಪುರುಷನನ್ನು ಸ್ಮರಿಸಿ, ಅನಂತರ ಉಪಸೃಷ್ಟಿಗೆ ಕಾರಣರಾದ ಪ್ರಜಾಪತಿಗಳು, ಜ್ಞಾನಮೂರ್ತಿಗಳಾದ ಬ್ರಹ್ಮರ್ಷಿಗಳು, ಮಹರ್ಷಿಗಳು, ದೇವರ್ಷಿಗಳು; ಸೃಷ್ಟಿಯನ್ನು ಮುಂದುವರೆಸುವುದರ ಜೊತೆಗೆ ಆಡಳಿತದ ನಿರ್ವಹಣೆಯನ್ನೂ ಮಾಡಿ ಭಗವಂತನ ಸೇವೆಯನ್ನು ನಿರ್ವಹಿಸಿದ ರಾಜರ್ಷಿಗಳು; ಧರ್ಮದ ವ್ಯವಸ್ಥೆಗೆ ಕಾರಣರಾಗಿರುವ ಸಾಧ್ವೀಮಣಿಗಳು; ಈ ಬ್ರಹ್ಮಾಂಡದ ಭಾಗ, ವಿಭಾಗ, ಉಪವಿಭಾಗಗಳು ಮತ್ತು

ಅವುಗಳಲ್ಲಿ ವಿಶಿಷ್ಟಸ್ಥಾನಮಾನಗಳಿಂದ ಅಲಂಕೃತವಾಗಿರುವ ಭಾರತ ಭೂಮಿಯ ಪುಣ್ಯಪರ್ವತ, ತೀರ್ಥಕ್ಷೇತ್ರಗಳು - ಇತ್ಯಾದಿಗಳನ್ನು ಸ್ಮರಿಸಿ ಆಯಾ ಕರ್ಮದ ಉದ್ದೇಶವನ್ನು ಅನುಸಂಧಾನ ಮಾಡಲಾಗುತ್ತದೆ. ಈ ಅನುಸಂಧಾನವನ್ನು ಮನಸ್ಸಿನಲ್ಲಿ ಮಾಡುವುದರ ಜೊತೆಗೆ ತನ್ನ ಮತ್ತು ಇತರರ ಸಂಸ್ಕಾರವನ್ನು ದೃಢಪಡಿಸುವುದಕ್ಕಾಗಿ ಮುಖದಿಂದಲೂ ಉಚ್ಚರಿಸಬೇಕೆಂಬ ವಿಧಿಯಿದೆ.

"ಯತಾಸುರಾಗುರಂ ವದೇತ್"

*[ಪ್ರಾಣವನ್ನು ನಿಯಂತ್ರಿಸಿ ಪ್ರಯತ್ನಪೂರ್ವಕವಾಗಿ (ಗಟ್ಟಿಯಾಗಿ) ಉಚ್ಚರಿಸಬೇಕು]*

ವಿಶ್ವದಲ್ಲಿ ಅಸಾಧಾರಣವಾಗಿ, ಅವಿಚ್ಛಿನ್ನವಾಗಿ ನಡೆದು ಬರುತ್ತಿರುವ ಈ ಮಹಾಸಂಕಲ್ಪ ಪಠನದ ಪರಂಪರೆಯು ಅತ್ಯಂತ ಶ್ಲಾಘನೀಯವಾಗಿದ್ದರೂ ಈಗ ಅದು ತನ್ನ ಶಕ್ತಿಯನ್ನು ಕಳೆದುಕೊಳ್ಳುತ್ತಿದೆ. ಅದನ್ನು ಪಠಿಸುವಾಗ ಮತ್ತು ಶ್ರವಣಮಾಡುವಾಗ ಜನರು ಉತ್ಸಾಹ ಭರಿತರಾಗಿರುವುದಿಲ್ಲ. "ಸುಲಗ್ನಾಃ ಸಾವಧಾನಾಃ" ಆಗಿರುವುದಿಲ್ಲ. ಕಾರಣ ಜನರಿಗೆ ಅದರ ಅರ್ಥದ ಅರಿವಾಗುತ್ತಿಲ್ಲ. ಅಲ್ಲಿ ಹೇಳಿರುವ ನದೀ ನಗರ ಗಿರಿ ಕಾನನಾದಿಗಳು ಎಲ್ಲಿವೆ? ಅವುಗಳ ಮಹತ್ತ್ವವೇನು? ಅಲ್ಲಿ ಕೀರ್ತಿಸಲ್ಪಟ್ಟಿರುವ ಮಹಾಪುರುಷರು ಯಾರು? ಅವರ ಹಿರಿಮೆಯೇನು? ಎಂಬುದು ತಿಳಿಯುತ್ತಿಲ್ಲ. ಹಾಗೆ ತಿಳಿದು ಬಂದರೆ ಶ್ರೀಭಗವಂತನಲ್ಲೂ ಆತನ ವಿಭೂತಿಗಳಲ್ಲೂ ಆತನ ಮಹಾವಿಭೂತಿಗಳಲ್ಲಿ ಮೂರ್ಧನ್ಯವಾಗಿರುವ ಭಾರತ ದೇಶದಲ್ಲೂ ನಮ್ಮಲ್ಲಿ ಭಕ್ತಿ ಶ್ರದ್ಧೆಗಳು ಮೂಡಿ, ವೃದ್ಧಿಹೊಂದಿ, ಆತ್ಮಕಲ್ಯಾಣ-ಲೋಕಕಲ್ಯಾಣಗಳನ್ನು ಸಾಧಿಸಲು ಅತ್ಯಂತ ಸಹಾಯಕವಾಗುವುದರಲ್ಲಿ ಕಿಂಚಿತ್ತೂ ಸಂದೇಹವಿಲ್ಲ. ಈ ಶುಭ ಸಂಕಲ್ಪದಿಂದ ಪ್ರೇರಿತರಾಗಿ ಗುರುದೇವತಾಭಕ್ತರೂ ಭಾರತೀಯ ಸಂಸ್ಕೃತಿಪ್ರೇಮಿಗಳಾದ ಸಜ್ಜನಶಿರೋಮಣಿಗಳೂ ಆಗಿರುವ ಮಾನ್ಯ ಚಿಂ. ಸತ್ಯನಾರಾಯಣ ಹಾಗೂ ಟಿ. ಎನ್. ಪ್ರಭಾಕರರವರು ಮಹಾಸಂಕಲ್ಪದಲ್ಲಿ ಬರುವ ಮುಖ್ಯವಿಷಯಗಳಿಗೆ ಉಪಯುಕ್ತವಾದ ವಿವರಣೆಗಳನ್ನು ನಾನಾ ಆಕರಗಳಿಂದ ಸಂಗ್ರಹಿಸಿ ಮಹಾಸಂಕಲ್ಪದ ಮೂಲಸಾಹಿತ್ಯದೊಡನೆ ಅದನ್ನು ಸೇರಿಸಿ ಈ ಗ್ರಂಥರೂಪದಲ್ಲಿ ಜನತೆಗೆ ಸಮರ್ಪಿಸಿದ್ದಾರೆ. ಸುಸಂಸ್ಕಾರಗಳಿಂದ ಸುರಭಿತವಾಗಿ ಪುರುಷಾರ್ಥಗಳನ್ನು ಕರೆಯುವ ಸುರಧೇನುವಾಗಿ ಸತ್ಯ ಶಿವ ಸುಂದರವಾದ ವಿಚಾರಧಾರೆಗಳಿಗೆ ಸಂಗಮವಾಗಿ ಸುರಭಿಸಂಗಮ ಹಾಗೂ ಜ್ಞಾನ ಭಾರತಿ ಎಂಬ ಅನ್ವರ್ಥನಾಮದಿಂದ ಒಪ್ಪುತ್ತಿರುವ ಸಂಸ್ಥೆಗಳು ಇದನ್ನು ಪ್ರಕಾಶಪಡಿಸುತ್ತಿರುವುದು ಸಹಜವೇ ಆಗಿದೆ. ಲೇಖಕರಾದ ಶ್ರೀ ಸತ್ಯನಾರಾಯಣ ಹಾಗೂ ಶ್ರೀ. ಟಿ. ಎನ್. ಪ್ರಭಾಕರರವರಿಗೂ ಈ ಧರ್ಮಕಾರ್ಯಕ್ಕೆ ಸಹಾಯಕರಾಗಿರುವ ಸಮಸ್ತ ಸಜ್ಜನರಿಗೂ ಮಂಗಳಾಶಂಸನಗಳು.

ಇತಿ ನಾರಾಯಣಸ್ಮೃತಯಃ

ಶ್ರೀ ಶ್ರೀ ರಂಗಪ್ರಿಯ ಶ್ರೀಪಾದ ಶ್ರೀ ಶ್ರೀಃ

ಅಷ್ಟಾಂಗಯೋಗ ವಿಜ್ಞಾನಮಂದಿರಂ
ಬೆಂಗಳೂರು -19
ತಾರಣ ಸಂವತ್ಸರ - ಶ್ರೀಕೃಷ್ಣಾಷ್ಟಮಿ



# ಅಂತರಂಗದ ನುಡಿ

**ಮಹಾಸಂಕಲ್ಪ**ವೆಂಬುದು ಭಾರತೀಯ ಸಾಹಿತ್ಯರಚನೆಯಲ್ಲಿ ಒಂದು ಅತ್ಯದ್ಭುತ ಸೃಷ್ಟಿಯಾಗಿದೆ. ವಿಶ್ವಕೋಶದಂತೆಯೇ ಇರುವ ಈ ಸಾಹಿತ್ಯರತ್ನವು ಬಹು ಅಮೂಲ್ಯ ವಿಚಾರಗಳನ್ನೊಳಗೊಂಡಿದೆ. ಇಂದಿನ ಭೂ ಮತ್ತು ಖಗೋಳ ವಿಜ್ಞಾನಿಗಳೂ ವಿಸ್ಮಯಪಡುವಂತೆ ಮಾಡುವ ಈ ರಚನೆಯಲ್ಲಿ ಪಟ್ಟಿಮಾಡಿದ ನಿರ್ದಿಷ್ಟ ಪದಗಳು ವಿವರಣೆಗಳನ್ನು ಕಾಣದೇ ಪ್ರಕೃತ ಕೇವಲ ಒಂದೆರಡು ಸಂಸ್ಕಾರಕರ್ಮಗಳನ್ನು ಮಾಡುವಾಗ ಪಠನಕ್ಕೆ ಮಾತ್ರ ಮೀಸಲಾಗಿದೆ. ಆದ್ದರಿಂದ ಇಂದು ಇದರ ವಿವರಣೆ ಅತ್ಯಗತ್ಯವಾಗಿದೆ. ಭಾರತೀಯರ ಆಳವಾದ ಜ್ಞಾನವೆಷ್ಟಿತ್ತೆಂಬುದನ್ನು ತಿಳಿಯಲು ಈ ವಿವರಣೆಯು ಪ್ರೇರಕವೂ ಪೂರಕವೂ ಆಗಿದೆ. ಒಬ್ಬ ಮನುಷ್ಯನ ವಿಳಾಸವು ಕೇವಲ ಒಂದು ಹಳ್ಳಿಗೆ, ಪ್ರದೇಶಕ್ಕೆ ಹೆಚ್ಚೆಂದರೆ ಒಂದು ದೇಶಕ್ಕೆ ಸೀಮಿತವೆಂಬುದು ಇಂದಿನ ಕಲ್ಪನೆ. ಆದರೆ ಅಂದು ಸರ್ವಾತ್ಮಭಾವವುಳ್ಳ ಭಾರತೀಯರು ಆಲೋಚಿಸಿದ ವಿಷಯ-ರೀತಿಗಳೇ ಬೇರೆ. ಅವರುಗಳು ಯಾವುದೇ ಕರ್ಮವನ್ನು ಮಾಡಬೇಕಾದರೂ ಮಹಾಸಂಕಲ್ಪದ ಮೂಲಕ ಇಡೀ ಸೃಷ್ಟಿಯು ಪ್ರಾರಂಭವಾದ ಬಗೆಯಿಂದ ಹಿಡಿದು ಸೃಷ್ಟಿಯಲ್ಲಿರುವ ಅನೇಕ ಲೋಕಗಳಲ್ಲಿ ತಮ್ಮ ಸ್ಥಾನವನ್ನು ನಿರ್ದೇಶಿಸುವವರೆಗೆ ಮತ್ತು ಸೃಷ್ಟಿಯು ಪ್ರಾರಂಭವಾದ ಘಳಿಗೆಯಿಂದ ಗಣನೆಮಾಡುವ ಕಾಲಮಾನದಲ್ಲಿ ತಾವು ಕರ್ಮ ಮಾಡುತ್ತಿರುವ ಮುಹೂರ್ತದವರೆಗೆ ಎಲ್ಲವನ್ನೂ ಗಣನೆಗೆ ತೆಗೆದುಕೊಂಡು ಪ್ರಕೃತ ಮುಹೂರ್ತವನ್ನು ನಿರ್ದೇಶಿಸುವವರೆಗೆ, ತಾವು ಜನ್ಮ ತಾಳಿದ ಪವಿತ್ರ ಭಾರತ ಭೂಮಿಯನ್ನು, ವಿಧವಿಧವಾಗಿ ಇರುವ ಪುಣ್ಯ ನಗರಿ, ನದಿ, ಪರ್ವತಗಳೇ ಮುಂತಾದ ಪುಣ್ಯ ಪ್ರದೇಶಗಳನ್ನು ಮತ್ತು ಅಲ್ಲಿದ್ದ ವಿಭೂತಿ ತಪಸ್ವಿಗಳು, ಆಳಿದ ಚಕ್ರವರ್ತಿಗಳು, ಬಾಳಿದ ಮಹಾ ಪತಿವ್ರತೆಯರು ಮುಂತಾದ ಮಹಾನುಭಾವ ಚೇತನಗಳನ್ನು ಸ್ಮರಿಸುವುದರ ಮೂಲಕ ತಮ್ಮ ಸ್ಥಾನವನ್ನು ಗುರುತಿಸಿಕೊಂಡು ಅನಂತರ ಕರ್ಮಗಳನ್ನು ಪ್ರಾರಂಭಿಸುತ್ತಿದ್ದರು.

ಅದರೆ ಇಂದಿಗೂ ಬಹಳಷ್ಟು ಭಾರತೀಯರು ತಾವು ಮಾಡುವ ವಿವಾಹವೇ ಮುಂತಾದ ಶುಭಕರ್ಮಗಳನ್ನು ಪ್ರಾರಂಭಿಸುವ ಮೊದಲು ಪುರೋಹಿತರುಗಳು ಪಠಿಸುವ ಮಹಾಸಂಕಲ್ಪವನ್ನು ಭಕ್ತಿಯಿಂದ ಶ್ರವಣಮಾಡಿ ಅದರಂತೆಯೇ ತಾವೂ ಸಹ ಸಂಕಲ್ಪಿಸುತ್ತಾರೆ.

ವಿವರಣೆಯಿಲ್ಲದ ಆಚರಣೆಯಿಂದಾಗಿ ಇಂದು ಸಂಪ್ರದಾಯದಲ್ಲಿ ಪದ್ಧತಿಗಳು ಅನೂಚಾನವಾಗಿ ಬಂದಿದ್ದರೂ ಭಾರತೀಯ ಸಂಸ್ಕೃತಿಯು ಪ್ರಪಂಚದಲ್ಲೇ ಅತ್ಯುನ್ನತವಾದ ತನ್ನ ಮಟ್ಟವನ್ನು ಕೀಳುಮಾಡಿಕೊಳ್ಳುತ್ತಿರುವುದು ಶೋಚನೀಯಸಂಗತಿಯಾಗಿದೆ. ಅತ್ಯದ್ಭುತವಾದ ಈ ಮಹಾಸಂಕಲ್ಪ ವಿವರಣೆಯನ್ನು ಪೂರ್ಣವಾಗಿ ತಿಳಿಯಲು ಭಾರತೀಯರ ಅಗಾಧವಾದ ಬೃಹತ್ ಸಾಹಿತ್ಯವನ್ನು ಅಧ್ಯಯನ ಮಾಡಬೇಕಾದ ಅಗತ್ಯವಿದೆ. ಪೂರ್ಣವಾಗಿ

shrinath.udupa@gmail.com

ತಿಳಿಸಬೇಕಾದರೆ ಒಂದು ಬೃಹತ್ ವಿಶ್ವಕೋಶವನ್ನೇ ತರಬೇಕಾಗುತ್ತದೆ. ಆದರೂ ಈ ಚಿಕ್ಕ ಗ್ರಂಥದಲ್ಲಿ ತಿಳಿದಿರುವಷ್ಟು ವಿಚಾರವನ್ನು ಸಹ ಪೂರ್ಣವಾಗಿ ತಿಳಿಸುವಲ್ಲಿನ ಅಶಕ್ತತೆ ಅನೇಕ ಕಾರಣಗಳಿಂದ ಅನಿವಾರ್ಯವಾಗಿದೆ; ಸ್ಥಳಸಂಕೋಚವೂ ಒಂದು ಮುಖ್ಯ ಕಾರಣವಾಗಿದೆ. ಓದುಗರು 'ಹಂಸಕ್ಷೀರ'ನ್ಯಾಯದಂತೆ ಇಲ್ಲಿರುವ ವಿವರಣೆಯನ್ನು ಸ್ವೀಕರಿಸುವರೆಂಬ ನಂಬಿಕೆಯಿಂದ ಧೈರ್ಯ ವಹಿಸಿ ಇದನ್ನು ಅವರ ಮುಂದಿಡುವ ಪ್ರಯತ್ನವಿದಾಗಿದೆ. ವಿವರಣೆಗಾಗಿ ಕೆಲವು ಕ್ರಮಗಳನ್ನು ಅವು ಮೆಚ್ಚುವಂತಹವಲ್ಲವಾಗಿದ್ದರೂ- ಅನಿವಾರ್ಯವಾಗಿ ಅನುಸರಿಸಲಾಗಿದೆ.

ಸಾಮಾನ್ಯವಾಗಿ ಪ್ರಚಾರದಲ್ಲಿರುವ ಸಾಹಿತ್ಯದಿಂದ ತಿಳಿಯಬಹುದಾದ ವಿಚಾರಗಳು, ವಿವರಣೆಗೆ ಕ್ಲಿಷ್ಟವಾದ ಮತ್ತು ಅನೇಕ ರೀತಿಯ ಅಭಿಪ್ರಾಯಗಳಿರುವ ಪ್ರಸಂಗಗಳು, ಇಲ್ಲಿ ವಿವರಿಸಲಾಗದಷ್ಟು ಬೃಹತ್ತಾಗಿ ಅಧ್ಯಯನ ಮಾಡಬೇಕಾದ ಪ್ರಸಂಗಗಳು - ಇಂತಹ ಕೆಲವು ಸಂದರ್ಭದಲ್ಲಿ ಸಮಯೋಚಿತವಾದ ಅಲ್ಪ ವಿವರಣೆಗಳನ್ನು ಮಾತ್ರ ಕೊಡಲಾಗಿದೆ.

ಆದರೆ ಭಾರತೀಯ ಸಂಸ್ಕೃತಿಯ ಪ್ರಜ್ಞೆ, ದೇಶಾಭಿಮಾನ, ಧಾರ್ಮಿಕ ಅನುಷ್ಠಾನಗಳಿಗೆ ಸಹಾಯವಾಗುವಂತಹ ಮಾಹಿತಿ- ಇಂತಹ ವಿಚಾರಗಳ ಬಗ್ಗೆ ಸಾಧ್ಯವಾದಷ್ಟು ವಿವರಣೆ ನೀಡಲಾಗಿದೆ. ಸಂದರ್ಭಕ್ಕೆ ತಕ್ಕಂತೆ ಗ್ರಂಥವನ್ನು ತರಬೇಕಾಗಿರುವುದರಿಂದ ಈ ಸೂತ್ರವನ್ನು ಅನುಸರಿಸಿ ಭಕ್ತಿಯಿಂದ ಓದುಗರಿಗೆ ಸಮರ್ಪಿಸಲಾಗಿದೆ. ಮಹಾಸಂಕಲ್ಪದಲ್ಲಿ ಪಾಠಭೇದಗಳಿವೆ. ಪ್ರಕೃತ ಶ್ರೀ ನೃಸಿಂಹ ಪ್ರಯೋಗ ಪಾರಿಜಾತ ಆಶ್ವಲಾಯನ ಪೂರ್ವಪ್ರಯೋಗದಲ್ಲಿರುವ ಪಾಠವನ್ನು ವಿವರಣೆಗಾಗಿ ತೆಗೆದುಕೊಳ್ಳಲಾಗಿದೆ (ಋಗ್ವೇದ ಪ್ರಯೋಗದೀಪಿಕಾ - ವೇ| ಬ್ರ| ಶ್ರೀ| ಧಾಳೀ ಲಕ್ಷ್ಮೀನರಸಿಂಹ ಭಟ್ಟರು).

ಈ ವಿವರಣ ಗ್ರಂಥದ ಕರಡುಪ್ರತಿಯ ಪ್ರತಿ ಪಂಕ್ತಿಯನ್ನೂ ಬಿಡದೇ ಓದಿ ಸಲಹೆಗಳನ್ನು ಕೊಟ್ಟು ಉತ್ತೇಜಿಸಿ ಆಶೀರ್ವಚನಗಳನ್ನು ಅನುಗ್ರಹಿಸಿರುವ ಪೂಜ್ಯರಾದ ಶ್ರೀ ಶ್ರೀ ರಂಗಪ್ರಿಯ ಮಹಾದೇಶಿಕ ಸ್ವಾಮಿಗಳವರಿಗೆ ಭಕ್ತಿಪೂರ್ವಕ ಸಾಷ್ಟಾಂಗ ನಮಸ್ಕಾರಗಳನ್ನು ಅರ್ಪಿಸುತ್ತೇವೆ. ಈ ಗ್ರಂಥವನ್ನು ಪ್ರಕಟಿಸಿರುವ ತುರುವೇಕೆರೆಯ (ತುಮಕೂರು ಜಿಲ್ಲೆ) ಸುರಭಿ ಸಂಗಮ ಹಾಗೂ ಮಂಗಳೂರಿನ ಜ್ಞಾನಭಾರತಿ ಪ್ರಕಾಶನ ಸಂಸ್ಥೆಗಳಿಗೆ ಕೃತಜ್ಞತೆಗಳು. ಈ ಗ್ರಂಥದ ಅಕ್ಷರ ಜೋಡಣೆ ಹಾಗೂ ಮುಖಪುಟವಿನ್ಯಾಸವನ್ನು ರೂಪಿಸಿದ ಶ್ರೀ ಸುನೀಲ ಕುಲಕರ್ಣಿ, ಅಕ್ಷರೋದ್ಯಮ, ಮಂಗಳೂರು ಇವರಿಗೂ ಕೃತಜ್ಞರಾಗಿರುತ್ತೇವೆ.

ಟಿ. ಎಸ್. ಪ್ರಭಾಕರ
ಕಡೂರು

ಚಂ. ಸತ್ಯನಾರಾಯಣ
ಶಂಕರಪುರ, ಬೆಂಗಳೂರು - 4



19-೦೬-2007

# ಮಹಾಸಂಕಲ್ಪಃ

ದೇವಲ ಉವಾಚ

ಮಹಾದಾನೇಷು ಯಜ್ಞಾದೌ ಪ್ರಾಯಶ್ಚಿತ್ತೇಷು ಕರ್ಮಸು|
ಕನ್ಯಾದಾನೇ ನದೀಸ್ನಾನೇ ಮಹಾಸಂಕಲ್ಪಮಾಚರೇತ್ ||

ಮರೀಚಿರುವಾಚ ||

ಕನ್ಯಾದಾನೇ ನದೀಸ್ನಾನೇ ತುಲಾದಾನಾದಿಷು ದ್ವಿಜಃ |
ಪ್ರಾಯಶ್ಚಿತ್ತೇಷು ಯಜ್ಞಾದೌ ವ್ರತಾದಿಷು ವಿಶೇಷತಃ ||
ಏತದಾದಿಷು ಸರ್ವತ್ರ ಮಹಾಸಂಕಲ್ಪಮಾಚರೇತ್ |
ಕೃತ್ವಾ ಯತ್ಕುರುತೇ ಕರ್ಮ ತದಾನನ್ತ್ಯಾಯ ಕಲ್ಪತೇ || ಇತಿ ||

ಸಙ್ಕಲ್ಪ ಪ್ರಕಾರ :-

ಅಸ್ಯ ಶ್ರೀ ಭಗವತೋ ಮಹಾಪುರುಷಸ್ಯ, ಅನಿವಾರ್ಯವೀರ್ಯಸ್ಯ, ಅಖಿಲಲೋಕಪರಿಪಾಲನ-ಪರಾಯಣಸ್ಯ, ಆದಿನಾರಾಯಣಸ್ಯ, ನಿತ್ಯನಿರುಪಮ ನಿರವಧಿಕಾಪ್ರಮೇಯಮಹಿಮ ಮಹಿತ ಮಾಯಾಶಕ್ತ್ಯಾ- ಭ್ರಿಯಮಾಣ ಮಹಾಜಲೌಘಮಧ್ಯೇ ಪರಿಭ್ರಮತಾಂ ಕ್ರಮಾದ್ದಶಗುಣೋತ್ತರೈರಪ್ತೇಜೋ - ವಾಯ್ವಾಕಾಶಾಹಂಕಾರ ಮಹದವ್ಯಕ್ತಾತ್ಮಕ - ಸಪ್ತಾವರಣೈಃ ಪರಿವೇಷ್ಟಿತಾನಾಂ ಅನೇಕಕೋಟಿಬ್ರಹ್ಮಾಂಡಾನಾಂ ಏಕತಮೇ ಅಸ್ಮಿನ್ಮಹತಿ ಬ್ರಹ್ಮಾಂಡಮಂಡಲೇ ಆದಿಶಕ್ತಿ ಕೂರ್ಮ ವರಾಹಾನಂತೋಪರಿಭಾಗ ಪ್ರತಿಷ್ಠಿತಾನಾಂ,[1]

ಅತಲ ವಿತಲ ಸುತಲ ತಲಾತಲ ರಸಾತಲ ಮಹಾತಲ ಪಾತಾಲಾಖ್ಯ ಸಪ್ತಲೋಕಾನಾಮೂರ್ಧ್ವಭಾಗೇ,[2]

ಭುವರ್ಲೋಕ ಸುವರ್ಲೋಕ ಮಹೋಲೋಕ ಜನೋಲೋಕ ತಪೋಲೋಕ ಸತ್ಯಲೋಕಾಖ್ಯ ಷಡ್ಲೋಕಾನಾಮಧೋಭಾಗೇ,[3]

shrinath.udupa@gmail.com

ಐರಾವತ ಪುಂಡರೀಕ ವಾಮನ ಕುಮುದಾಂಜನ ಪುಷ್ಪದಂತ ಸಾರ್ವಭೌಮ ಸುಪ್ರತೀಕಾಖ್ಯ ಅಷ್ಟದಿಗ್ವೇತಂಡ ಶುಂಡಾದಂಡೋತ್ತಂಭಿತೇ,[4]

ಅಯೋಧ್ಯಾ ಮಥುರಾ ಮಾಯಾ ಕಾಶೀ ಕಾಂಚ್ಯವಂತೀ ದ್ವಾರವತ್ಯಶೋಕವತೀ ಭೋಗವತೀ ಸಿದ್ಧವತ್ಯಮರಾವತೀ ತೇಜೋವತೀ ಸಂಯಮಿನೀ ರಕ್ಷೋವತೀ ಸಿಂಧುಮತೀ ಗಂಧವತ್ಯಲಕಾವತೀ ಯಶೋವತೀ ಪ್ರಭೃತ್ಯನೇಕ ಪುಣ್ಯಪುರೀವಿರಾಜಿತೇ,[5]

ಇಂದ್ರಾಗ್ನಿ ಯಮ ನಿರ್ಋತಿ ವರುಣ ವಾಯು ಕುಬೇರೇಶಾನಾಖ್ಯಾಷ್ಟದಿಕ್ಪಾಲಪಾಲಿತೇ,[6]

ಅನಲಾನಿಲಪ್ರತ್ಯೂಷ ಪ್ರಭಾಸ ದ್ರೋಣ ಸೋಮಾಧ್ವರ ಧ್ರುವಾಖ್ಯಾಷ್ಟವಸು ವಿರಾಜಿತೇ,[7]

ಸೂರ್ಯ ಚಂದ್ರಾಂಗಾರಕ ಬುಧ ಬೃಹಸ್ಪತಿ ಶುಕ್ರ ಶನೈಶ್ಚರ ರಾಹುಕೇತ್ವಾಖ್ಯ ನವಗ್ರಹ ಪರಿಪಾಲಿತೇ,[8]

ಆವಹ ನಿವಹ ಸಂವಹಾನುವಹ ಪ್ರವಹೋದ್ವಹ ಪರಿವಹಾಖ್ಯ ಸಪ್ತಮರುತ್ಸಂಚಾರ ಸಂಜೀವಿತ ಜೀವನಿಕುರುಂಬೇ,[9]

ವಿಂಧ್ಯಾರಣ್ಯ ದಂಡಕಾರಣ್ಯ ಚಂಪಕಾರಣ್ಯ ಶ್ವೇತಾರಣ್ಯ ನೈಮಿಷಾರಣ್ಯ ದ್ವೈತಾರಣ್ಯ ಗುಹಾರಣ್ಯ ದೇವದಾರುವನೇಕ್ಷುವನ ಕದಳಿಕಾವನಾಖ್ಯ ದಶಾರಣ್ಯ ಪರಿಮಂಡಿತೇ,[10]

ಶಿವ ಶಂಭು ಪಿನಾಕಿ ಗಿರೀಶ ಹರ ಸ್ಥಾಣು ಭರ್ಗ ಭೈರವ ಸದಾಶಿವ ಕಪಾಲೀಶ್ವರಾಖ್ಯೈಕಾದಶರುದ್ರ ವಿದ್ಯೋತಿತೇ,[11]

ಮಿತ್ರಾರ್ಯಮ ತ್ವಷ್ಟೃ ಧಾತೃ ವಿವಸ್ವದರುಣ ಭಗಾಂಶುಮದಿಂದ್ರ ಪರ್ಜನ್ಯ ವಿಷ್ಣು ಪೂಷಾಖ್ಯ ದ್ವಾದಶಾದಿತ್ಯ ಪ್ರಕಾಶಿತೇ,[12]

ಭಿಂಡಿವಾಲ ದಂಡ ಭುಶುಂಡೀ ನಳಿಕ ಮುಸಲ ಚಕ್ರ ಲವಿತ್ರ ಕಾಳರಾತ್ರಿ ದ್ರುಘಣ ಬಾಣ ಸ್ಥೂಣಶಕ್ತಿ ತೋಮರ ಪರಿಘ ಪಟ್ಟಿಸಮೌಷ್ಟಿಕ ಕುಂತ ದಶಕಂಟಕ ಪ್ರಾಸ ಪಾಶ ಮುದ್ಗರ ಶತಘ್ನೀಸೀರ ಗದಾ ಗೋಶೀರ್ಷ ಮಯೂಖೀಯಾಪನ ಪಿನಾಕಾಸಿ ಧೇನು ಕಾಸ್ತ್ರರೇಖಾ ಹಸ್ತಾಮುಕ್ತ ವಜ್ರಾಖ್ಯ ದ್ವಾತ್ರಿಂಶದಾಯುಧಮಂಡಲ ಮಂಡಿತೇ,[13]



ದೋರ್ದಂಡ ಶ್ರೀರಾಮ ಜಾಮದಗ್ನ್ಯ ದಿಲೀಪಾಂಗಗಯಾಂಬರೀಷ ಶಶಬಿಂದು ಶಿಬಿ ಮಾಂಧಾತೃ ಮರುತ್ತ ಭರತ ಯಯಾತಿ ಪೃಥು ಭಗೀರಥ ರಂತಿದೇವ ಸುಹೋತ್ರಾಖ್ಯ ಷೋಡಶ ಭೂಪಾಲ ಪಾಲಿತೇ,[14]

ವಿಶಾಲಾಕ್ಷೀ ಮೀನಾಕ್ಷೀ ಕಾಮಾಕ್ಷೀ ಸಿಂಹಿಕಾ ಶಂಕರೀ ಕುಬ್ಜಿಕಾ ಮಹಾಲಕ್ಷ್ಮೀ ಮಹಾದೇವೀ ಮಹಾಕಾಳೀ ಪಾರ್ವತೀ ಸುಪ್ರಭಾ ಭ್ರಮರಾಂಬಿಕಾ ವಿಂಧ್ಯವಾಸಿನೀ ಯೋಗಿನೀ ಹಿಮರೂಪಿಣೀ ಮಾಣಿಕ್ಯದೇವೀ ಕಾದ್ರವೇಯೀ ಪೂರ್ಣಿಕಾಖ್ಯಾಷ್ಟಾದಶ ದೇವೀಪೀಠಸಮಲಂಕೃತೇ,[15]

ಯಮ ನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧ್ಯಾನ ಧಾರಣ ಸಮಾಧ್ಯಷ್ಟಾಂಗ ಯೋಗನಿಷ್ಠಾಗರಿಷ್ಠ,[16]

ವಸಿಷ್ಠ ವಾಲಖಿಲ್ಯ ವಿಶ್ವಾಮಿತ್ರ ವಾಲ್ಮೀಕಿ ಜಮದಗ್ನಿ ಚ್ಯವನ ದುರ್ವಾಸಃ ಕಪಿಲ ಮೌದ್ಗಲ್ಯ ಕೌಂಡಿನ್ಯ ಕಶ್ಯಪ ಗಾರ್ಗ್ಯ ಗೌತಮಾಂಗಿರಸ ದಕ್ಷಪರಾಶರ ಜೈಮಿನಿ ಪತಂಜಲಿ ಕಣ್ವ ಬೋಧಾಯನಾಶ್ವಲಾಯನ ಕಾತ್ಯಾಯನ ದ್ರಾಹ್ಯಾಯಣ ವೈಶಂಪಾಯನಾಪಸ್ತಂಬ ಜಾಬಾಲಿ ಮಾರ್ಕಂಡೇಯ ಮಾಂಡವ್ಯ ಭರದ್ವಾಜ ಸನಕ ಸನಂದನ ಸನತ್ಕುಮಾರ ಸನತ್ಸುಜಾತಾಗಸ್ತ್ಯ ಶೌನಕಾದ್ಯನೇಕ ಮುನಿರಾಜವಿರಾಜಿತೇ,[17]

ಮಲಯ ಮಹೇಂದ್ರ ಸಹ್ಯಶುಕ್ತಿಮದೃಕ್ಷವದ್ವಿಂಧ್ಯ ಪಾರಿಯಾತ್ರಾಖ್ಯ ಸಪ್ತಕುಲಾಚಲವಲಯಿತೇ,[18]

---

ಪಾಠಾಂತರ : 17) ಅನೇಕ ಮುನಿ ವಿರಾಜಿತೇ :

ವಸಿಷ್ಠ, ವಿಶ್ವಾಮಿತ್ರ, ಗೌತಮ, ಪುಲಸ್ತ್ಯ, ಪುಲಹ, ಅತ್ರಿ, ಭರದ್ವಾಜ, ಭೃಗು, ಜಮದಗ್ನಿ, ಚ್ಯಾವನ, ವಾಲ್ಮೀಕಿ, ದುರ್ವಾಸ, ಕಪಿಲ, ದೇವಲ, ಮೌದ್ಗಲ್ಯ, ಕೌಂಡಿನ್ಯ, ಮರೀಚಿ, ಕಶ್ಯಪ, ಗಾರ್ಗ್ಯ, ಅಂಗಿರಸ, ದಕ್ಷ, ನಾರದ, ಪರ್ವತ, ಪರಾಶರ, ಪಾರಾಶರ್ಯ, ವ್ಯಾಸ, ಜೈಮಿನಿ, ಪತಂಜಲಿ, ಕಣ್ವ, ಬೋಧಾಯನ, ಆಶ್ವಲಾಯನ, ಕಾತ್ಯಾಯನ, ದ್ರಾಹ್ಯಾಯಣ, ವೈಶಂಪಾಯನ, ಆಪಸ್ತಂಭ, ಜಾಬಾಲಿ, ಮಾರ್ಕಂಡೇಯ, ಮಾಂಡವ್ಯ, ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತ, ಅಗಸ್ತ್ಯ, ಶೌನಕಾದ್ಯನೇಕ ಮುನಿವಿರಾಜಿತೇ.

ಪಾಠಾಂತರ : 18)

ತುಹಿನಾಚಲ ಹೇಮಕೂಟ ನಿಷಧ ನೀಲ ಶ್ವೇತ ಶೃಂಗ ಗಂಧಮಾದನ ಪಾರಿಯಾತ್ರಾಖ್ಯ ಅಷ್ಟಸೀಮಾಚಲೈರ್ವಿಭಕ್ತೇ - ಮಹೇಂದ್ರ ಮಲಯ ಸಹ್ಯಶುಕ್ತಿಮದೃಕ್ಷ ವಿಂಧ್ಯ ಪಾರಿಯಾತ್ರಾಖ್ಯ [illegible] ವಲಯಿತೇ.

shrinath.udupa@gmail.com

ಋಷ್ಯಮೂಕ ಮತಂಗ ಕಿಷ್ಕಿಂಧಮಾಲ್ಯವದ್ಧಿರಣ್ಯ ಶೃಂಗಾಖ್ಯ ಪಂಚ ಮಹಾನಗಸಮಧಿಷ್ಠಿತೇ,[19]

ಲವಣೇಕ್ಷು ಸುರಾಸರ್ಪಿರ್ದಧಿ ಕ್ಷೀರ ಶುದ್ಧೋದಕಾಖ್ಯ ಸಪ್ತಸಮುದ್ರಸಂವೃತೇ[20]

ವೇದವೇದಾಂಗೇತಿಹಾಸಾಗಮ ನ್ಯಾಯ ಕಾವ್ಯಾಲಂಕಾರ ನಾಟಕ ಗಾನ ಕವಿತ್ವ ಕಾಮಶಾಸ್ತ್ರ ದ್ಯೂತನೈಪುಣ್ಯ ದೇಶಭಾಷಾಜ್ಞಾನ ಲಿಪಿಕರ್ಮ ವಾಚನ ಸಮಸ್ತಾವಧಾನ ಸ್ವರಶಾಸ್ತ್ರ ಶಕುನ ಸಾಮುದ್ರಿಕ ರತ್ನಪರೀಕ್ಷಾ ಸ್ವರ್ಣಪರೀಕ್ಷಾಶ್ವಲಕ್ಷಣ ಗಜಲಕ್ಷಣ ಮಲ್ಲವಿದ್ಯಾ ಪಾಕಕರ್ಮ ದೋಹಲ ಗಂಧವಾದ ಧಾತುವಾದ ಖನಿವಾದ ರಸವಾದಾಽಗ್ನಿಸ್ತಂಭ ಜಲಸ್ತಂಭ ವಾಯುಸ್ತಂಭ ಖಡ್ಗಸ್ತಂಭ ವಶ್ಯಾಕರ್ಷಣ ಮೋಹನ ವಿದ್ವೇಷಣೋಚ್ಚಾಟನ ಮಾರಣಕಾಲವಂಚನ ವಾಣಿಜ್ಯ ಪಾಶುಪಾಲ್ಯ ಕೃಷ್ಯಾನವಕರ್ಮ ಲಾವುಕಯುದ್ಧ ಮೃಗಯಾ ರತಿಕೌಶಲಾ ದೃಶ್ಯಕರಣೀದ್ಯೂತಕರಣೀ ಚಿತ್ರಲೋಹ ಪಾಷಾಣ ಮೃದ್ದಾರುವೇಣು ಚರ್ಮಾಂಬರಕ್ರಿಯಾ ಚೌರ್ಯೌಷಧಸಿದ್ಧಿ ಮಂತ್ರಸಿದ್ಧಿ ಸ್ವರವಂಚನಾ ದೃಷ್ಟಿವಂಚನಾಂಜನ ಜಲಪ್ಲವನ ವಾಕ್ಸಿದ್ಧಿ ಘುಟಿಕಾಸಿದ್ಧಿ ಪಾದುಕಾಸಿದ್ಧೀಂದ್ರಜಾಲ ಮಹೇಂದ್ರಜಾಲಾಖ್ಯ ಚತುಷ್ಷಷ್ಟಿವಿದ್ಯಾ ನಿಷದ್ಯಾಯಮಾನ ನಿರವದ್ಯ ವಿದ್ವಜ್ಜನ ವಿದ್ಯೋತಿತೇ,[21]

ಪಾಠಾಂತರ : 21 1. ಗೀತಾ (ಹಾಡುಗಾರಿಕೆ), 2. ವಾದ್ಯ (ವಾದ್ಯಗಳನ್ನು ನುಡಿಸುವುದು), 3. ನೃತ್ಯ (ನರ್ತಿಸುವುದು), 4. ಆಲೇಖ್ಯ (ಚಿತ್ರಗಳನ್ನು ರಚಿಸುವುದು), 5. ವಿಶೇಷಕಚ್ಛೇದ್ಯ (ಹಣೆಯ ಮೇಲೆ ತೊಡಲು ಆಗುವಂತೆ ವಿವಿಧಾಕೃತಿಗಳಲ್ಲಿ ಎಲೆ ಬಿಡಿಸುವುದು), 6. ತಂಡುಲ ಕುಸುಮ ಬಲಿವಿಕಾರ (ಪೂಜೆಗಾಗಿ ಅಕ್ಕಿ ಮತ್ತು ಹೂಗಳನ್ನು ಜೋಡಿಸುವುದು), 7. ಪುಷ್ಪಾಸ್ತರಣ (ಮನೆಯನ್ನೂ ಹೂಗಳಿಂದ ಅಲಂಕರಿಸುವುದು), 8. ದಶನವಸನಾಂಗರಾಗ (ಹಲ್ಲುಗಳಿಗೂ-ಬಟ್ಟೆಗಳಿಗೂ ಮತ್ತು ಶರೀರಕ್ಕೂ ಬಣ್ಣಗಳನ್ನು ಹಚ್ಚುವುದು), 9. ಮಣಿಭೂಮಿಕಾ ಕರ್ಮ (ರತ್ನಜಡಿತವಾದ ನೆಲಗಟ್ಟು ಮಾಡುವುದು; ಮೊಸಾಯಿಕ್ ಕೆಲಸ. 'ಗೊಂಬೆಗಳನ್ನು ಮಾಡುವುದು' ಎಂದೂ ಅರ್ಥೈಸಿದೆ.), 10. ಶಯನರಚನ (ಹಾಸಿಗೆಗಳನ್ನು ಮಾಡುವುದು), 11. ಉದಕವಾದ್ಯ (ಮುರಜ ಮೊದಲಾದುದರ ದನಿಯಾಗುವಂತೆ ನೀರಿನ ಮೇಲೆ ಬಾರಿಸುವುದು), 12. ಉದಕಾಘಾತ (ಜಲಕ್ರೀಡೆಯಲ್ಲಿ ನೀರನ್ನು ಬೊಗಸೆಗಳಲ್ಲಿ ತುಂಬಿ ಇತರರಿಗೆ ಬಲವಾಗಿ ಎರಚುವುದು),13. ಚಿತ್ರಾಯೋಗ (ಮದ್ದು ಮೂಲಿಕೆಗಳಿಂದ, ಔಷಧಿಗಳಿಂದ, ಮಂತ್ರಗಳಿಂದ ಬೇರೆಯವರು ಕೃಶಕಾಯರೂ, ಅಕಾಲಿಕವಾಗಿ, ತಲೆ ನರೆತವರೂ ಹುಚ್ಚರೂ ಮುಂತಾಗಿ ಆಗುವಂತೆ ಮಾಡುವುದು), 14. ಮಾಲ್ಯಗ್ರಥನ ವಿಕಲ್ಪ (ಹಲವು ರೀತಿಗಳಲ್ಲಿ ಹೂವಿನ ಹಾರವನ್ನು ಕಟ್ಟುವುದು), 15. ಶೇಖರ ಕಾಪೀಡ ಯೋಜನ (ಉಚಿತವಾದ ಸ್ಥಳಗಳಲ್ಲಿ ಶಿರೋಭೂಷಣವಾಗಿ ಶೇಖರಕ ಮತ್ತು ಆಪೀಡಕ ಎಂಬೆರಡು ರೀತಿಯ ಆಭರಣಗಳನ್ನು ಧರಿಸುವುದು), 16. ನೇಪಥ್ಯ ಪ್ರಯೋಗ (ತಾನು ವಸ್ತ್ರಾಲಂಕಾರ ಮಾಡಿಕೊಳ್ಳುವುದು ಅಥವಾ ಇತರರಿಗೆ ಮಾಡುವುದು), 17. ಕರ್ಣಪತ್ರಭಂಗ (ದಂತ ಮೊದಲಾದವುಗಳಿಂದ ಕರ್ಣಾಭರಣಗಳನ್ನು ಮಾಡುವುದು), 18. ಗಂಧಯುಕ್ತಿ (ಪರಿಮಳ ದ್ರವ್ಯಗಳ ತಯಾರಿಕೆ), 19. ಭೂಷಣ ಯೋಜನ (ಆಭರಣಗಳನ್ನು ಮಾಡುವುದು), 20. ಐಂದ್ರಜಾಲಯೋಗ (ಇಂದ್ರಜಾಲದ ವಿಧಾನಗಳು ಎಂದರೆ ಭ್ರಮಾಸೃಷ್ಟಿಯನ್ನು ನಿರ್ಮಿಸುವುದು, ದೇವತೆಗಳು, ಸರ್ಪಗಳು, ಸೈನ್ಯಗಳು ಇತ್ಯಾದಿ), 21. ಕೌಚುಮಾರಯೋಗ (ದೃಢದೇಹಿಯೂ ವೀರ್ಯವಂತನೂ ಆಗಲು ಸಾಧ್ಯವಾಗುವಂತಹ ಕುಚುಮಾರನ ಚಿಕಿತ್ಸಾ ನಿರ್ದೇಶನ), 22. ಹಸ್ತಲಾಘವ (ಎಲ್ಲ ಕೆಲಸಗಳಲ್ಲಿಯೂ ಕೈಗಳ ಎಂದರೆ ಹಸ್ತಗಳ ಚುರುಕು; 'ವ್ಯಕ್ತಿಗಳ ಎದುರಿನಲ್ಲಿಯೇ ಪದಾರ್ಥಗಳನ್ನು ಕದಿಯುವುದು' ಎಂದೂ ಅರ್ಥೈಸಿದ್ದಾರೆ), 23. ವಿಚಿತ್ರ ಶಾಕಯೂಷ ಭಕ್ಷ್ಯವಿಕಾರ ಕ್ರಿಯಾ (ಬಗೆಬಗೆಯ ಕಾಯಿಪಲ್ಯದ ತಯಾರಿಕೆಯನ್ನೂ ಸಾರುಹುಳಿ ಇತ್ಯಾದಿಗಳನ್ನೂ ಭಕ್ಷ್ಯಗಳನ್ನೂ ತಯಾರಿಸುವುದು), 24. ಪಾನಕರಸರಾಗಾಸವಯೋಜನ (ಪಾನಕ ರಸ ಮೊದಲಾದ ಪೇಯಗಳನ್ನು ಸಿದ್ಧ ಮಾಡುವುದು), 25. ಸೂಚಿವಾನ ಕರ್ಮ (ಹೊಲಿಯುವುದು, ನೇಯುವುದು, ಕಸೂತಿ ಹಾಕುವುದು), 26. ಸೂತ್ರ ಕ್ರೀಡಾ (ದಾರಗಳಿಂದ ಆಡುವುದು ಎಂದರೆ ಬೆರಳುಗಳಲ್ಲಿ ದಾರವೊಂದನ್ನು ಹಿಡಿದು ಅದರಿಂದ ಮನೆ, ದೇವಾಲಯ ಇತ್ಯಾದಿ ಸ್ಥೂಲ ರೇಖಾಕೃತಿಗಳನ್ನು ರಚಿಸುವುದು; [illegible]

shrinath.udupa@gmail.com



ಅಂಗ ವಂಗ ಕಳಿಂಗ ಕಾಶ್ಮೀರ ಕಾಂಭೋಜ ಕಾಮರೂಪ ಸೌವೀರ ಸೌರಾಷ್ಟ್ರ ಮಹಾರಾಷ್ಟ್ರ ಬಂಗಾಳ ನೇಪಾಳ ಮಲಯಾಳ ಕೇರಳ ಸಿಂಹಳ ಪಾಂಚಾಲ ಚೋಳ ಕೋಸಲ ಕುಂತಲ ಜ್ವಾಲಾ ಸಾಲ್ವ ಮಗಧ ಮಾಗಧ ಮಾಳವ ಮತ್ಸ್ಯವತ್ಸಮದ್ರ ಮೈಂದ ಸಿಂಧು ಸೈಂಧವಾಂಧ್ರ ಗಾಂಧಾರ ಲಾಟ ವರಾಟ ಕರ್ಣಾಟ ದ್ರವಿಡ ದ್ರಾವಿಡ ಪಾಂಡ್ಯ ಪುಳಿಂದ ಪಾರಶೀಕ ಬಾಹ್ಲೀಕ ಬರ್ಬರ ವಿದರ್ಭ ಕೇಕಯ ಕುರು ಕಿರಾತ ದಶಾರ್ಣ ಹೂಣ ಟೇಂಕಣ ಕೋಂಕಣ ಯವನ ಶೂರಸೇನ ಘೂರ್ಜರ ವಿದೇಹ ಚೇದಿ ಭೋಜಾವಂತ್ಯಾಖ್ಯ ಷಟ್ಪಂಚಾಶದ್ದೇಶ ಸಮಲಂಕೃತೇ,[22]

ಆಕೃತಿಗಳು ಚಲಿಸುವಂತೆ ಮಾಡುವುದು' ಎಂದೂ ಅರ್ಥೈಸಿದ್ದಾರೆ), 27. ವೀಣಾ ಡಮರುಕ ವಾದ್ಯ (ವೀಣೆ ಡಮರುಗ ಮೊದಲಾದ ವಾದ್ಯಗಳನ್ನು ನುಡಿಸುವುದು), 28. ಪ್ರಹೇಲಿಕಾ (ಒಗಟುಗಳು) 29. ಪ್ರತಿಮಾಲಾ (ಒಂದು ಆಟ : ಒಬ್ಬನು ಒಂದು ಶ್ಲೋಕವನ್ನು ಹೇಳುತ್ತಾನೆ ಇನ್ನೊಬ್ಬನು ಅದರ ಅಂತ್ಯಾಕ್ಷರದಿಂದ ಮೊದಲು ಮಾಡಿ ಇನ್ನೊಂದು ಶ್ಲೋಕವನ್ನು ಹೇಳುತ್ತಾನೆ ಹೀಗೆಯೇ ಮುಂದುವರಿಯುತ್ತದೆ ಇದನ್ನು 'ಅಂತ್ಯಾಕ್ಷರಿ' ಎನ್ನುತ್ತಾರೆ), 30. ದುರ್ವಾಚಕಯೋಗ (ಇನ್ನೊಂದು ಆಟ: ಪ್ರತಿಯೊಬ್ಬ ಸ್ಪರ್ಧಿಯೂ ಪುರುಷಾಕ್ಷರಘಟಿತವಾದ ಶ್ಲೋಕಗಳನ್ನು ಹೇಳುವುದು), 31. ಪುಸ್ತಕವಾಚನ (ಪುಸ್ತಕಗಳನ್ನು ಓದುವುದು), 32. ನಾಟಕಾಖ್ಯಾಯಿಕಾದರ್ಶನ (ನಾಟಕಗಳ ಮತ್ತು ಆಖ್ಯಾಯಿಕೆಗಳ ಜ್ಞಾನ), 33. ಕಾವ್ಯ ಸಮಸ್ಯಾ ಪೂರಣ (ಕವಿತೆಯ ರಚನೆ : ಶ್ಲೋಕದ ಕೊನೆಯ ಪಾದವು ಮೊದಲ ಕೊಡಲಾಗಿದ್ದು, ಅದರ ಮೊದಲ ಮೂರು ಪದಗಳನ್ನು ನಾಲ್ಕು ಪಾದಗಳೂ ಕೂಡಿ ಸಮಂಜಸ ಅರ್ಥ ಬರುವಂತೆ- ಆಮೇಲೆ ಸೇರಿಸುವುದು), 34. ಪಟ್ಟಿಕಾವೇತ್ರ ವಾನವಿಕಲ್ಪ (ಬೆತ್ತ ಮತ್ತು ಬಿದಿರುಗಳಿಂದ ಮಂಚಗಳು, ಆಸನಗಳು ಮುಂತಾದ ಬೇರೆ ಬೇರೆ ವಸ್ತುಗಳನ್ನು ಮಾಡುವುದು), 35. ತಕ್ಷ ಕರ್ಮಗಳು (ಚಿನ್ನ ಉಕ್ಕು ಮರ ಮೊದಲಾದುವುಗಳಲ್ಲಿ ಕೆತ್ತನೆ ಕೆಲಸ ಮಾಡುವುದು), 36. ತಕ್ಷ (ಮರಗೆಲಸ), 37. ವಾಸ್ತುವಿದ್ಯಾ (ಗೃಹ ನಿರ್ಮಾಣ ವಿಜ್ಞಾನ), 38. ರೂಪರತ್ನ ಪರೀಕ್ಷಾ (ನಾಣ್ಯಗಳು ಮತ್ತು ರತ್ನಗಳ ಪರೀಕ್ಷೆ ), 39. ಧಾತುವಾದ (ಖನಿಜಗಳ ಮಿಶ್ರಣ, ಶುದ್ಧೀಕರಣ ಇತ್ಯಾದಿ), 40. ಮಣಿರಾಗಕರಜ್ಞಾನ (ಹರಳುಗಳು ಮತ್ತು ರತ್ನಗಳಿಗೆ ಬಣ್ಣ ಹಾಕುವ ವಿಧಾನಗಳ ತಿಳುವಳಿಕೆ ಮತ್ತು ಗಣಿಗಳ ಸ್ಥಳಪರಿಜ್ಞಾನ ಮತ್ತು ಕಾರ್ಯಪರಿವಿಜ್ಞಾನ), 41. ವೃಕ್ಷಾಯುರ್ವೇದಯೋಗ (ಸಸ್ಯಗಳಿಗೆ, ಮರಗಳಿಗೆ ರೋಗವಿಲ್ಲದೆ ಸೊಂಪಾಗಿರುವಂತೆಯೂ, ವಿಶೇಷವಾಗಿ ಅವನ್ನು ಚಿಕ್ಕದು ಅಥವಾ ಎತ್ತರವಾಗಿ ಮಾಡಲು ಸಾಧ್ಯವಾಗುವಂತೆಯೂ ಔಷಧಗಳನ್ನೂ-ಬಳಸುವುದು ಮುಂತಾದ ವಿಧಾನಗಳ ತಿಳುವಳಿಕೆ), 42. ಮೇಷ ಕುಕ್ಕುಟ ಲಾವಕ ಯುದ್ಧವಿಧಿ (ಟಗರು, ಹುಂಜ ಮತ್ತು ಲಾವಗೆಗಳು ಯುದ್ಧ ಮಾಡುವಂತೆ ಮಾಡುವುದು), 43. ಶುಕಸಾರಿಕಾ ಪ್ರಲಾಪನಾ (ಗಂಡು-ಹೆಣ್ಣು ಗಿಳಿಗಳು ಮಾತನಾಡುವಂತೆ ಕಲಿಸುವುದು), 44. ಉತ್ಸಾದನ-ಸಂವಹನ (ಕೇಶಮರ್ದನದಲ್ಲಿ ಹಸ್ತ ಪಾದಗಳಿಂದ ತಲೆ ಮತ್ತು ಶರೀರವನ್ನು ತಿಕ್ಕುವ ಎಂದರೆ ಮರ್ಧಿಸುವ ಕೌಶಲ), 45. ಅಕ್ಷರ ಮುಷ್ಟಿಕಾಕಥನ (ಅಕ್ಷರ ಶ್ರೇಣಿಗಳಿಂದ ಅರ್ಥವನ್ನರಿಯುವುದು ಉದಾ : 'ಮೆವೃಮಿಕಸಿಂಕತು ವೃಧಮಕುಂಮೀ' ಎಂಬ ಅಕ್ಷರ ಶ್ರೇಣಿಯ ಮೇಷಾದಿ ದ್ವಾದಶ ರಾಶಿಗಳನ್ನು ಸೂಚಿಸುತ್ತದೆ.), 46. ಮ್ಲೇಚ್ಛಿತ ವಿಕಲ್ಪ (ಗೂಢಲಿಪಿ ಭಾಷಾ ಭೇದಗಳು ಎಂದರೆ ನಿರ್ದಿಷ್ಟ ವ್ಯಕ್ತಿಗಲ್ಲದೆ ಬೇರೆ ಯಾರಿಗೂ ತಿಳಿಯಲಾಗದ ಭಾಷೆಗಳು), 47. ದೇಶಭಾಷಾ ವಿಜ್ಞಾನ (ನಿಖಿಲ ದೇಶೀಯ ಭಾಷಾ ಪಾಂಡಿತ್ಯ), 48. ಪುಷ್ಪ ಶಕಟಿಕಾ (ಪುಷ್ಪಗಳ ಗಾಡಿ, ಎಂದರೆ ಪ್ರೇಮಪತ್ರಗಳನ್ನಿಟ್ಟು ಕಳುಹಿಸಲು ಹೂಗಳಿಂದ ಗಾಡಿಗಳು, ಕುದುರೆಗಳು, ಆನೆಗಳು, ಪಲ್ಲಕ್ಕಿಗಳು ಇತ್ಯಾದಿಗಳನ್ನು ಮಾಡುವುದು), 49. ನಿಮಿತ್ತಜ್ಞಾನ (ಶುಭ ಮತ್ತು ಅಶುಭ ಶಕುನಗಳ ಜ್ಞಾನ), 50. ಯಂತ್ರ ಮಾತೃಕಾ ( ಸಂಚಾರ ಕಾರ್ಯಕ್ಕಾಗಿ, ಜಲ ಮತ್ತು ಯುದ್ಧೋದ್ಯೋಗಗಳಿಗಾಗಿ ಯಂತ್ರ ನಿರ್ಮಾಣ ಮಾಡುವುದು), 51. ಧಾರಣಾ ಮಾತೃಕಾ (ವಿಷಯಗಳನ್ನು ನೆನಪಿಟ್ಟುಕೊಳ್ಳುವುದು. ಕೈಗಳಲ್ಲಿ ವಸ್ತ್ರ ಮತ್ತು ಇತರ ಪದಾರ್ಥಗಳನ್ನು ಹಿಡಿದುಕೊಳ್ಳುವುದು ಎಂದು ಅರ್ಥೈಸಿದ್ದಾರೆ), 52. ಸಂಪಾಠ್ಯ (ಒಂದು ಆಟ :- ಒಬ್ಬನುಒಂದು ಶ್ಲೋಕವನ್ನು ಹೇಳುತ್ತಾನೆ ಅದನ್ನು ಮತ್ತೊಬ್ಬನು ತನಗೆ ಅಪರಿಚಿತವಾಗಿದ್ದರೂ ಮತ್ತೊಮ್ಮೆ ಯಥಾರೀತಿ ಹೇಳಿ ಒಪ್ಪಿಸಬೇಕು), 53. ಮಾನಸೀ (ಒಂದು ಆಟ :-ಅನುಸ್ವಾರ ವಿಸರ್ಗಗಳನ್ನು ಯಥಾವತ್ತಾಗಿ ಬರೆದು, ಉಳಿದ ಅಕ್ಷರಗಳೆಡೆಯಲ್ಲಿ ಕೇವಲ ಅವುಗಳ ತಲೆಕಟ್ಟು ಕೊಂಬು ಇತ್ಯಾದಿ ಚಿಹ್ನೆಗಳನ್ನು ತೋರಿಸಿ ಒಬ್ಬನು ಒಂದು ಶ್ಲೋಕವನ್ನು ಬರೆಯುತ್ತಾನೆ. ಇನ್ನೊಬ್ಬ ಆಟಗಾರ ಆ ಚಿಹ್ನೆಗಳಿರುವೆಡೆಯಲ್ಲಿ ಉಚಿತವಾದ ಅಕ್ಷರಗಳನ್ನು ಪೂರ್ತಿಯಾಗಿ ಬರೆಯಬೇಕು.), 54. ಕಾವ್ಯಕ್ರಿಯಾ (ಕಾವ್ಯರಚನೆ), 55. ಅಭಿಧಾನಕೋಶ-ಛಂದೋವಿಜ್ಞಾನ (ಶಬ್ದಕೋಶ ಮತ್ತು ಛಂದಶ್ಶಾಸ್ತ್ರಗಳ ಜ್ಞಾನ), 56. ಕ್ರಿಯಾಕಲ್ಪ (ಕಾವ್ಯ ಮತ್ತು ಅಲಂಕಾರ), 57. ಛಲಿತಕ ಯೋಗ (ವಂಚನೆಯ ವಿಧಾನ ಎಂದರೆ ವ್ಯಕ್ತಿಯ ಆಕೃತಿ ಮತ್ತು ಸ್ವರವನ್ನು ಗುರುತು ಹಿಡಿಯಲಾಗದಂತೆ [illegible] ಗುರುತಿಸಲಾಗದೆ ಮತ್ತೊಬ್ಬನ ಕಡೆಗೆ ಮುಂದುವರಿಯುವಂತೆ ಮರೆ ಮಾಡುವುದು), 58. ವಸ್ತ್ರಗೋಪನ (ವಸ್ತ್ರಗಳನ್ನು ತೊಡುವುದರಲ್ಲಿ ಭ್ರಮೋತ್ಪಾದನೆ :- ತುಂಡು ಬಟ್ಟೆಯನ್ನು ತೊಟ್ಟರೂ ತುಂಡು ಬಟ್ಟೆಯೆಂದು ಕಾಣದಂತೆ ಮಾಡುವುದು ಇತ್ಯಾದಿ), 59. ದ್ಯೂತ ವಿಶೇಷ (ಜೂಜಿನ ಹಲವು ವಿಧಗಳು : ದುರೋದರಾದಿ ಕಪಟಕಲಾ ಪ್ರೌಢತ್ವ), 60. ಆಕರ್ಷ ಕ್ರೀಡಾ (ಪಗಡೆಯಿಂದಾಡುವ ಒಂದು ಜೂಜು), 61. ಬಾಲ ಕ್ರೀಡಾ (ಮಕ್ಕಳಿಗಾಗಿ ಚೆಂಡು, ಗೊಂಬೆ, ಇತ್ಯಾದಿ ಆಟಗಳು), 62. ವೈನಕೀಯ ವಿದ್ಯಾ (ವ್ಯಕ್ತಿಯನ್ನು ವಿದ್ಯಾವಂತನನ್ನಾಗಿ ಮಾಡುವ ವಿಜ್ಞಾನ ಮತ್ತು ಕಲೆಯ ತಿಳುವಳಿಕೆ), 63. ವೈಜಯಿಕೀಯ ವಿದ್ಯಾ (ಜಯವನ್ನು ಗಳಿಸಿಕೊಡುವ ವಿದ್ಯೆಗಳ ತಿಳುವಳಿಕೆ), 64. ವ್ಯಾಯಾಮಿಕೀಯ ವಿದ್ಯಾ (ವ್ಯಾಯಾಮ ಅಥವಾ ಅಂಗಸಾಧನೆಯ ವಿದ್ಯೆಗಳ ತಿಳುವಳಿಕೆ)

ಭಾಗೀರಥೀ ಭೀಮರಥೀ ಸರಸ್ವತೀ ಗೌತಮೀ ನರ್ಮದಾ ಯಮುನಾ ಕೃಷ್ಣವೇಣೀ ವೇಣುಕಾ ತುಂಗಭದ್ರಾ ಚಂದ್ರಭಾಗಾ ವರುಣಾ ಮಲಾಪಹಾರಿಣೀ ಕಾವೇರೀ ಕಪಿಲಾ ಕೌಂಡಿನೀ ಕೃತಮಾಲಾ ವಿಪಾಶಾ ತಾಪಿನೀ ಪೂರ್ಣಿಮಾ ತಾಮ್ರಪರ್ಣೀ ವೇಗವತೀ ಹೇಮವತೀ ವೇತ್ರವತೀ ನೇತ್ರವತೀ ವಿಶೋಕಾ ಕೌಶಿಕೀ ಗಂಡಕೀ ಗೋಮುಖೀ ಪಿನಾಕಿನೀ ಪುಣ್ಯದಾದ್ಯನೇಕ ಮಹಾನದೀವಿರಾಜಿತೇ,[23]

ವಾರಾಣಸೀ ಚಿದಂಬರ ಶ್ರೀಶೈಲಾಹೋಬಲ ವೇಂಕಟಾಚಲ ಶ್ರೀರಂಗ ಸೇತುಜಂಬುಕೇಶ್ವರ ಕುಂಭಘೋಣ ಹಾಲಾಸ್ಯ ಗಜಾರಣ್ಯ ಗೋಕರ್ಣ ರಾಮನಾಥ ಪುರಾವರ್ತ ಪುರಾನಂತ ಶಯನಾಮರಗಿರಿ ಯಾದವಗಿರಿ ಕರಿಗಿರಿ ಕಕುದ್ಗಿರಿ ಶ್ವೇತಗಿರಿ ನೀಲಗಿರಿ ಗೋವರ್ಧನಗಿರಿ ಗಯಾ ಪ್ರಯಾಗಾದ್ಯನೇಕ ಪುಣ್ಯಕ್ಷೇತ್ರ ಸಂಯುತೇ[24]

ಹರಿಶ್ಚಂದ್ರ ನಳ ಪುರುಕುತ್ಸ ಪುರೂರವಸ್ಸಗರ ಕಾರ್ತವೀರ್ಯಾಖ್ಯ ಷಟ್ಚಕ್ರವರ್ತಿ ಪರಿಪಾಲಿತೇ,[25]

ಬ್ರಾಹ್ಮೀ ಮಾಹೇಶ್ವರೀ ಕೌಮಾರೀ ವೈಷ್ಣವೀಂದ್ರಾಣೀ ವಾರಾಹೀ ಚಾಮುಂಡಾಖ್ಯ ಸಪ್ತಮಾತೃಕಾ ವಿರಾಜಿತೇ,[26]

ಸಾವಿತ್ರೀ ಸತ್ಯವತೀ ದಮಯಂತೀ ಮದಯಂತೀ ಲೋಪಾಮುದ್ರಾ ಸುಕನ್ಯಾ ಕೇಶಿನೀ ಸುಶೀಲಾನಸೂಯಾರುಂಧತೀ ಪ್ರಭೃತಿ ಮಹಾಪತಿವ್ರತಾ ಸಂದೋಹ ಸಮಲಂಕೃತೇ,[27]

ರಮ್ಯ ರಮಣಕ ದ್ವಾರಕಾ ಸಿಂಹಳ ಕೈವಲ್ಯ ಮಲಯಾಶ್ವ ಭದ್ರಕೇತು ಗೋಭಿಲಾವಂತ್ಯ ಪುಷ್ಕರ ಋಷಭ ರೈವತ ನಿಮ್ಲೋಚನೀ ಯಾಮ್ಯ ಪಾರಾವಾರ ಲಂಕಾ ಸೌರ ಕೃತಮಾಲಾಖ್ಯಾಷ್ಟಾದಶೋಪದ್ವೀಪ ವಿರಾಜಿತೇ,[28]

---

ಪಾಠಾಂತರ : **23)** ಭಾಗೀರಥೀ . . . ಪಿನಾಕಿನೀ ಪುಣ್ಯದಾ ಕುಮಾರಧಾರಾ ಸುವರ್ಣ ಪಯಸ್ವಿನೀ ಶುಕ್ತಿಮತೀ ಚಕ್ಷುಷ್ಮತೀ ಪಾಪನಾಶಿನ್ಯಾದಿ ಮಹಾನದೀ ಪವಿತ್ರತೇ.

ಪಾಠಾಂತರ : **24)** ವಾರಾಣಸೀ ಪ್ರಯಾಗ ಗಯಾ ಪುರುಷೋತ್ತಮಪುರೀ ಶ್ರೀ ಶೈಲಾಹೋಬಲ ವೆಂಕಟಾಚಲ ಘಟಿಕಾಚಲಾರುಣಾಚಲ ವೃದ್ಧಾಚಲ ಹಸ್ತಿಗಿರಿ ಕಾಂಚೀಪುರೀ ಶ್ರೀರಂಗ ಚಿದಂಬರ ಶ್ರೀ ಮುಷ್ಣ ಕುಂಭಘೋಣ ಜಂಬುಕೇಶ್ವರ ಹಾಲಾಸ್ಯತೋದಾದ್ರಿ ಗಜಾರಣ್ಯ ರಾಮನಾಥ ಸೇತು ಕನ್ಯಾಕುಮಾರೀ ವಲ್ಕಲಾನಂತ ಶಯನ ಸುಬ್ರಹ್ಮಣ್ಯ ರಜತಪೀಠಪಾಜಕ ಗೋಕರ್ಣಾವರ್ತ ಪುರಾನರ್ತ ಪುರಾಮರಗಿರಿ ಯಾದವಗಿರಿ ಕರಿಗಿರಿ ಕಕುದ್ಗಿರಿ ನೀಲಗಿರಿ ವಿಮಾನಗಿರಿ ಗೋವರ್ಧನಗಿರಿ ಪ್ರಭೃತ್ಯನೇಕ ಪುಣ್ಯಕ್ಷೇತ್ರ ಪರಿಪಾಲಿತೇ.



shrinath.udupa@gmail.com

ಪಂಚಾಶತ್ಕೋಟಿಯೋಜನ ವಿಸ್ತೀರ್ಣೇಽಸ್ಮಿನ್ ಭೂಮಂಡಲೇ,[29]

ಮಂದರತರ ಚಂದನ ಮಂದಾರ ಕೋವಿದಾರ ಕುಟಜ ವಟ ಪಾಟಲ ಕರವೀರ ಕುರಂಟಕ ಕಂಟಕಿ ಪಿಪ್ಪಿಲ ಕರ್ಪೂರ ಕದಳೀ ಖರ್ಜೂರ ನಾರಿಕೇಳ ರಸಾಲ ತಮಾಲ ತಾಳ ಹಿಂತಾಳ ಕೃತಮಾಲ ಸರಳ ವಕುಳ ವಂಜುಳ ಪುನ್ನಾಗ ಜಂಬೂ ಜಂಬೀರ ನಿಂಬ ಕದಂಬ ಸಾರಂಗ ಲವಂಗ ರುದ್ರಾಕ್ಷೇಕ್ಷು ಕಪಿತ್ಥಾಶ್ವತ್ಥ ಬಿಲ್ವ ಭಲ್ಲಾತಕ ಸಲ್ಲಕೀ ಬದರೀ ಲಕುಚ ಚಂಪಕ ಕೇತಕ ಕುದ್ದಾಲ ಬಂಧೂಕ ಸಿಂಧುವಾರ ಪಿಚುಮಂದೋದುಂಬರ ಪಲಾಶ ಪಾರಿಜಾತಾದ್ಯನೇಕಾನೇಕನಿವಹ ನಿರಂತರ ಮನೋಹರ ನಂದನವನ ವ್ರೀಡಾವಹ ಕ್ರೀಡಾವನ ವಿಹರದ್ದೇವ ದಾನವ ಗರುಡ ಗಂಧರ್ವ ಕಿನ್ನರ ಕಿಂಪುರುಷ ಸಿದ್ಧ ಸಾಧ್ಯ ವಿದ್ಯಾಧರ ಯಕ್ಷ ರಾಕ್ಷಸಾದಿ ದಿವ್ಯಜನ ನಿವಾಸ ಸಮಲಂಕೃತೇ ಶೀತಾಂಭಸಿ,[30]

ಬಿಂದು ಮುಕುಂದ ಮಂದರ ಕಳಿಂಗ ವೈಕಂಕತ ಮಣಿಶೈಲ ಶಕ್ರಶೈಲ ಮಹಾಕಪಿಲ ಮಹಾಶೈಲ ಪಂಚಶೈಲ ಗಜಶೈಲ ಭದ್ರಶೈಲ ವಸುಧಾರವಸುಮಾರ ಕುಮಾರ ಕಾಲಂಜರ ಕೌಂಜರ ಪಾಂಡರ ಪುಷ್ಕರ ವೈಢೂರ್ಯ ಪಾರಿಯಾತ್ರ ಸಹಸ್ರಶಿಖರ ಮಯೂರ ತಾಮ್ರಾಭ ಶಿಖಿವಾಸ ಸುರಸಹಂಸನಾಗ ಕುಮುದ ಮಕುಟ ತ್ರಿಕೂಟ ಕಟು ಶಂಖಕೂಟ ಮಹಾಮೇಘ ಸುಮೇಘ ಸುಗಂಧ ಗಂಧಮಾದನ ಸುಪಾರ್ಶ್ವ ಸುಷೇಣ ಸುಪಕ್ಷ ಕನಕ ವಿರಜಾದಿ ಕೇಸರ ಶಿಖರಿ ವಿಸರ ಭಾಸುರ ಮೇರುಧರಾಧರಸ್ಯ ದಕ್ಷಿಣದಿಗ್ಭಾಗೇ,[31]

ಜಂಬೂದ್ವೀಪೇ, ಭಾರತ ಕಿಂಪುರುಷ ಹರೀಳಾವೃತ ಭದ್ರಾಶ್ವ ಕೇತುಮಾಲ ಹಿರಣ್ಯಕ ರಮಣಕ ಕುರುವರ್ಷಾಖ್ಯ ನವವರ್ಷಾಣಾಂ ಮಧ್ಯೇ ಭಾರತವರ್ಷೇ,[32]

ಇಂದ್ರ ಕಶೇರು ತಾಮ್ರ ಗಭಸ್ತಿ ಪುನ್ನಾಗ ಗಂಧರ್ವ ಸೌಮ್ಯ ವರುಣ ಭರತಾಖ್ಯ ನವಖಂಡಾನಾಂ ಮಧ್ಯೇ ಭರತಖಂಡೇ,[33]

ನಿರತಿಶಯಜನಿ ನಿರೂಢನಿಖಿಲಜನ ಕಲುಷ ನಿಕರ ತಿಮಿರ ಖರ ಕಿರಣ ಸದೃಶ ಕವೇರಕನ್ಯಕಾ ಕಮನೀಯ ಕೃಪೀಟ ಪೂರ ಪರಿರಿಂಖದಭಂಗುರ ಮಂಗಳತರ ತುಂಗತರಂಗ ಪರಂಪರಾ ಪರಿಗತ ಪರಿಪೂತ ಪವಮಾನ ಪರಿಸ್ಪಂದ ಪರಮಪಾವನ

---

ಪಾಠಾಂತರ : **32)** ದಕ್ಷಿಣ ದಿಗ್ಭಾಗೇ ಜಂಬೂ ಪ್ಲಕ್ಷ ಕುಳ ಕ್ರೌಂಚ ಶಾಲ್ಮಲೀ ಶಾಕ ಪುಷ್ಕರಾಖ್ಯ ಸಪ್ತದ್ವೀಪಾನಾಂ ಮಧ್ಯೇ ಲಕ್ಷಯೋಜನ ವಿಸ್ತೀರ್ಣೇ ಅಸ್ಮಿನ್ ಜಂಬೂದ್ವೀಪೇ

ಪ್ರಚುರತರ ನಿಖಿಲ ಸಸ್ಯಸಮೃದ್ಧಿ ಸಮೇಧಮಾನ ಕರ್ಣಾಟಜನಪದಾಧಿಷ್ಠಾನ ಸಹ್ಯಾಭಿಧಾನ ಗಿರಿವರಿಷ್ಠಸ್ಯೋಪರಿಭಾಗೇ, ದಂಡಕಾರಣ್ಯೇ, ಅಸ್ಮಿನ್ ಪ್ರಜಾಪತಿಕ್ಷೇತ್ರೇ,[34]

ಶಂಖ ಚಕ್ರ ಗದಾ ಶಾರ್ಙ್ಗ ನಂದಕಾಖ್ಯ ಪಂಚಮಹಾಯುಧಧರಸ್ಯ, ದಿವ್ಯರತ್ನಖಚಿತ ಕಿರೀಟ ಹಾರ ಕೇಯೂರ ನೂಪುರ ಮಕರಕುಂಡಲ ಪ್ರಮುಖ ಪ್ರಸ್ಫುರದಪ್ರಾಕೃತ ಭೂಷಣಾವಳೀ ವಿಭೂಷಿತಸ್ಯ, ಚತುರಾನನ ಪುರಂದರ ಪ್ರಮುಖ ಸಕಲ ಸುರಾಸುರ ವಿಸರ ಶಿರಸ್ತಟೀ ವಿರಾಜಮಾನ ಮುಕುಟತಟಘಟಿತ ದಿವ್ಯರತ್ನ ಮರೀಚಿ ಪರಂಪರಾ ನೀರಾಜಿತಚರಣಾಂಭೋರುಹೋಪಾಂತಸ್ಯ ನಿಖಿಲಲೋಕಾನುಜಿಘೃಕ್ಷಾ ಸ್ವೀಕೃತ ಮತ್ಸ್ಯ ಕೂರ್ಮ ವರಾಹ ನಾರಸಿಂಹ ವಾಮನ ಭಾರ್ಗವ ರಾಮ ಶ್ರೀರಾಮ ಬಲರಾಮ ಬೌದ್ಧ ಕಲ್ಕ್ಯಾದ್ಯನೇಕಾವತಾರವೈಭವಸ್ಯ, ಪ್ರಹ್ಲಾದ ನಾರದ ಪರಾಶರ ಪುಂಡರೀಕ ವ್ಯಾಸಾಂಬರೀಷ ಶುಕ ಶೌನಕ ಭೀಷ್ಮ ದಾಲ್ಭ್ಯ ರುಕ್ಮಾಂಗದಾರ್ಜುನ ವಸಿಷ್ಠ ವಿಭೀಷಣ ಬಲಿ ಹನುಮದಾಖ್ಯ ಷೋಡಶ ಮಹಾಭಾಗವತ ವಿಮಲತರ ಹೃದಯಾಂತರಾಳ ನಿರಂತರ ನಿರರ್ಗಳ ದೋಳಾವಿಹಾರ ಸಮಾಸಕ್ತಸ್ಯ ಗರ್ಭಸ್ಥಾನೇಕಕೋಟಿಬ್ರಹ್ಮಾಂಡಮಂಡಲಸ್ಯ ಭಗವತೋ ಲಕ್ಷ್ಮೀಪತೇರ್ನಾರಾಯಣಸ್ಯ ನಾಭೀಸರೋಜಮಧ್ಯ ಸಮುದ್ಭೂತಸ್ಯ ಚರಾಚರಾತ್ಮಕ ನಿಖಿಲ ಪ್ರಪಂಚ ನಿರ್ಮಾಣ ಕಪಟನಾಟಕ ಸೂತ್ರಧಾರಸ್ಯ, ಶಾರದ ನೀರದ ಪಾರದ ಸಚ್ಛಾಯ ವಾಗ್ದೇವತಾ ನಿರರ್ಗಳ ನಿರಂತರ ವಿಹರಣ ವಿಲಾಸಭವನಾಯಮಾನ ವದನಾರವಿಂದಸ್ಯ, ಸರಸತರ ಸಾರಸ ನಿಕರ ಭಾಸುರ ಮಾನಸಸರೋವರ ವಿಹರಣ ಲಾಲಸ ರಾಜಹಂಸವಾಹನಸ್ಯ, ಶ್ರೀಭಗವದಾಜ್ಞಯಾ ಪ್ರವರ್ತಮಾನಸ್ಯಅದ್ಯ-ಬ್ರಹ್ಮಣಃ,[35]

ಪ್ರಥಮಪರಾರ್ಧೇ ಪಂಚಾಶದ್ವತ್ಸರೇಷ್ವತೀತೇಷು ದ್ವಿತೀಯ ಪರಾರ್ಧೇ ಪ್ರಥಮವರ್ಷೇ ಪ್ರಥಮಮಾಸೇ ಪ್ರಥಮಪಕ್ಷೇ ಪ್ರಥಮದಿವಸೇ ಅಹನಿ ದ್ವಿತೀಯೇ ಯಾಮೇ ತೃತೀಯೇ ಮುಹೂರ್ತೇ ಪ್ರಥಮ ಪ್ರಾಣಾಯಾಮಸಮಯೇ ಪಾರ್ಥಿವ ಕೂರ್ಮ ಪ್ರಳಯಾನಂತ ಶ್ವೇತವರಾಹ ಬ್ರಾಹ್ಮಸಾವಿತ್ರಾಖ್ಯ ಸಪ್ತಕಲ್ಪಾನಾಂ ಮಧ್ಯೇ ಶ್ವೇತವರಾಹಕಲ್ಪೇ ಸ್ವಾಯಂಭುವ ಸ್ವಾರೋಚಿಷೋತ್ತಮ ತಾಮಸ ರೈವತ ಚಾಕ್ಷುಷ ವೈವಸ್ವತ ಸೂರ್ಯಸಾವರ್ಣಿ ಧರ್ಮಸಾವರ್ಣಿ ದಕ್ಷಸಾವರ್ಣಿ ರುದ್ರಸಾವರ್ಣಿ ಬ್ರಹ್ಮಸಾವರ್ಣೀಂದ್ರಸಾವರ್ಣಿ ವೇದಸಾವರ್ಣ್ಯಾಖ್ಯ ಚತುರ್ದಶ



ಮನ್ವಂತರಾಣಾಂ ಮಧ್ಯೇ ಸಪ್ತಮೇ ವೈವಸ್ವತಮನ್ವಂತರೇ, ಸಪ್ತವಿಂಶತಿ ಮಹಾಯುಗೇಷ್ವತೀತೇಷು ಅಷ್ಟಾವಿಂಶತಿತಮೇ ಮಹಾಯುಗೇ, ಕೃತ ತ್ರೇತಾ ದ್ವಾಪರ ಕಲಿಯುಗಾಖ್ಯ ಚತುರ್ಯುಗಾಣಾಂ ಮಧ್ಯೇ ಅಷ್ಟಾವಿಂಶತಿ ಸಹಸ್ರೋತ್ತರ ಸಪ್ತದಶಲಕ್ಷಾಬ್ದೇ ಕೃತಯುಗೇ, ಷಣ್ಣವತಿ ಸಹಸ್ರೋತ್ತರ ದ್ವಾದಶಲಕ್ಷಾಬ್ದೇ ತ್ರೇತಾಯುಗೇ, ಚತುಷಷ್ಟಿಸಹಸ್ರೋತ್ತರ ಅಷ್ಟಲಕ್ಷಾಬ್ದೇ ದ್ವಾಪರಯುಗೇ ಚ ಸಮತೀತೇ, ದ್ವಾತ್ರಿಂಶತ್ಸಹಸ್ರಾನ್ವಿತ ಚತುರ್ಲಕ್ಷಾಬ್ದೇ ವರ್ತಮಾನೇ ಕಲಿಯುಗೇ ಪ್ರಥಮಪಾದೇ, ಯುಧಿಷ್ಠಿರ ವಿಕ್ರಮ ಶಾಲಿವಾಹನ ವಿಜಯಾಭಿನಂದನ ನಾಗಾರ್ಜುನ ಕಲಿಭೂಪಾಖ್ಯ ಶಕ ಪುರುಷ ಮಧ್ಯ ಪರಿಗಣಿತ ಶಾಲಿವಾಹನ ಶಕೇ, ಬೌದ್ಧಾವತಾರೇ, ಬ್ರಾಹ್ಮ ದೈವ ಪಿತ್ರ್ಯ ಪ್ರಾಜಾಪತ್ಯ ಬಾರ್ಹಸ್ಪತ್ಯ ಸೌರ ಚಾಂದ್ರ ಸಾವನ ನಾಕ್ಷತ್ರ ಮಾನಾಖ್ಯ ನವಮಾನ ಮಧ್ಯ ಪರಿಗಣಿತೇನ ಚಾಂದ್ರಮಾನೇನ ಪ್ರವರ್ತಮಾನೇ ಪ್ರಭವಾದೀನಾಂ ಷಷ್ಟಿಸಂವತ್ಸರಾಣಾಂ ಮಧ್ಯೇ ಅಮುಕ ಸಂವತ್ಸರೇ, ದಕ್ಷಿಣಾಯನೋತ್ತರಾಯಣಯೋರ್ಮಧ್ಯೇ ಅಮುಕಾಯನೇ, ವಸಂತಾದಿ ಷಡೃತೂನಾಂ ಮಧ್ಯೇ ಅಮುಕ ಋತೌ, ಚೈತ್ರಾದಿ ದ್ವಾದಶಮಾಸ ಮಧ್ಯೇ ಅಮುಕಮಾಸೇ, ಶುಕ್ಲಕೃಷ್ಣಪಕ್ಷಯೋರ್ಮಧ್ಯೇ ಅಮುಕ ಪಕ್ಷೇ, ಪ್ರತಿಪದಾದಿ ತಿಥಿಮಧ್ಯೇ ಅಮುಕ ಶುಭತಿಥೌ, ಭಾನುಪ್ರಭೃತಿ ವಾಸರ ಮಧ್ಯೇ ಅಮುಕ ವಾಸರೇ, ಅಶ್ವಿನ್ಯಾದಿ ನಕ್ಷತ್ರಮಧ್ಯೇ ಅಮುಕನಕ್ಷತ್ರೇ, ವಿಷ್ಕಂಭಾದಿಯೋಗಮಧ್ಯೇ ಅಮುಕ ಯೋಗೇ, ಬವಾದಿಕರಣ ಮಧ್ಯೇ ಅಮುಕ ಕರಣೇ, ಅಸ್ಮಿನ್ ಶುಭ ಮುಹೂರ್ತೇ[36]

ಗಂಗಾವಾಲುಕಾಭಿಃ ಸಪ್ತರ್ಷಿ ಮಂಡಲಪರ್ಯಂತಂ ಕೃತರಾಶೇರ್ದಿವ್ಯ ಸಹಸ್ರವರ್ಷಾವಸಾನೇ, ಏಕೈಕ ವಾಲುಕಾಪಕರ್ಷಣಕ್ರಮೇಣ, ಸರ್ವ ರಾಶ್ಯಪಕರ್ಷಣ ಸಮ್ಮಿತಕಾಲೇ, ದಶಪೂರ್ವೇಷಾಂ ದಶಾಪರೇಷಾಂ ಮದ್ವಂಶ್ಯಾನಾಂ ಪಿತೃಣಾಂ ಮಮ ಚ ಸಕುಟುಂಬಸ್ಯ ನರಕಾದುತ್ತೀರ್ಯ ಶಾಶ್ವತ ಬ್ರಹ್ಮಲೋಕ ನಿವಾಸಸಿದ್ಧ್ಯರ್ಥಂ ಗೋಧೂಮೈಸ್ಸೂರ್ಯಮಂಡಲ ಪರ್ಯಂತಂ ಕೃತರಾಶೇರ್ದಿವ್ಯಸಹಸ್ರವರ್ಷಾವಸಾನೇ, ಏಕೈಕಧೂಮಾಪಕರ್ಷಣಕ್ರಮೇಣ ಸರ್ವರಾಶ್ಯಪಕರ್ಷಣ ಸಮ್ಮಿತಕಾಲೇ, ಶಾಶ್ವತ ಬ್ರಹ್ಮಲೋಕ ನಿವಾಸಸಿದ್ಧ್ಯರ್ಥಂ, ಮಾಷೈಶ್ಚಂದ್ರ ಮಂಡಲ ಪರ್ಯಂತಂ ಕೃತರಾಶೇರ್ದಿವ್ಯ ಸಹಸ್ರವರ್ಷಾವಸಾನೇ, ಏಕೈಕ ಮಾಷಾಪಕರ್ಷಣ ಕ್ರಮೇಣ ಸರ್ವರಾಶ್ಯಪಕರ್ಷಣ ಸಮ್ಮಿತ ಕಾಲೇ, ಶಾಶ್ವತ ಬ್ರಹ್ಮಲೋಕ ನಿವಾಸಸಿದ್ಧ್ಯರ್ಥಂ, ಸರ್ಷಪೈರ್ಧ್ರುವಮಂಡಲ ಪರ್ಯಂತಂ

shrinath.udupa@gmail.com

ಕೃತರಾಶೇರ್ದಿವ್ಯ ಸಹಸ್ರವರ್ಷಾವಸಾನೇ, ಏಕೈಕ ಸರ್ಷಪಾಪಕರ್ಷಣ ಸರ್ವರಾಶ್ಯಪಕರ್ಷಣ ಸಮ್ಮಿತಕಾಲೇ, ಶಾಶ್ವತ ಬ್ರಹ್ಮಲೋಕ ನಿವಾಸ ಸಿದ್ಧ್ಯಥಂ ತಿಲೈರ್ನಕ್ಷತ್ರಮಂಡಲ ಪರ್ಯಂತಂ ಕೃತರಾಶೇರ್ದಿವ್ಯಸಹಸ್ರವರ್ಷಾವಸಾನೇ, ಏಕೈಕ ತಿಲಾಪಕರ್ಷಣಕ್ರಮೇಣ, ಸರ್ವರಾಶ್ಯಪಕರ್ಷಣ ಸಮ್ಮಿತಕಾಲೇ, ಶಾಶ್ವತ ಬ್ರಹ್ಮಲೋಕ ನಿವಾಸಸಿದ್ಧ್ಯರ್ಥಂ, ತ್ರ್ಯಣುಕೈರ್ಬ್ರಹ್ಮಾಂಡೋರ್ಧ್ವಕಟಾಹ ಪರ್ಯಂತಂ ಕೃತರಾಶೇರ್ದಿವ್ಯಸಹಸ್ರವರ್ಷಾವಸಾನೇ, ಏಕೈಕ ತ್ರ್ಯಣುಕಾಪಕರ್ಷಣ ಕ್ರಮೇಣ ಸರ್ವರಾಶ್ಯಪಕರ್ಷಣ ಸಮ್ಮಿತ ಕಾಲೇ, ಶಾಶ್ವತ ಬ್ರಹ್ಮಲೋಕ ನಿವಾಸಸಿದ್ಧ್ಯರ್ಥಂ, ತ್ರಿಗುಣೀಕೃತ-ಅಗ್ನಿಷ್ಟೋಮ-ಅತಿರಾತ್ರ ವಾಜಪೇಯ, ಪೌಂಡರೀಕ, ರಾಜಸೂಯ- ಅಶ್ವಮೇಧಾದಿ ಸಮಸ್ತಕ್ರತುಫಲಾವಾಪ್ತ್ಯರ್ಥಂ, ಇಹ ಜನ್ಮನಿ, ಜನ್ಮಾಂತರೇಷು ಚ, ಬಾಲ್ಯ ಕೌಮಾರ ಯೌವನ ವಾರ್ಧಕೇಷು, ಜಾಗ್ರತ್ಸ್ವಪ್ನ ಸುಷುಪ್ತ್ಯವಸ್ಥಾಸು, ಜ್ಞಾನತೋಽಜ್ಞಾನತಶ್ಚ, ಕಾಮತೋಽಕಾಮತಶ್ಚ, ಸ್ವತಃ ಪರಪ್ರೇರಣಯಾ ಚ ಸಂಭಾವಿತಾನಾಂ ಸರ್ವೇಷಾಂ ಪಾಪಾನಾಂ ಅಪನೋದನಾರ್ಥಂ, ಇಷ್ಟದೇವತಾ ಪ್ರೀತ್ಯರ್ಥಂ, ಧರ್ಮಾರ್ಥ ಕಾಮಮೋಕ್ಷಾಖ್ಯ ಚತುರ್ವಿಧ ಪುರುಷಾರ್ಥ ಸಿದ್ಧ್ಯರ್ಥಂ, ಕ್ಷೇಮಸ್ಥೈರ್ಯ, ವಿಜಯ- ಆಯುರಾರೋಗ್ಯ- ಐಶ್ವರ್ಯಾದೀನಾಂ ಉತ್ತರೋತ್ತರಾಭಿವೃದ್ಧ್ಯರ್ಥಂ {ಅನೇನ ವರೇಣ ಅಸ್ಯಾಂ ಕನ್ಯಾಯಾಂ ಉತ್ಪಾದಯಿಷ್ಯಮಾಣ ಸಂತತ್ಯಾ ದ್ವಾದಶಾವರಾನ್ ದ್ವಾದಶಪರಾನ್ ಪುರುಷಾಂಶ್ಚ ಪವಿತ್ರೀಕರ್ತುಂ (ಆತ್ಮಾನಂ ಪವಿತ್ರೀಕರ್ತುಂ) ಮತ್ಸ್ಯಪುರಾಣೋಕ್ತ ಸಾಲಂಕೃತ ಕನ್ಯಾದಾನಂ ಬ್ರಾಹ್ಮವಿವಾಹೋಕ್ತ ವಿಧಿನಾ ಕರಿಷ್ಯೇ,[37]||} *ತೀರ್ಥೋದಕ ಸ್ನಾನಮಹಂ/ ಮಹಾದಾನಮಹಂ / ಮಹಾಯಜ್ಞಾ- ನುಷ್ಠಾನಮಹಂ / ಕರಿಷ್ಯೇ ||*



shrinath.udupa@gmail.com

## ಪರಿವಿಡಿ

# ಮಹಾ ಸಂಕಲ್ಪದ ವಿವರಣೆ

ಮಹಾಸಂಕಲ್ಪವನ್ನು ರಚಿಸಿದವರು ದೇವಲರೆಂಬ ಮಹರ್ಷಿಗಳು. ಇವರು ಕಶ್ಯಪ ವಂಶದವರೆಂದು ಹೇಳಲ್ಪಟ್ಟಿದೆ. ಇವರು ಜನಮೇಜಯನು ಮಾಡಿದ ಸರ್ಪಯಾಗದಲ್ಲಿ ಭಾಗವಹಿಸಿದ್ದರು. ಮತ್ಸ್ಯ ಪುರಾಣದ ಉಲ್ಲೇಖಗಳನ್ನು ಉಪಯೋಗಿಸಿಕೊಂಡು ರಚಿಸಿರುವ ಈ ಮಹಾಸಂಕಲ್ಪವು ದಂಡಕ ರೂಪದಲ್ಲಿದೆ. ಮಹಾದಾನಗಳನ್ನು ಮಾಡುವಾಗ, ವಿಶೇಷವಾಗಿ ಕನ್ಯಾದಾನದ ಸಂದರ್ಭದಲ್ಲಿ, ಯಜ್ಞಗಳ ಆದಿಯಲ್ಲಿ, ಪ್ರಾಯಶ್ಚಿತ್ತ ಕರ್ಮಗಳಲ್ಲಿ, ನದೀ ಸ್ನಾನಕ್ಕೆ ಮೊದಲು ಈ ಮಹಾಸಂಕಲ್ಪವನ್ನು ಮಾಡಬೇಕೆಂದು ದೇವಲ ಮಹರ್ಷಿಗಳೇ ಅಪ್ಪಣೆ ಕೊಡಿಸಿರುತ್ತಾರೆ.

## ೧. ಸೃಷ್ಟಿಯು ಪ್ರಾರಂಭವಾದ ಬಗೆ

ಈ ಜಗತ್ತಿನ ಸೃಷ್ಟಿಗೆ ಮೊದಲು ಎಲ್ಲ ಆತ್ಮಗಳಿಗೂ ಆತ್ಮನಾದ ಪ್ರಭು, ವಿಭುವಾಗಿದ್ದ ಪರಮಾತ್ಮನೊಬ್ಬನೇ ಇದ್ದನು. ಈತನನ್ನೇ ಭಗವಂತನೆಂದೂ ಮಹಾಪುರುಷನೆಂದೂ ಅನಿವಾರ್ಯವೀರ್ಯನೆಂದೂ, ಆದಿನಾರಾಯಣನೆಂದೂ ಅಖಿಲಲೋಕ ಪರಿಪಾಲನ ಪರಾಯಣನೆಂದೂ ನಿತ್ಯ ನಿರುಪಮ ನಿರವಧಿಕ ಅಪ್ರಮೇಯ ಮಹಿಮನೆಂದೂ ಹೇಳುವರು. ಇಂತಹ ಪರಮಾತ್ಮನ ಸದಸದಾತ್ಮಕವಾದ (ಕಾರ್ಯಕಾರಣ ರೂಪವಾದ) ಶಕ್ತಿಯನ್ನೇ ಮಾಯೆ ಎನ್ನುವರು. ಇಂದ್ರಿಯಾತೀತನೂ ತ್ರಿಗುಣಾತೀತನೂ ಆದ ಆ ಪರಮಾತ್ಮನು ತ್ರಿಗುಣಮಯಿಯಾದ ಈ ಮಾಯೆಯಲ್ಲಿ ತನ್ನ ಅಂಶರೂಪವಾದ ವೀರ್ಯವನ್ನಿರಿಸಿದನು. ಅನಂತರ ಕಾಲಪ್ರೇರಿತವಾಗಿ ಗುಣಕ್ಷೋಭೆಗೊಂಡ ಆ ಮಾಯೆಯಿಂದ (ಅವ್ಯಕ್ತ) ಮಹತ್ತತ್ತ್ವವೆಂಬುದೊಂದು ಉದಯಿಸಿತು. ಮಹತ್ತತ್ತ್ವವೆಂಬುದು ಸೂಕ್ಷ್ಮವಾಗಿ ಅಡಗಿದ್ದ ಪ್ರಪಂಚವನ್ನು ಪ್ರಕಾಶಗೊಳಿಸುವ ತತ್ತ್ವವು. ಈ ತತ್ತ್ವವೂ ವಿಕಾಸಗೊಂಡಾಗ ಇದರಿಂದ ಅಹಂಕಾರವೆಂಬ (ನಾನು ಎಂಬ) ತತ್ತ್ವವೊಂದು ಉದಯಿಸಿತು. ಇದರಿಂದ ವಿರಾಟ್‌ಪುರುಷನ ಸೃಷ್ಟಿಯಾಯಿತು. ಈ ವಿರಾಟ್ ಪುರುಷನೇ ಸಮಸ್ತ ಜೀವರಾಶಿಗಳನ್ನು ತನ್ನೊಳಗೆ ಇಟ್ಟುಕೊಂಡು, ಅಖಂಡ ಜಲರಾಶಿಯ ಮಧ್ಯದಲ್ಲಿರುವ ಬ್ರಹ್ಮಾಂಡವೆಂಬ ಕೋಶದಲ್ಲಿ ವಾಸಿಸುತ್ತಿರುವನು. ಈ ಬ್ರಹ್ಮಾಂಡವೇ ವಿರಾಟ್ ಪುರುಷನ ಶರೀರವು(ಭಾಗವತ). ಈ ಬ್ರಹ್ಮಾಂಡವೆಂಬುದು ಅದರ ಹತ್ತರಷ್ಟು ಪ್ರಮಾಣದ ಜಲತತ್ತ್ವದಿಂದ ಆವೃತವಾಗಿದ್ದು, ಈ ಜಲತತ್ತ್ವವು ಅಗ್ನಿತತ್ತ್ವದಿಂದಲೂ, ಅದು ವಾಯುತತ್ತ್ವದಿಂದಲೂ, ವಾಯುತತ್ತ್ವವು ಆಕಾಶ ತತ್ತ್ವದಿಂದಲೂ, ಆಕಾಶತತ್ತ್ವವು ಅಹಂಕಾರವೆಂಬ ತತ್ತ್ವದಿಂದಲೂ, ಅಹಂಕಾರತತ್ತ್ವವು ಮಹತ್ತತ್ತ್ವದಿಂದಲೂ ಮತ್ತು ಇದು ಅವ್ಯಕ್ತದಿಂದಲೂ ಪರಿವೇಷ್ಟಿತವಾಗಿದೆ. ಈ ಏಳು ಆವರಣಗಳು ಉತ್ತರೋತ್ತರ ಅವುಗಳ ಹತ್ತರಷ್ಟು ಅಧಿಕವಾದ ವ್ಯಾಪನೆಯಿಂದ ಕೂಡಿದ್ದು, ಎಲ್ಲವನ್ನು ಒಳಗೊಂಡಿರುವ ಅವ್ಯಕ್ತವೆಂಬ ತತ್ತ್ವವು ಪ್ರಧಾನವೆಂದು ಕರೆಯಲ್ಪಟ್ಟಿದೆ. ಈ ಪ್ರಧಾನವು ಅನಂತವಾಗಿದ್ದು, ಇದಕ್ಕೆ ಅಂತವಾಗಲೀ, ಎಣಿಕೆಯಾಗಲೀ ಇರುವುದಿಲ್ಲ.

shrinath.udupa@gmail.com

ಪ್ರಧಾನವೆಂಬುದು ಅಸಂಖ್ಯೇಯವೂ ಪರಿಮಾಣರಹಿತವೂ ಆಗಿರುವುದು. ಇದರಲ್ಲಿರುವ ಅನೇಕ ಕೋಟಿ ಬ್ರಹ್ಮಾಂಡಗಳಲ್ಲಿ (ಬೃಹತ್ ಗೋಳಾಕಾರದಲ್ಲಿರುವ ಪದಾರ್ಥಗಳು) ಒಂದಾದ ನಾವಿರುವ ಬ್ರಹ್ಮಾಂಡದಲ್ಲಿ (ಆಕಾಶಗಂಗೆ ಅಥವಾ Milky way) ಭೂಲೋಕವೆಂಬುದೂ ಸಹ ಒಂದಾಗಿರುವುದು (ನಾವಿರುವ ಸ್ಥಳವು). ಇದನ್ನೇ ಪೃಥ್ವೀ ಅಥವಾ ಭೂಮಿಯೆಂದು ಹೇಳುವರು. ಈ ಪೃಥ್ವಿಯನ್ನು ಕೇಂದ್ರವಾಗಿಟ್ಟು ಸೃಷ್ಟಿಯಲ್ಲಿರುವ ಮಿಕ್ಕಲೋಕಗಳನ್ನು ವರ್ಣಿಸುವುದರ ಮೂಲಕ ಪೃಥ್ವಿಯ ಸ್ಥಾನವನ್ನು ಈ ಮಹಾಸಂಕಲ್ಪದಲ್ಲಿ ನಿರ್ದೇಶಿಸಿದೆ.

ಈ ಸೃಷ್ಟಿಯನ್ನು "ಆದಿಶಕ್ತಿ ಕೂರ್ಮ ವರಾಹಾನಂತೋಪರಿಭಾಗ ಪ್ರತಿಷ್ಠಿತಾನಾಂ" ಅಂದರೆ ಆದಿಶಕ್ತಿ-ಕೂರ್ಮ-ವರಾಹ-ಅನಂತ ಇವುಗಳ ಆಧಾರದಿಂದ ಪ್ರತಿಷ್ಠಿತವಾಗಿದೆ ಎಂಬುದಾಗಿ ವರ್ಣಿಸಿದೆ.

ಲಲಿತಾ ಸಹಸ್ರನಾಮದಲ್ಲಿ ಹೇಳಿರುವ "ಆದಿಶಕ್ತಯೇ ನಮಃ" ಎಂಬ ನಾಮವನ್ನೂ, ದೇವಾಸುರರು ಪ್ರಯತ್ನಿಸಿದ ಅಮೃತ ಮಂಥನದಲ್ಲಿ ಶ್ರೀಮನ್ನಾರಾಯಣನು ಕೂರ್ಮಾವತಾರದಲ್ಲಿ ಕೂರ್ಮ ರೂಪದಿಂದ, ಮುಳುಗುತ್ತಿದ್ದ ಸೃಷ್ಟಿಯನ್ನು ಅದರ ಸ್ಥಾನದಲ್ಲಿ ಪ್ರತಿಷ್ಠಿತ ಮಾಡಿದ್ದನ್ನೂ, ವರಾಹಾವತಾರದಲ್ಲಿ ಹಿರಣ್ಯಾಕ್ಷ ರಾಕ್ಷಸನು ಪೃಥ್ವಿಯನ್ನು ಸಮುದ್ರದಲ್ಲಿ ಮುಳುಗಿಸಿದಾಗ, ಅದನ್ನು ತನ್ನ ಕೋರೆದಾಡೆಗಳಿಂದ ಎತ್ತಿ ಸರಿಯಾದ ಸ್ಥಾನದಲ್ಲಿ ಪ್ರತಿಷ್ಠಿತ ಮಾಡಿದ್ದನ್ನೂ, ಪರಮಾತ್ಮನು ಅನಂತ ಅಥವಾ ಸಂಕರ್ಷಣ ಮೂರ್ತಿಯ ರೂಪದಿಂದ ಭೂಮಿಯನ್ನು ತನ್ನ ಶಿರಸ್ಸಿನ ಮೇಲೆ ಧರಿಸಿ ರಕ್ಷಿಸುತ್ತಿರುವುದನ್ನೂ ಈ ಸಂದರ್ಭದಲ್ಲಿ ಮನನ ಮಾಡಬೇಕು. ಇವೆಲ್ಲಾ ಬ್ರಹ್ಮಾಂಡದಲ್ಲಿರುವ ಮತ್ತು ಸಾಮಾನ್ಯ ಜ್ಞಾನಕ್ಕೆ ಗೋಚರಿಸದ ಅನಂತ ಶಕ್ತಿಗಳೆಂದೂ ತಿಳಿಯಬೇಕು. ಈ ಶಕ್ತಿಗಳನ್ನೇ ಆಧುನಿಕ ವಿಜ್ಞಾನಿಗಳೂ ಕೂಡ ತಮ್ಮದೇ ಆದ ಪದಗಳಿಂದ ವರ್ಣಿಸಲು ಪ್ರಯತ್ನಿಸುತ್ತಿರುವುದು ಇಂದಿಗೂ ನಡೆಯುತ್ತಲೇ ಇದೆ. ಇಂತಹ ಪ್ರಯತ್ನಗಳು ಅಂತಿಮ ನಿರ್ಣಯಕ್ಕೆ ಬರಲಾರವೆಂಬ ನಿರ್ಧಾರಕ್ಕೆ ನಿಧಾನವಾಗಿ ವೈಜ್ಞಾನಿಕಯುಗದ ಆಧುನಿಕ ಮಾನವನೂ ಸಹ ಶರಣಾಗುತ್ತಿರುವುದನ್ನು ಗಮನಿಸಬಹುದಾಗಿದೆ. ಮಹರ್ಷಿಗಳು ತಮ್ಮದೇ ಆದ ಅತೀಂದ್ರಿಯವೆಂಬ ಜ್ಞಾನದಿಂದ ಒಂದು ಸ್ಥೂಲ ಚಿತ್ರಣವನ್ನು ಈ ಮಹಾಸಂಕಲ್ಪದಲ್ಲಿ ವಿವರಿಸಿರುತ್ತಾರೆ.

### ೨. ಸಪ್ತ ಅಧೋಲೋಕಗಳು

ಪೃಥ್ವಿಯ ಕೆಳಭಾಗದಲ್ಲಿ ಸಪ್ತಲೋಕಗಳಿವೆ. ಇವುಗಳನ್ನು ಸಪ್ತಪಾತಾಲಗಳೆಂದೂ ಸಹ ಹೇಳುತ್ತಾರೆ. ಇವುಗಳು ಕ್ರಮವಾಗಿ ಅತಲ, ವಿತಲ, ಸುತಲ, ತಲಾತಲ, ರಸಾತಲ, ಮಹಾತಲ, ಪಾತಾಲ ಲೋಕಗಳೆಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಇವುಗಳನ್ನು ವಿವಿಧ ರೀತಿಯಲ್ಲಿ ಬೇರೆ ಬೇರೆ ಪುರಾಣಗಳಲ್ಲಿ ವರ್ಣಿಸಿರುತ್ತಾರೆ. (ಉದಾ: ಶ್ರೀಮದ್ಭಾಗವತ-ಪಂಚಮ ಸ್ಕಂದ - ಅಧ್ಯಾಯ 25) ಸೃಷ್ಟಿಯ ಮೇಲೆ ನಾವುಗಳು ವಾಸವಾಗಿರುವ ಸ್ಥಾನದಿಂದ ಭೂಮಿಯ



shrinath.udupa@gmail.com

ಕೇಂದ್ರದವರೆಗೂ ಇರುವ ಪ್ರದೇಶದ ವಿವಿಧ ಸ್ಥಾವರ ಪ್ರದೇಶಗಳು ಇವುಗಳೆಂದೂ ಆಧುನಿಕ ಸಂಶೋಧಕರ ಅಭಿಪ್ರಾಯವಾಗಿದೆ. ಅರ್ಥಗರ್ಭಿತವಾಗಿ ವಿವರಿಸಲ್ಪಟ್ಟಿರುವ ಮಹರ್ಷಿಗಳ ವಿವರಣೆಯು ಇಂದಿಗೂ ವಿಚಾರಪೂರಿತವಾಗಿದೆ.

### ೩. ಆರು ಊರ್ಧ್ವಲೋಕಗಳು

ಭೂಲೋಕವನ್ನು ಒಳಗೊಂಡಿರುವ ಈ ಲೋಕಗಳು ಸಪ್ತ ಊರ್ಧ್ವಲೋಕಗಳೆಂದು ಕರೆಯಲ್ಪಟ್ಟಿವೆ. ಭೂಲೋಕವನ್ನು ಕೇಂದ್ರಮಾಡಿಕೊಂಡು ಮಿಕ್ಕ ಆರು ಲೋಕಗಳನ್ನು ಮಹಾಸಂಕಲ್ಪದಲ್ಲಿಷಳ್ಲೋಕಗಳೆಂದು ಹೇಳಿ, ಇವುಗಳ ಕೆಳಗೆ ಭೂಲೋಕವಿರುವುದಾಗಿ ವರ್ಣನೆಮಾಡಿದೆ. (ವಿಷ್ಣು ಪುರಾಣ)

1. **ಭೂಲೋಕ :** ಭೂಮಿಯ ಮೇಲ್ಮೈ ಪ್ರದೇಶ.
2. **ಭುವರ್ಲೋಕ :** ಭೂಮಿಯಿಂದ ಸೂರ್ಯಮಂಡಲದವರೆಗೆ ಇರುವ ಪ್ರದೇಶ. ಈ ಪ್ರದೇಶದಲ್ಲಿ ಸಿದ್ಧಾದಿ ಮುನಿಗಳು ವಾಸಿಸುತ್ತಿರುವರು.
3. **ಸುವರ್ಲೋಕ :** ಸೂರ್ಯಮಂಡಲದಿಂದ ಧ್ರುವ ನಕ್ಷತ್ರದವರೆಗೂ ಇರುವ ಪ್ರದೇಶ. ಇದು ಸಕಲ ದೇವತೆಗಳು ವಾಸಿಸುತ್ತಿರುವ ಸ್ವರ್ಗಲೋಕವೆಂಬ ಹೆಸರಿನಿಂದ ಪ್ರಖ್ಯಾತವಾಗಿದೆ.
4. **ಮಹೋಲೋಕ :** ಧ್ರುವನಕ್ಷತ್ರದಿಂದ ಒಂದು ಕೋಟಿ ಯೋಜನೆಯುಳ್ಳ ಸುತ್ತಲಿನ ವೃತ್ತಾಕಾರ ಪ್ರದೇಶವು. ಇಲ್ಲಿರುವ ಋಷಿಗಳು ಒಂದು ಕಲ್ಪದವರೆಗೆ ಜೀವಿಸಿ, ಅನಂತರ ಪ್ರಳಯ ಕಾಲದಲ್ಲಿ ಜನೋಲೋಕವನ್ನು ಪ್ರವೇಶಿಸುವರು.
5. **ಜನೋಲೋಕ :** ಮಹರ್ಲೋಕದಿಂದ ಎರಡು ಕೋಟಿ ಯೋಜನ ಊರ್ಧ್ವ ಪ್ರದೇಶವು. ಇಲ್ಲಿ ಬ್ರಹ್ಮಮಾನಸ ಪುತ್ರರಾದ ಸನಕಾದಿ ಮಹರ್ಷಿಗಳು ವಾಸಿಸುತ್ತಿರುವರು.
6. **ತಪೋಲೋಕ :** ಜನೋಲೋಕದಿಂದ ಎಂಟು ಕೋಟಿ ಯೋಜನ ಊರ್ಧ್ವ ವೃತ್ತಾಕಾರ ಪ್ರದೇಶವು. ಇಲ್ಲಿ ತಾಪವರ್ಜಿತರಾದ ವೈರಾಜರೆಂಬ ದೇವತೆಗಳು ವಾಸಿಸುತ್ತಿರುವರು. ಈ ಲೋಕಕ್ಕೆ ಪ್ರಳಯವೇ ಇಲ್ಲವೆಂದು ಉಕ್ತವಾಗಿದೆ.
7. **ಸತ್ಯಲೋಕ :** ತಪೋ ಲೋಕದಿಂದ ನಲವತ್ತೆಂಟು ಕೋಟಿ ಯೋಜನದವರೆಗಿರುವ ಪ್ರದೇಶವನ್ನು ಸತ್ಯಲೋಕವೆಂದು ಹೆಸರಿಸಿದೆ. ಇದು ಪುನರಾವೃತ್ತಿ ರಹಿತವಾದ ಶಾಶ್ವತ ಬ್ರಹ್ಮಲೋಕವು. ಇಲ್ಲಿಯ ನಿವಾಸಿಗಳಿಗೆ ಮರಣವೆಂಬುದು ಇಲ್ಲ.

ಈ ಸಪ್ತ ಲೋಕಗಳನ್ನು ಗರುಡ ಪುರಾಣವು ಮನುಷ್ಯ ದೇಹದಲ್ಲಿ ಅಗೋಚರ ಶಕ್ತಿಯಿಂದ ಕೂಡಿರುವ ಸಪ್ತ ಚಕ್ರಗಳೆಂದೂ ಸಹ ವರ್ಣಿಸಿದೆ. ತಪಶ್ಶಕ್ತಿಯಿಂದ ಈ ಸಪ್ತಸ್ಥಾನಗಳನ್ನು ದರ್ಶಿಸಿದಾಗ, ಇಡೀ ಸೃಷ್ಟಿಯ ಸ್ವರೂಪವೂ ಗೋಚರಿಸುತ್ತದೆಯೆಂದು ಯೋಗ ಸಾಧನೆಯಲ್ಲಿ ಪ್ರಸಿದ್ಧವು. ವಿವರಣೆಗಳು ತಿಳಿಯಲು ಕಷ್ಟವಾದರೂ, ಭಾರತೀಯರಿಗೆ ಭೂಮಿಯಿಂದ ಮೇಲೆ ಸುತ್ತಲೂ ಕಾಣುವ ನಕ್ಷತ್ರಾದಿಗಳ ಪ್ರದೇಶಗಳ ಬಗ್ಗೆ ಇದ್ದ ಜ್ಞಾನವು ಅತಿಶಯವೆಂಬುದು ಮಾತ್ರ ಸತ್ಯ. ಇವುಗಳ ಬಗ್ಗೆ ಸಂಶೋಧಕರಿಂದ ವಿವೇಚಿಸಲ್ಪಟ್ಟ ವಿಚಾರಮಯ ಸಾಹಿತ್ಯ ರಾಶಿಯು ಇಂದು ಲಭ್ಯವಿದೆ.

## ೪. ಅಷ್ಟ ದಿಗ್ಗಜಗಳು

ಈ ಅಷ್ಟ ದಿಗ್ಗಜಗಳ ತಂಡವು ತಮ್ಮ ಸೊಂಡಿಲಿನಿಂದ ಪೃಥ್ವಿಯನ್ನು ಮೇಲಕ್ಕೆತ್ತಿ ಹಿಡಿದಿರುವಂತೆ ವರ್ಣಿತವಾಗಿದೆ. ಇವುಗಳು ತಮ್ಮ ತಮ್ಮ ಪತ್ನಿಯರೊಡಗೂಡಿ ಪೃಥ್ವಿಯನ್ನು ಎಂಟು ದಿಕ್ಕುಗಳಲ್ಲಿಯೂ ರಕ್ಷಿಸುತ್ತಿರುವರೆಂದು ಪುರಾಣಗಳು ವರ್ಣಿಸಿವೆ. ಇದರ ವಿವರಣೆಯು ಈ ರೀತಿ ಇದೆ.

**ದಿಗ್ಗಜಗಳು -** ಕ್ರಮವಾಗಿ ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ ಮತ್ತು ಸುಪ್ರತೀಕ ಎಂಬ ಅಷ್ಟ ದಿಗ್ಗಜಗಳು.

**ಪತ್ನಿಯರು -** ಅಭ್ರಮು (ಕರಣೀ), ಕಪಿಲಾ, ಪಿಂಗಳಾ, ಅನುಪಮಾ, ತಾಮ್ರಪರ್ಣಿ, ಶುಭ್ರದಂತಿ, ಅಂಗನಾ ಮತ್ತು ಅಂಜನಾವತಿಯೆಂಬ ಹೆಸರಿನಿಂದ ಪ್ರಸಿದ್ಧರು.

**ದಿಕ್ಕುಗಳು -** ಈ ಅಷ್ಟ ದಿಗ್ಗಜಗಳು ಪೂರ್ವ ದಿಕ್ಕಿನಿಂದ ಕ್ರಮವಾಗಿ ಈಶಾನ್ಯ ದಿಕ್ಕಿನವರೆಗೂ, ಅಷ್ಟದಿಕ್ಕುಗಳಲ್ಲಿ ಸ್ಥಿತರಾಗಿರುವರು.

ಐರಾವತವೆಂಬುದು ಬಿಳಿಬಣ್ಣದ್ದಾಗಿ ನಾಲ್ಕು ದಂತಗಳನ್ನು ಮತ್ತು ಪುಷ್ಪದಂತವೆಂಬುದು ಕರಿಬಣ್ಣದ್ದಾಗಿ ಆರು ದಂತಗಳನ್ನು ಹೊಂದಿ, ಮಿಕ್ಕ ಗಜಗಳು ಸಾಮಾನ್ಯ ಗಜಗಳಂತಿವೆಯೆಂದು ವರ್ಣಿಸಲ್ಪಟ್ಟಿದೆ.

## ೫. ಅನೇಕ ಪುಣ್ಯಪುರೀ ವಿರಾಜಿತೇ

ಭಾರತ ದೇಶದಲ್ಲಿ ಅಸಂಖ್ಯಾತ ಪುಣ್ಯಕ್ಷೇತ್ರಗಳಿವೆ. ಪರಮಾತ್ಮನು ಅವತಾರವೆತ್ತಿದ, ಅಥವಾ ತನ್ನ ಲೀಲೆಯನ್ನು ತೋರಿದ್ದ, ಮಹರ್ಷಿಗಳು ತಪಸ್ಸನ್ನಾಚರಿಸಿದ, ಪುಣ್ಯ ಚಾರಿತ್ರ್ಯದಿಂದ ಕೂಡಿದ್ದ ರಾಜ ಮಹಾರಾಜರುಗಳು ಆಳಿದ್ದ ಮತ್ತು ಅನೇಕ ರೀತಿ ತಪಸ್ಸು, ಯಜ್ಞ ಯಾಗಾದಿಗಳೇ ಮುಂತಾದ ಪುಣ್ಯ ಕರ್ಮಗಳು ನಡೆದಿದ್ದ ಪೃಥ್ವಿಯ ಮೇಲಿರುವ ಸ್ಥಳಗಳೇ ಅಲ್ಲದೇ, ಈ ಲೋಕವನ್ನು ಪರಿಪಾಲಿಸುತ್ತಿರುವ ದೇವತೆಗಳು ವಾಸಿಸುತ್ತಿರುವ ದಿವ್ಯ ನಗರಿಗಳೂ ಸೇರಿದಂತೆ, ಅನೇಕ ದಿವ್ಯ ಸ್ಥಾನಗಳನ್ನು ಪುಣ್ಯಪುರಿಗಳೆಂಬ ಹೆಸರಿನಲ್ಲಿ ಇಲ್ಲಿ ಉಲ್ಲೇಖಿಸಿದೆ. ಇಂತಹ ಸ್ಥಳಗಳನ್ನು ಮಾನವರು, ತಾವು ಮಾಡಿದ ಪುಣ್ಯಬಲದಿಂದ ಸೇವಿಸಲು ಸಮರ್ಥರಾಗಿ ಅಲ್ಲಿ ತಮ್ಮ ಕೈಲಾದಷ್ಟು ಹೆಚ್ಚಾದ ಪುಣ್ಯಕೆಲಸಗಳನ್ನು ಆಚರಿಸಿ, ಉತ್ತಮ ಫಲಗಳನ್ನು ಹೊಂದುವರೆಂಬ ನಂಬಿಕೆ, ನಮ್ಮ ದೇಶದಲ್ಲಿ ಅನಾದಿ ಕಾಲದಿಂದಲೂ ನಡೆದು ಬಂದ ಸತ್ಸಂಪ್ರದಾಯ.ಪ್ರಕೃತ ಮಹಾಸಂಕಲ್ಪದಲ್ಲಿ ಬಹುಮುಖ್ಯವಾದ ಮತ್ತು ತ್ರಿಲೋಕ ಪ್ರಸಿದ್ಧವಾದ ಹದಿನೆಂಟು ಪುಣ್ಯಪುರಿಗಳನ್ನು ಸ್ಮರಿಸಿ, ಈ ಪುಣ್ಯಕ್ಷೇತ್ರಗಳಿಂದ ಈ ಸೃಷ್ಟಿಯು ವಿರಾಜಿಸುತ್ತಿದೆಯೆಂದು ಸ್ತುತಿಸಲ್ಪಟ್ಟಿದೆ. ಇವುಗಳನ್ನು ಮೂರು ಗುಂಪಿನಲ್ಲಿ ವಿಂಗಡಿಸಬಹುದು.



**ಮೊದಲನೆಯ ಗುಂಪು :** ಪೃಥ್ವಿಯ ಮೇಲೆ ವಿರಾಜಿಸುತ್ತಿರುವ ಸಪ್ತ ಮೋಕ್ಷಪುರಿಗಳೆಂದು ಪ್ರಸಿದ್ಧವಾಗಿರುವ, ಕರ್ಮಭೂಮಿಯೆನಿಸಿರುವ ಪವಿತ್ರ ಭಾರತ ದೇಶದಲ್ಲಿನ ಏಳು ಪುಣ್ಯಕ್ಷೇತ್ರಗಳು. ಇವುಗಳು

**"ಅಯೋಧ್ಯಾ ಮಥುರಾ ಮಾಯಾ (ಹರಿದ್ವಾರ) ಕಾಶೀ ಕಾಂಚೀ ಅವನ್ತಿಕಾ|**
**ಪುರೀ ಪುಣ್ಯವತೀ (ದ್ವಾರಾವತೀ) ಜ್ಞೇಯಾಃ ಸಪ್ತೈತಾ ಮೋಕ್ಷದಾಯಿಕಾಃ ||**
ಎಂಬುದಾಗಿ ಹೇಳಲ್ಪಟ್ಟಿವೆ.

ಮಹಾಸಂಕಲ್ಪದಲ್ಲಿ ಹೇಳಿರುವ ಭಾರತ ದೇಶದಲ್ಲಿನ ಸಪ್ತ ಪುಣ್ಯಪುರಿಗಳು ಈ ರೀತಿ ಇವೆ.

**1. ಅಯೋಧ್ಯಾ:** ಭಾರತ ದೇಶದ ಆರಾಧ್ಯ ದೇವನಾದ ಶ್ರೀರಾಮಚಂದ್ರ ಮೂರ್ತಿಯು ಜನಿಸಿದ ಸ್ಥಳ.

**2. ಮಥುರಾ :** ಶ್ರೀಕೃಷ್ಣ ಪರಮಾತ್ಮನು ಜನಿಸಿದ ಪರಮ ಪವಿತ್ರವಾದ ಸ್ಥಳ.

**3. ಮಾಯಾ :** ಇದು ಹರಿದ್ವಾರವೆಂದು ಕರೆಯಲ್ಪಡುತ್ತಿರುವ ಪುಣ್ಯ ಕ್ಷೇತ್ರವಾಗಿದೆ. ಗಂಗಾದ್ವಾರವೆಂದೂ ಸಹ ಕರೆಯುತ್ತಾರೆ.

**4. ಕಾಶೀ :** ಸಾಕ್ಷಾತ್ ಪರಶಿವನು ಕಾಶೀ ವಿಶ್ವನಾಥಸ್ವಾಮಿಯೆಂಬ ಹೆಸರಿನಿಂದ ಆವಿರ್ಭವಿಸಿ ಭಕ್ತರನ್ನು ಅನುಗ್ರಹಿಸುತ್ತಿರುವ ಪರಮ ಪವಿತ್ರ ಕ್ಷೇತ್ರವು.

ಈ ನಾಲ್ಕು ಪುಣ್ಯಕ್ಷೇತ್ರಗಳು ಇಂದಿನ ಉತ್ತರ ಪ್ರದೇಶ ರಾಜ್ಯಕ್ಕೆ ಸೇರಿದುದಾಗಿವೆ. ಭಾರತದ ಸಕಲ ಸ್ಥಳಗಳಿಂದಲೂ ಈ ಸ್ಥಳಗಳಿಗೆ ಹೋಗಲು ಅನುಕೂಲವಿದೆ.

**5. ಕಾಂಚಿ :** ದಕ್ಷಿಣ ಭಾರತದ ತಮಿಳುನಾಡು ರಾಜ್ಯಕ್ಕೆ ಸೇರಿದ ಪುಣ್ಯಕ್ಷೇತ್ರ.

**6. ಅವಂತಿ :** ಮಹಾಕಾಲೇಶ್ವರನೆಂಬ ಹೆಸರಿನಿಂದ ಪರಶಿವನು ಆವಿರ್ಭವಿಸಿರುವ ಪುಣ್ಯಕ್ಷೇತ್ರವು (ನೋಡಿ-ಅವಂತಿ-ಷಟ್‌ಪಂಚಾಶತ್ ದೇಶಗಳು) ಮಧ್ಯ ಪ್ರದೇಶ ರಾಜ್ಯಕ್ಕೆ ಸೇರಿದುದಾಗಿದೆ. ಇಂದಿನ ಉಜ್ಜಯಿನಿ ನಗರ.

**7. ದ್ವಾರಾವತೀ :** ಎರಡು ಕ್ಷೇತ್ರಗಳು ಈ ಹೆಸರಿನಿಂದ ಪ್ರಸಿದ್ಧವಾಗಿವೆ. ಶ್ರೀಕೃಷ್ಣ ಪರಮಾತ್ಮನು ಆಳಿದ, ಇಂದಿನ ಗುಜರಾತ್ ರಾಜ್ಯಕ್ಕೆ ಸೇರಿದ ದ್ವಾರಕಾ ಪುಣ್ಯಕ್ಷೇತ್ರ ಮತ್ತು ಜಗನ್ನಾಥ' ಸ್ವಾಮಿಯೆಂಬ ಹೆಸರಿನಿಂದ ಆವಿರ್ಭವಿಸಿರುವ ಸಾಕ್ಷಾತ್ ವಿಷ್ಣು ದೇವರ ಪುಣ್ಯ ಕ್ಷೇತ್ರವಾದ ಪುರಿ ಅಥವಾ ಜಗನ್ನಾಥ ಕ್ಷೇತ್ರವನ್ನೇ ಒಂದು ಪ್ರವೇಶದ್ವಾರವಾಗಿರುವುದರಿಂದ ದ್ವಾರಾವತೀ ಎಂದು ಕರೆಯುತ್ತಾರೆ. ಇದು ಇಂದಿನ ಒರಿಸ್ಸಾ ರಾಜ್ಯಕ್ಕೆ ಸೇರಿದುದಾಗಿದೆ. (ನೋಡಿ-ಅಷ್ಟದಶೋಪದ್ವೀಪಗಳು)

shrinath.udupa@gmail.com

ಈ ಪುಣ್ಯ ಪುರಿಗಳು ಭಾರತೀಯರಿಗೆ ಅತ್ಯಂತ ಪೂಜನೀಯ ಪುಣ್ಯ ಕ್ಷೇತ್ರಗಳಾಗಿವೆ. ಪ್ರತಿಯೊಬ್ಬ ಭಾರತೀಯನೂ ತನ್ನ ಜೀವಮಾನದಲ್ಲಿ ಒಮ್ಮೆಯಾದರೂ ಈ ಕ್ಷೇತ್ರಗಳಲ್ಲಿ ವಾಸಮಾಡಬೇಕಾದ ಆವಶ್ಯಕತೆಯನ್ನು ಶಾಸ್ತ್ರಗಳು ಒತ್ತಿ ಹೇಳುತ್ತವೆ. ಕ್ಷೇತ್ರವಾಸವು ಸಾಧ್ಯವಾಗದಿದ್ದಲ್ಲಿ ಕ್ಷೇತ್ರದರ್ಶನವನ್ನಾದರೂ ಮಾಡಿ, ಪರಮಾತ್ಮನ ಸೇವೆಯನ್ನು ತನ್ನ ಶ್ರೇಯಸ್ಸಿಗಾಗಿ ಮಾಡಲೇಬೇಕಾದ ಅಗತ್ಯವನ್ನು ಸಕಲ ಪುರಾಣಗಳೂ ಉಲ್ಲೇಖಿಸಿರುತ್ತವೆ. ಭಾರತವು ಕರ್ಮಭೂಮಿಯೆನಿಸಿ, ಪ್ರತಿಯೊಬ್ಬನೂ ತಾನು ಮಾಡುವ ಶುಭ ಕರ್ಮಗಳಿಂದ ಪುಣ್ಯವನ್ನು ಸಂಪಾದಿಸಿ ಅದರ ಬಲದಿಂದ ಈ ಕ್ಷೇತ್ರಗಳಲ್ಲಿ ಪರಮಾತ್ಮನ ಸೇವೆಯನ್ನು ಮಾಡಿ, ತನ್ನ ಜನ್ಮವನ್ನು ಸಾರ್ಥಕಗೊಳಿಸಿಕೊಳ್ಳಬೇಕಾದ ಕರ್ತವ್ಯವಿರುವುದರಿಂದ, ಧರ್ಮಶಾಸ್ತ್ರಗಳು ಪದೇ ಪದೇ ಈ ತೀರ್ಥಯಾತ್ರಾ ಕ್ರಮವನ್ನು ವಿಧಿರೂಪದಿಂದ ಅನೇಕ ರೀತಿಯಲ್ಲಿ ವರ್ಣಿಸಿರುತ್ತವೆ.

**ಆದ್ದರಿಂದ ಇಂದು ಈ ಎಂಟು ದಿವ್ಯ ಕ್ಷೇತ್ರಗಳನ್ನೂ ಹಿಂದಿನ ವೈಭವ ಸ್ಥಿತಿಗೆ ತರುವ ಕಾರ್ಯವು ಪ್ರತಿಯೊಬ್ಬ ಭಾರತೀಯನ ಕರ್ತವ್ಯವೆನಿಸಿದೆ.**

**"ಭುವಿ ತೀರ್ಥಾನ್ಯನೇಕಾನಿ ಲೋಲಮಾಯುಶ್ಚಲಂ ಮನಃ |**
**ತತಃ ಸಪ್ತಪುರೀರ್ಯಾಯಾಂ ಸರ್ವ ತೀರ್ಥಾನಿ ತತ್ರ ಯತ್ ||"**
ಎಂಬುದಾಗಿ ಸ್ಕಾಂದ ಪುರಾಣವು ಹೇಳುತ್ತದೆ.

ಭೂಮಿಯಲ್ಲಿ ಅನೇಕ ತೀರ್ಥಗಳಿರುವುವು. ಆಯುಸ್ಸು ಅತ್ಯಲ್ಪವು ಮತ್ತು ಮನಸ್ಸು ಬಹಳ ಚಂಚಲವು. ಆದುದರಿಂದ ಸಪ್ತಪುರಿಯಲ್ಲಿ ಸರ್ವತೀರ್ಥಗಳೂ ಇರುವುದರಿಂದ, ಅವುಗಳ ಯಾತ್ರೆಯು ಬಹಳ ಪುಣ್ಯಕರವು.

**1.** ಅಯೋಧ್ಯಾ ಪುರಿ : ಮೋಕ್ಷ ಪುರಿಗಳಲ್ಲಿ ಮೊದಲನೆಯದಾದ ಈ ಕ್ಷೇತ್ರವು ಭಾರತೀಯರೆಲ್ಲರಿಗೂ ಅತ್ಯಂತ ಪವಿತ್ರವಾದುದು. ಪರಮಾತ್ಮನಾದ ವಿಷ್ಣುವು ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುವ ಸಲುವಾಗಿ ಶ್ರೀರಾಮಚಂದ್ರನೆಂಬ ಹೆಸರಿನಿಂದ ಅವತರಿಸಿದ ಪುಣ್ಯಪುರಿಯು. ಅತ್ಯಂತ ಕಠಿಣವಾದ ಸತ್ಯ, ಧರ್ಮ, ನಿಷ್ಠೆಗಳ ಆಚರಣೆಯು ಸಾಮಾನ್ಯ ಮನುಷ್ಯನಿಗೂ ಸಾಧ್ಯವೆಂಬುದನ್ನು ತೋರಿಸಿಕೊಡುವುದರ ಸಲುವಾಗಿ ಪರಮಾತ್ಮನೇ ಸಾಮಾನ್ಯ ಮನುಷ್ಯನ ರೂಪದಲ್ಲಿ ಇಲ್ಲಿ ಅವತರಿಸಿದನು. ಅತ್ಯಂತ ಧರ್ಮನಿಷ್ಠೆಯಿಂದ ರಾಜ್ಯವನ್ನು ಪರಿಪಾಲಿಸಿ, ಮಾದರಿಯಾದ ರಾಮರಾಜ್ಯವನ್ನು ಸೃಷ್ಟಿಸಿ, ಪ್ರಜೆಗಳಲ್ಲಿ ಸುಖ, ಶಾಂತಿ, ಆನಂದಗಳನ್ನು ಪ್ರತಿಷ್ಠಿಸಿ, ತನ್ನನ್ನು ಅನುಸರಿಸಿದವರೆಲ್ಲರಿಗೂ ಉತ್ತಮ ಲೋಕ ಪ್ರಾಪ್ತಿಯನ್ನು ಉಂಟುಮಾಡಿದ ಪುರುಷೋತ್ತಮ ಶ್ರೀರಾಮಚಂದ್ರಮೂರ್ತಿಯು ಜನಿಸಿದ ಸ್ಥಳ. ಶ್ರೀರಾಮಚಂದ್ರ ಮೂರ್ತಿಯ ಜನ್ಮ ಸ್ಥಾನವೆಂದು ಗತಕಾಲದಿಂದಲೂ ಪರಿಗಣಿಸಲ್ಪಟ್ಟ ಈ ಸ್ಥಾನದ ಬಗ್ಗೆ ಪುರಾಣಗಳಲ್ಲಿ ಈ ರೀತಿ ಹೇಳಲಾಗಿದೆ.

**"ಜನ್ಮಸ್ಥಾನಮಿದಂ ಪ್ರೋಕ್ತಂ ಮೋಕ್ಷಾದಿ ಫಲಸಾಧನಮ್|**
**ಯದ್ದೃಷ್ಟ್ವಾ ಚ ಮನುಷ್ಯಸ್ಯ ಗರ್ಭವಾಸಜಯೋ ಭವೇತ್||**
(ಸ್ಕಾಂದ-ವೈಷ್ಣವ-ಅಯೋಧ್ಯಾ ಮಹಾತ್ಮ್ಯ)



ಈ ಜನ್ಮಸ್ಥಾನವೆಂಬುದು ಮೋಕ್ಷಾದಿ ಫಲಸಾಧಕವಾದದ್ದು. ಇದರ ಸಂದರ್ಶನ ಮಾತ್ರದಿಂದಲೇ ಮಾನವನಿಗೆ ಗರ್ಭವಾಸದ ಅನಿಷ್ಟವು ತಪ್ಪಿ ಮುಕ್ತಿ ಪ್ರಾಪ್ತಿಯಾಗುವುದು.

**ಕಪಿಲಾ ಗೋ ಸಹಸ್ರಾಣಿ ಯೋ ದದಾತಿ ದಿನೇ ದಿನೇ |**
**ತತ್ಫಲಂ ಸಮವಾಪ್ನೋತಿ ಜನ್ಮಭೂಮೇಃ ಪ್ರದರ್ಶನಾತ್ ||**

ಪ್ರತಿದಿನವೂ ಸಾವಿರಾರು ಕಪಿಲೇ ಗೋವುಗಳನ್ನು ದಾನ ಮಾಡುವುದರಿಂದ, ಯಾವ ಫಲವು ದೊರಕುವುದೋ, ಅದೇ ಫಲವು ಶ್ರೀ ರಾಮಜನ್ಮಭೂಮಿಯನ್ನು ದರ್ಶನಮಾಡುವುದರಿಂದ ಲಭಿಸುವುದು.

**ಆಶ್ರಮೇ ವಸತಾಂ ಪುಂಸಾಂ ತಾಪಸಾನಾಂ ಚ ಯತ್ಫಲಮ್|**
**ರಾಜಸೂಯ ಸಹಸ್ರಾಣಿ ಪ್ರತಿವರ್ಷಾಗ್ನಿ ಹೋತ್ರತಃ |**
**ನಿಯಮಸ್ಥಂ ನರಂ ದೃಷ್ಟ್ವಾ ಜನ್ಮಸ್ಥಾನೇ ವಿಶೇಷತಃ ||**

ಆಶ್ರಮವಾಸಿಗಳಾದ ತಪಸ್ವಿಗಳಿಗೆ, ಜೀವನ ಪರ್ಯಂತ ಅಗ್ನಿಹೋತ್ರವನ್ನು ಆಚರಿಸುವವರಿಗೆ ಮತ್ತು ಸಾವಿರಾರು ರಾಜಸೂಯ ಯಜ್ಞಗಳನ್ನು ಮಾಡುವವರಿಗೆ ಸಿಕ್ಕುವ ಮಹತ್ಫಲವು ರಾಮಜನ್ಮಭೂಮಿಯ ದರ್ಶನ ಮಾಡುವವನಿಗೆ ದೊರೆಯುತ್ತದೆ.

**ಮಾತಾಪಿತ್ರೋರ್ಗುರೂಣಾಂ ಚ ಭಕ್ತಿಮುದ್ವಹತಾಂ ಸತಾಮ್|**
**ತತ್ಫಲಂ ಸಮವಾಪ್ನೋತಿ ಜನ್ಮಭೂಮಿ ಪ್ರದರ್ಶನಾತ್ ||**

ತಾಯಿತಂದೆಗಳಲ್ಲಿಯೂ, ಗುರುಜನರಲ್ಲಿಯೂ ಸದಾ ಭಕ್ತಿಯನ್ನು ಹೊಂದಿರುವವನಿಗೂ ಮತ್ತು ಮಹಾತ್ಮರನ್ನು ದರ್ಶನ ಮಾಡುವುದರಿಂದ ಪ್ರಾಪ್ತಿಯಾಗುವ ಫಲವು ಶ್ರೀರಾಮಚಂದ್ರ ಭೂಮಿಯ ಸಂದರ್ಶನದಿಂದ, ದೊರೆಯುವುದು.

ಪುರಾಣಗಳ ಪ್ರಕಾರ ಮನು ಚಕ್ರವರ್ತಿಯು ಪ್ರಥಮತಃ ಅಯೋಧ್ಯೆಯನ್ನು ಸ್ಥಾಪಿಸಿದನು. ಅನಂತರ ಮಾನ್ಧಾತಾ, ಹರಿಶ್ಚಂದ್ರ ಮುಂತಾದ ಚಕ್ರವರ್ತಿಗಳು ಇದನ್ನು ಆಳಿದರು. ಇವರೆಲ್ಲರೂ ನೂರಾರು ಅಶ್ವಮೇಧ, ರಾಜಸೂಯ ಯಾಗಗಳನ್ನು ಮಾಡಿ, ಈ ಪ್ರದೇಶವನ್ನು ಅತ್ಯಂತ ಪವಿತ್ರವಾಗಿರಿಸಿದರು.

ಇಂತಹ ಪವಿತ್ರ ಭೂಮಿಯಲ್ಲಿ ಶಕ ಪುರುಷನಾದ ವಿಕ್ರಮಾದಿತ್ಯನು ಶ್ರೀರಾಮಚಂದ್ರ ಮೂರ್ತಿಯ ಭವ್ಯ ದೇವಾಲಯವನ್ನು ನಿರ್ಮಿಸಿ, ಸಕಲ ಭಕ್ತಾದಿಗಳು ಪುಣ್ಯಭಾಗಿಗಳಾಗಲು ಅವಕಾಶಗಳನ್ನು ಮಾಡಿ ಕೃತಾರ್ಥನಾಗಿದ್ದನು. ಕಾಲಕ್ರಮೇಣ ವಿದೇಶಿಯರ ದಾಳಿಗೆ ಸಿಕ್ಕಿ ಈ ಕ್ಷೇತ್ರವು ದುರ್ಗತಿಯನ್ನು ಹೊಂದಿತು. ಅನಂತರ ಕ್ರಿ.ಶ. 1855ರಲ್ಲಿ ಪುನಃ ವೆರಗಿ ಎಂಬ ವೈಷ್ಣವ ಭಕ್ತರು ಅನೇಕ ಮಠ, ಅಖಾಡಗಳನ್ನು ನಿರ್ಮಿಸಿ, ಶ್ರೀರಾಮಚಂದ್ರ ಮೂರ್ತಿಯನ್ನು ಪ್ರತಿಷ್ಠಿಸುವುದರ ಮೂಲಕ, ಅಯೋಧ್ಯಾ ಕ್ಷೇತ್ರವನ್ನು ಪುನಃ ಸುಸ್ಥಿತಿಗೆ ತಂದರು (Immortal India - Vol. I). ಇಂದಿಗೂ ಲಕ್ಷಾಂತರ ಭಕ್ತರು ತೀರ್ಥಯಾತ್ರೆಗಾಗಿ ಬರುತ್ತಿರುವ ಈ ಪುಣ್ಯಭೂಮಿಯು ಭಾರತೀಯರಿಗೆ ಅತ್ಯಂತ ಪವಿತ್ರವಾಗಿದ್ದರೂ, ರಾಜಕೀಯ ಪರಿಸ್ಥಿತಿಗಳಿಗೆ

shrinath.udupa@gmail.com

ಸಿಕ್ಕಿ ಸ್ವತಂತ್ರ ಭಾರತದ ವಿವಾದಗ್ರಸ್ತ ಸ್ಥಳವಾಗಿ ಪರಿಣಮಿಸಿರುವುದು ಅತ್ಯಂತ ದುರದೃಷ್ಟಕರ ಸಂಗತಿ. ಈ ಸ್ಥಳವನ್ನು ಪುನಃ ಅದರ ಭವ್ಯವಾದ ಮೂಲ ಸ್ವರೂಪಕ್ಕೆ ತರಬೇಕಾದ ಜವಾಬ್ದಾರಿಯು ಪ್ರತಿಯೊಬ್ಬ ಭಾರತೀಯನಿಗೂ ಇರುವುದರಿಂದ, ನಮ್ಮೆಲ್ಲರನ್ನು ಶ್ರೀರಾಮಚಂದ್ರ ಮೂರ್ತಿಯು ಅನುಗ್ರಹಿಸಿ, ಅವನ ಸೇವೆಯನ್ನು ಮಾಡಲು ಅವಕಾಶವನ್ನು ಮಾಡಿಕೊಡುವನೆಂಬ ಅಚಲ ವಿಶ್ವಾಸ ಮತ್ತು ಭಕ್ತಿಯಿಂದ ನಾವು ಮುಂದುವರಿಯಬೇಕಾಗಿದೆ.

ಅಹೋ ವಿಷ್ಣುರಹೋ ತೀರ್ಥಂ ಅಯೋಧ್ಯಾऽಹೋ ಮಹಾಪುರೀ||
ಅಹೋ ಮಾಹಾತ್ಮ್ಯಮತುಲಂ ಕಿಂ ನ ಶ್ಲಾಘ್ಯಮಿಹ ಸ್ಥಿತಮ್ ||

ಆಹಾ! ವಿಷ್ಣುವು ಇಲ್ಲಿಯೇ ನೆಲೆಸಿರುವವನು. ಆಹಾ! ಈ ತೀರ್ಥವೆಷ್ಟು ಆಶ್ಚರ್ಯಕರವಾದುದು. ಆಹಾ! ಅಯೋಧ್ಯೆಯು ಎಂತಹ ಮಹಾಪುರಿಯು! ಇದರ ಮಾಹಾತ್ಮ್ಯೆಯು ಎಷ್ಟು ಅಸದೃಶವು. ಇಲ್ಲಿರುವುದು ಯಾವುದು ತಾನೇ ಶ್ಲಾಘ್ಯವಾಗಿರುವುದಿಲ್ಲ? (ಎಲ್ಲವೂ ಪ್ರಶಂಸನೀಯವಾಗಿದೆ).

**2. ಮಥುರಾ ಪುರಿ :** ಇದು ತ್ರೇತಾಯುಗಕ್ಕೆ ಸೇರಿದ ದೇಶವು. ಮಧು ಎಂಬವನು ಮೊದಲು ಆಳುತ್ತಿದ್ದುದರಿಂದ ಇದನ್ನು ಮಧುವನವೆಂದೂ ಹೇಳುತ್ತಾರೆ. ಇವನನ್ನು ಮತ್ತು ಇವನ ಮಗ ಲವಣನೆಂಬವನನ್ನು ಎದುರಿಸಿ ಶ್ರೀ ರಾಮಚಂದ್ರನ ಸಹೋದರ ಶತ್ರುಘ್ನನು ವಶಪಡಿಸಿಕೊಂಡ ಮೇಲೆ - ಇದಕ್ಕೆ ಮಥುರಾ ಎಂಬುದಾಗಿ ಹೆಸರಾಯಿತು. (ವಿ.ಪು.) ಅನಂತರ ಕಾಲಕ್ರಮದಲ್ಲಿ ಇದು ಯಾದವರ ವಶವಾಯಿತು. ಈ ವಂಶದಲ್ಲಿ ಹೆಸರಾದ ಉಗ್ರಸೇನ ಮಹಾರಾಜನು ಆಳುತ್ತಿದ್ದಾಗ, ಆತನ ಮಗನಾದ ದುಷ್ಟ ಕಂಸನೆಂಬವನು ತನ್ನ ಮಾತಾಪಿತೃಗಳು, ಸಹೋದರಿ ಮತ್ತು ಭಾವನನ್ನು ಕಾರಾಗೃಹದಲ್ಲಿ ಬಂಧಿಸಿ ತಾನೇ ರಾಜ್ಯವಾಳುತ್ತಿದ್ದಾಗ, ಈ ಪಾಪಿಯಿಂದ ಉಂಟಾದ ಭೂಭಾರ ಕಡಿಮೆ ಮಾಡಲು, ಈತನ ತಂಗಿ ದೇವಕಿಯೆಂಬವಳಿಗೆ ಅಷ್ಟಮ ಪುತ್ರನಾಗಿ ಪರಮಾತ್ಮನಾದ ವಿಷ್ಣುವು ಶ್ರೀಕೃಷ್ಣನೆಂಬ ಹೆಸರಿನಿಂದ ಅವತರಿಸಿ, ಕಂಸನನ್ನು ಕೊಂದು ಸಕಲರನ್ನೂ ಇವನ ಹಿಂಸೆಯಿಂದ ರಕ್ಷಿಸಿದನು. ಇಂದಿಗೂ ಸಹ ಭಾರತೀಯರು ಪ್ರತಿ ವರ್ಷದಲ್ಲೂ ಶ್ರಾವಣಮಾಸದಲ್ಲಿ ಕೃಷ್ಣ ಪಕ್ಷ ಅಷ್ಟಮಿಯಂದು, 'ಕೃಷ್ಣಜನ್ಮಾಷ್ಟಮೀ' ಎಂಬ ವ್ರತವನ್ನು ಭಕ್ತಿಯಿಂದ ಆಚರಿಸಿ, ಆತನು ಕಂಸನನ್ನು ಕೊಂದು ಜನರನ್ನು ರಕ್ಷಿಸಿದುದನ್ನು ಸ್ಮರಿಸುತ್ತಾರೆ. ಈ ವ್ರತವನ್ನು ಮುಕ್ತಾಯ ಮಾಡುವ ಮೊದಲು ಕೊಡುವ ಮುಖ್ಯ ಅಂಗವಾದ ಅರ್ಘ್ಯ ಪ್ರದಾನದಲ್ಲಿ;

"ಜಾತಃ ಕಂಸವಧಾರ್ಥಾಯ ಭೂಭಾರೋತ್ತಾರಣಾಯ ಚ|
ಕೌರವಾಣಾಂ ವಿನಾಶಾಯ ದೈತ್ಯಾನಾಂ ನಿಧನಾಯ ಚ ||
ಪಾಂಡವಾನಾಂ ಹಿತಾರ್ಥಾಯ ಧರ್ಮಸಂಸ್ಥಾಪನಾಯ ಚ|
ಗೃಹಾಣಾರ್ಘ್ಯಂ ಮಯಾ ದತ್ತಂ ದೇವಕ್ಯಾ ಸಹಿತೋ ಹರೇ ||



ಎಂಬುದಾಗಿ ಹೇಳಿ ಅರ್ಘ್ಯವನ್ನು ಕೊಡುತ್ತಾರೆ. ಇದರಿಂದಾಗಿ ವಿಷ್ಣುದೇವರೆತ್ತಿದ ಅವತಾರಗಳಲ್ಲಿ ಪ್ರಸಿದ್ಧಾವತಾರವೆನಿಸಿರುವ ಶ್ರೀ ಕೃಷ್ಣಾವತಾರವು ಆಗಿದ್ದ ಜನ್ಮಸ್ಥಾನವು ಭಾರತೀಯರೆಲ್ಲರಿಗೂ ಅತ್ಯಂತ ಪವಿತ್ರ ಸ್ಥಾನವಾಗಿದೆ. ಶ್ರೀ ಕೃಷ್ಣ ಪರಮಾತ್ಮನ ವಾಣಿಯಾದ ಶ್ರೀಮದ್ಭಗವದ್ಗೀತೆಯು ಪ್ರಪಂಚದ ಸಕಲ ಪ್ರಮುಖ ಭಾಷೆಗಳಲ್ಲಿಯೂ, ಆಯಾ ದೇಶದವರಿಂದಲೇ ಭಾಷಾಂತರಿಸಲ್ಪಟ್ಟಿರುವ ಅತ್ಯಂತ ಉತ್ತಮ ಗ್ರಂಥವೆನಿಸಲ್ಪಟ್ಟಿದೆ. ಶ್ರೀಕೃಷ್ಣ ಪರಮಾತ್ಮನು ಭಾರತ ದೇಶದಲ್ಲಿ ಅವತರಿಸಿದ ಲೋಕ ವಿಖ್ಯಾತ ಪುರುಷನಾಗಿರುವುದರಿಂದಲೂ, ಭಾರತೀಯರ ಆರಾಧ್ಯದೈವವೇ ಆಗಿರುವುದರಿಂದಲೂ, ಈತನು ಅವತರಿಸಿದ ಮಥುರಾ ಕ್ಷೇತ್ರವು ಪುಣ್ಯಪುರಿಗಳಲ್ಲಿ ಒಂದಾಗಿ ಭಕ್ತರನ್ನು ಅನುಗ್ರಹಿಸುತ್ತಿದೆ.

ಮಥುರಾ ಕ್ಷೇತ್ರದ ಶ್ರೀ ಕೃಷ್ಣ ಮಂದಿರದ ಚರಿತ್ರೆಯು ಬಹಳ ಕುತೂಹಲಕಾರಿಯಾಗಿದೆ.

1. ಮೊಟ್ಟ ಮೊದಲಿನ ಶ್ರೀ ಕೃಷ್ಣಮಂದಿರವು, ಶ್ರೀಕೃಷ್ಣನ ಮರಿಮಗನಾದ ವಜ್ರನಾಭನೆಂಬವನಿಂದ ನಿರ್ಮಾಣವಾಯಿತು;
2. ಕ್ರಿ. ಪೂ. 80-57ಕ್ಕೆ ಸೇರಿದ್ದ ಒಂದು ಶಿಲಾಶಾಸನದ ಪ್ರಕಾರ ಕ್ಷತ್ರಪಷೋಡಶನೆಂಬವನ ರಾಜ್ಯವಿದ್ದು, ಆ ಕಾಲದಲ್ಲಿ ಅವನು ಈ ಮಂದಿರಕ್ಕೆ ಒಂದು ರೂಪ ಕೊಟ್ಟು ನವೀಕರಿಸಿದನು.
3. ಕ್ರಿ. ಶ. 400ರಲ್ಲಿ ಗುಪ್ತರ ಸಾಮ್ರಾಜ್ಯದ ಚಂದ್ರಗುಪ್ತ ವಿಕ್ರಮಾದಿತ್ಯನೆಂಬವನಿಂದ ಎರಡನೇ ಅದ್ಭುತ ದೇವಾಲಯ ನಿರ್ಮಾಣವಾಯಿತು.
4. ಕ್ರಿ.ಶ. 1017ರಲ್ಲಿ ಈ ದೇವಾಲಯವು ಪರಕೀಯರ ದಾಳಿಗೆ ತುತ್ತಾಯಿತು. ಇದರ ಬಗ್ಗೆ "ಶ್ರೀ ಕೃಷ್ಣ ಜನ್ಮಸ್ಥಾನ ಸೇವಾ ಸಂಸ್ಥಾನ, ಮಥುರಾ" ಇವರು ಪ್ರಕಟಿಸಿರುವ "ಕೃಷ್ಣಜನ್ಮಸ್ಥಾನದ ಇತಿಹಾಸ"ವೆಂಬ ಕೈ ಹೊತ್ತಿಗೆಯಲ್ಲಿ ಒಂದು ಉಲ್ಲೇಖವಿದೆ.

"In 1017A.D., this Artistic Temple constructed during the time of Chandragupta Vikramaditya was destroyed by Mohmad Ghaznavi. Thus in his book "Tarikh -E-Yamini" Alutbi Mir Munishl of Ghaznavi has described this Grand Temple and the Prosperity of Mathura.

"In the Middle of the city was the temple, larger and finer than the rest to which neither painting nor description could do justice".

The Sulthan wrote about it ;

If any one wished to construct a building equal to it, he would not be able to do so without spending a hundred million dinars. And the work would occupy two hundred years, even though, the most able and experienced workmen were employed"

It is also stated "He saw a building of exquisite structure, which the inhabitants declared to be the handiwork not of men, but of genie.

shrinath.udupa@gmail.com

ದಾಳಿ ಮಾಡಿದವರೇ ಇಷ್ಟರ ಮಟ್ಟಿಗೆ ಹೇಳಿರುವ ಈ ಅದ್ಭುತ ದೇವಮಂದಿರವು ಇನ್ನು ನಿಜವಾಗಿಯೂ ಎಷ್ಟರ ಮಟ್ಟಿಗೆ ಇದ್ದಿತೆಂಬುದನ್ನೂ ಊಹಿಸಬಹುದಾಗಿದೆ.

5. ಕ್ರಿ. ಶ. 1150ರಲ್ಲಿ "ಜಜ್ಜ" ಎಂಬವನಿಂದ ಮೂರನೇ ಬಾರಿ ಈ ದೇವ ಮಂದಿರವು ಪುನನಿರ್ಮಾಣವಾಯಿತು. ಅತ್ಯಂತ ವೈಭವವಾಗಿ ಸುಮಾರು 400 ವರ್ಷಗಳ ಕಾಲ ಭಕ್ತರಿಂದ ತುಂಬಿ ತುಳುಕುತ್ತಿದ್ದಿತು.

6. 16ನೇ ಶತಮಾನದ ಆದಿ ಭಾಗದಲ್ಲಿ ಈ ಮೂರನೇ ಮಂದಿರವೂ ಸಹ ದಾಳಿಗೆ ತುತ್ತಾಯಿತು.

7.125 ವರ್ಷಗಳ ನಂತರ ಮತ್ತೆ ಅತ್ಯಂತ ವೈಭವವಾದ ಮಂದಿರವು "ರಾಜ ವೀರಸಿಂಹ ದೇವ ಬುಂದೇಲ" ರವರಿಂದ ನಿರ್ಮಾಣವಾಯಿತು. ಇದು 250 ಅಡಿ ಎತ್ತರದ ಅತ್ಯಂತ ಬೃಹತ್ತಾದ ದೇವಾಲಯವಾಗಿತ್ತೆಂದು ಹೇಳಲ್ಪಟ್ಟಿದೆ. ಫ್ರೆಂಚ್ ಯಾತ್ರಿಕ 'ಟಾವರ್ನ್ಯೆರ್' ಎಂಬವನು 1650ರ ಸುಮಾರಿಗೆ ಇಲ್ಲಿಗೆ ಬಂದಿದ್ದು, ಅವನ ಗ್ರಂಥಗಳ ಪ್ರಕಾರ - ಪುರಿ ಜಗನ್ನಾಥ, ಕಾಶೀ ವಿಶ್ವೇಶ್ವರ ಸ್ವಾಮಿ ದೇವಾಲಯಗಳನ್ನು ಬಿಟ್ಟರೆ, ಇದೇ ಅತ್ಯಂತ ಪ್ರಸಿದ್ಧ ದೇವಾಲಯವಾಗಿದ್ದಿತು. ಭವ್ಯ ಕಲಾಕೃತಿಗಳಿಂದೊಡಗೂಡಿದ ಈ ಮಂದಿರವು 10 ಮೈಲು ದೂರದವರೆಗೂ ಕಾಣುತ್ತಿತ್ತು, ಆಗ್ರಾ ಪಟ್ಟಣಕ್ಕೆ ಇದರ ತುದಿಯು ಕಾಣುತ್ತಿದ್ದು, ದೀಪಾವಳಿ ದಿನ ಇಲ್ಲಿ ಹೊತ್ತಿಸಲ್ಪಡುತ್ತಿದ್ದ ದೀಪಗಳ ಪ್ರಭೆಯು ಆಗ್ರಾ ಪಟ್ಟಣದಲ್ಲಿರುವ ರಾಜನು ನೋಡುವಂತಿದ್ದಿತು.

8. ಇಷ್ಟೊಂದು ಭವ್ಯವಾಗಿದ್ದ ಮಂದಿರವೂ ಸಹ, ವಿಧಿ ವಶದಿಂದ 1669ರಲ್ಲಿ ಮತ್ತೆ ದಾಳಿಗೆ ತುತ್ತಾಯಿತು. ಇಲ್ಲಿನ ಶ್ರೇಷ್ಠ ಕಲಾಕೃತಿಗಳು ಬೇರೆ ಬೇರೆ ಕಟ್ಟಡಗಳಿಗೆ ಹಂಚಿಹೋದವು.

9. ಕೊನೆಗೆ 1803ರಲ್ಲಿ ಈ ಸ್ಥಳವು ಬ್ರಿಟಿಷರ ವಶಕ್ಕೆ ಸೇರಿ, ಹರಾಜಿಗೆ ಬಂದಾಗ ಕಾಶೀ ರಾಜ್ಯದ 'ರಾಜ ಪನ್ನೇಮಾಲ್' ಎಂಬವರು ಧರ್ಮೋದ್ಧಾರ ಮಾಡುವ ಉದ್ದೇಶವನ್ನು ಹೊಂದಿ, ಈ ಸ್ಥಳವನ್ನು ತಮ್ಮದನ್ನಾಗಿ ಮಾಡಿಕೊಂಡರು. ಆದರೆ ಅನ್ಯ ಮತೀಯರ ದುರುದ್ದೇಶಕ್ಕೆ ಒಳಗಾಗಿ, ವಿಚಾರವು ನ್ಯಾಯಾಲಯಕ್ಕೆ ಹೋಯಿತು. ಅಂತೂ ಇಂತೂ ಕೊನೆಗೆ ರಾಜಾ ಪನ್ನೇಮಾಲ್‌ರವರ ವಂಶಸ್ಥರಾಗಿದ್ದ 'ರಾಯ್ ಕೃಷ್ಣದಾಸ್' ಎಂಬವರು ಆ ಪವಿತ್ರ ಸ್ಥಳದ ವಾರಸುದಾರರೆಂದು ನ್ಯಾಯಾಲಯದಲ್ಲಿ ತೀರ್ಮಾನವಾಗಿ, ಅವರ ಆಸ್ತಿಯೆಂದು ಘೋಷಿಸಲ್ಪಟ್ಟಿತು. ಹಣದ ತೊಂದರೆಯಿಂದ ಇವರು ಮಂದಿರವನ್ನು ನಿರ್ಮಾಣಮಾಡಲು ಅಸಮರ್ಥರಾಗಿದ್ದಾಗ, ಪಂಡಿತ ಮದನ ಮೋಹನ ಮಾಳವೀಯರು ಮಹತ್ವಾಕಾಂಕ್ಷೆಯನ್ನು ಹೊಂದಿ, ಮದನ ಜುಗಲ್ ಕಿಶೋರ್ ಬಿರ್ಲಾ ಎಂಬ ದಾನಿಗಳಿಂದ ಹಣ ಸಂಗ್ರಹಣೆ ಮಾಡಿ, ದಾಸ್‌ರವರಿಗೆ ನ್ಯಾಯಾಲಯದ ಖರ್ಚನ್ನು ಭರಿಸಿ, 'ಕತ್ರ ಕೇಶವ ದೇವ' ಎಂಬ ಹೆಸರನ್ನು ಹೊಂದಿದ್ದ ಪವಿತ್ರ ಸ್ಥಾನವನ್ನು, 1944ರಲ್ಲಿ ತಮ್ಮದಾಗಿರಿಸಿಕೊಂಡರು. ಆದರೆ



shrinath.udupa@gmail.com

ದುರ್ದೈವದಿಂದ ಕೃಷಜನ್ಮಸ್ಥಾನವು ಇದರಲ್ಲಿ ಸೇರಿರಲಿಲ್ಲ. ಕಾರಣ ಆ ಪವಿತ್ರ ಸ್ಥಾನದಲ್ಲಿ ಆಗಾಗಲೇ ಒಂದು ಮಸೀದಿಯು ನಿರ್ಮಾಣಗೊಂಡಿತ್ತು.

ಭವ್ಯ ಮಂದಿರವನ್ನು ನಿರ್ಮಿಸಬೇಕೆಂಬ ಅವರ ಮಹತ್ವಾಕಾಂಕ್ಷೆ ಅವರ ಜೀವಿತ ಕಾಲದಲ್ಲಿ ನೆರವೇರದೆ ಹೋಯಿತು. ಆದರೆ ಅವರ ಇಚ್ಛೆಯನ್ನು ಪೂರೈಸಲು, ಅನೇಕ ಭಕ್ತಾದಿಗಳು ಸೇರಿ, 1951ರಲ್ಲಿ "ಶ್ರೀಕೃಷ್ಣ ಜನ್ಮಸ್ಥಾನ ಸೇವಾ ಸಂಸ್ಥಾನ" ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಈ ಸಂಸ್ಥೆಯು, ಅನೇಕ ಮಹನೀಯರ ಮಾರ್ಗದರ್ಶನದಲ್ಲಿ, ನ್ಯಾಯಾಂಗದ ತೊಡಕುಗಳನ್ನು ನಿವಾರಿಸಿಕೊಂಡು ಧೃತಿಗೆಡದೆ ಮುಂದುವರೆದು, ಈಗ ಇರುವ ಸುಂದರವಾದ ದೇವಾಲಯವನ್ನು 1958ರ ಭಾದ್ರಪದ ಕೃಷ್ಣ ಅಷ್ಟಮಿಯಂದು ಬಾಲಕೃಷ್ಣನ ವಿಗ್ರಹವನ್ನು ಪ್ರತಿಷ್ಠಾಪಿಸುವುದರ ಮೂಲಕ ಉದ್ಘಾಟಿಸಿ, ಸಮಾರಂಭವನ್ನು ಮಾಡಿ, 1982ರಲ್ಲಿ "ಭಾಗವತ ಭವನ" ಎಂಬ ಹೆಸರಿನಿಂದ ಅದ್ಭುತವಾದ ದೇವಾಲಯವನ್ನು ನಿರ್ಮಿಸುವುದರಲ್ಲಿ ಯಶಸ್ವಿಯಾದರು. ಈ ಮಂದಿರದಲ್ಲಿ ಪ್ರಧಾನವಾದುದು ಆರು ಅಡಿ ಎತ್ತರದ ಭವ್ಯ ರಾಧಾಕೃಷ್ಣ ಸ್ವಾಮಿ ಸನ್ನಿಧಿಯು. ಬಲಗಡೆ ಶ್ರೀ ಬಲರಾಮ ಸುಭದ್ರಾ ಜಗನ್ನಾಥ ಸ್ವಾಮಿ, ದುರ್ಗಾದೇವಿ ಮತ್ತು ಕೇಶವೇಶ್ವರನೆಂಬ ರಸಲಿಂಗ ಸನ್ನಿಧಿಯಿದ್ದು, ಮುಂಭಾಗದಲ್ಲಿ ಚೈತನ್ಯ ಮಹಾ ಪ್ರಭುಗಳ ಸನ್ನಿಧಿಯನ್ನು ಹೊಂದಿದೆ. ಪ್ರಧಾನ ಸನ್ನಿಧಿಗೆ ಎಡಭಾಗದಲ್ಲಿ ಸೀತಾರಾಮ ಲಕ್ಷ್ಮಣ ಆಂಜನೇಯ ದೇವರ ಸನ್ನಿಧಿಯಿದ್ದು ಭವ್ಯವಾಗಿರುವುದು. ಅನೇಕ ತೈಲ ಚಿತ್ರಗಳನ್ನು ಹೊಂದಿರುವ ವಿಶಾಲವಾದ ಸಭಾಂಗಣ, ಉಪನ್ಯಾಸ ಮಂದಿರ, ಆರೋಗ್ಯಾಲಯ, ವಾಚನಾಲಯ, ಯಾತ್ರಿಗಳಿಗಾಗಿ ಉತ್ತಮ ಧರ್ಮಶಾಲೆ, ಮುಂತಾದ ಅನೇಕ ಸುಂದರವಾದ ಅಂಕಣಗಳನ್ನು ಹೊಂದಿರುವ ಇದು ಬೃಹತ್ ದೇವಾಲಯವಾಗಿದೆ. ಇಂದು ಭಾರತೀಯರೆಲ್ಲರೂ ಬಂದು ಆರಾಧಿಸಬೇಕಾದ ದಿವ್ಯಕ್ಷೇತ್ರವಾಗಿ ಮಾರ್ಪಟ್ಟಿದೆ. ಆದರೆ ಪವಿತ್ರವಾದ 'ಶ್ರೀ ಕೃಷ್ಣ ಜನ್ಮಸ್ಥಾನ'ವು ನಮಗೆ ಇನ್ನೂ ದಕ್ಕಿರದಯೇ ಇರುವುದರಿಂದ - ನಿಜವಾದ ಮೂಲ ಸ್ಥಾನದ ಮೇಲೆ ದೇವಾಲಯ ನಿರ್ಮಾಣವು ಸಾಧ್ಯವಾಗಿಯೇ ಇಲ್ಲ. ಈ ವಿಚಾರದಲ್ಲಿ ಹೋರಾಟ ಮುಂದುವರಿದೇ ಇದೆ. ದೇವಾಲಯಗಳ ಬೀಡಾಗಿರುವ ಭಾರತ ದೇಶದಲ್ಲಿ ಕಳೆದು ಹೋಗಿರುವ ಆಧ್ಯಾತ್ಮಿಕ ವೈಭವಗಳನ್ನು ಪುನಃ ಪ್ರತಿಷ್ಠಾಪಿಸಲು ಮಥುರಾ ಕ್ಷೇತ್ರದ ಚರಿತ್ರೆಯು ಎಲ್ಲರಿಗೂ ಮಾರ್ಗದರ್ಶಿಯಾಗಿದೆ. ಕಳೆದು ಹೋಗಿದ್ದ ವೈಭವವನ್ನು ಮತ್ತೆ ಪ್ರತಿಷ್ಠಾಪಿಸಲು ತಮ್ಮ ತನು, ಮನ, ಧನಗಳನ್ನು ತ್ಯಾಗಮಾಡಿದ ಭಕ್ತವೀರರನ್ನು ಸ್ಮರಿಸಿ, ಇಂದೂ ಹರಿಯುತ್ತಿರುವ ಅವರ ಚೇತನಾ ಶಕ್ತಿಯನ್ನು ಮೈಗೂಡಿಸಿಕೊಂಡು ಆಧ್ಯಾತ್ಮಿಕ ಕ್ಷೇತ್ರದಲ್ಲಿ ಮಾಡಬೇಕಾದ ಅನೇಕ ಕೆಲಸಗಳನ್ನು ಮುಂದುವರೆಸುವ ಕರ್ತವ್ಯವು ನಮ್ಮ ಪಾಲಿಗಿದೆ.

**3. ಮಾಯಾ ಪುರಿ :** ಪ್ರಾಚೀನ ಕಾಲದಲ್ಲಿ ಮಾಯಾಪುರಿಯೆಂದು ಕರೆಯಲ್ಪಡುತ್ತಿದ್ದ ಈ ಪುಣ್ಯ ಕ್ಷೇತ್ರವೇ ಇಂದು ಗಂಗಾದ್ವಾರ ಅಥವಾ ಹರಿದ್ವಾರವೆಂದು ಪ್ರಸಿದ್ಧವಾಗಿದೆ. ಬದರಿ ನಾರಾಯಣ ಮತ್ತು ಕೇದಾರನಾಥೇಶ್ವರ ಕ್ಷೇತ್ರಗಳಿಗೆ ಇದು ಮಹಾದ್ವಾರವಾಗಿರುವುದರಿಂದ ಇದನ್ನು ಹರಿ ಅಥವಾ ಗಂಗಾದ್ವಾರವೆಂದು ಕರೆಯುತ್ತಾರೆ. ಹಿಮಾಲಯದಿಂದ ಹರಿದು ಬರುವ

ಪವಿತ್ರ ಗಂಗೆಯು ಭಾರತ ದೇಶದ ಸಮಭೂಮಿಯ ಮೇಲೆ ಹರಿಯಲು ಪ್ರಾರಂಭಿಸುವ ಕ್ಷೇತ್ರವು. ಬೃಹಸ್ಪತಿಗ್ರಹವು ಕುಂಭರಾಶಿಗೆ 12 ವರ್ಷಗಳಿಗೆ ಒಮ್ಮೆ ಬಂದಾಗ, ಮಹಾಕುಂಭಮೇಳವು ಈ ಕ್ಷೇತ್ರದಲ್ಲಿ ಆಚರಿಸಲ್ಪಟ್ಟು ಭಾರತೀಯರಲ್ಲದೇ ಹೊರದೇಶಗಳಿಂದಲೂ ಸಹ ಅಸಂಖ್ಯಾತ ಯಾತ್ರಾರ್ಥಿಗಳನ್ನು ಇದು ಆಕರ್ಷಿಸುತ್ತದೆ. ಇಲ್ಲಿಯ ಗಂಗಾತೀರ್ಥ ಸ್ನಾನವು ಭಾರತೀಯರೆಲ್ಲರಿಗೂ ಕರ್ತವ್ಯವ್ರತವಾಗಿದೆ. ಕಪಿಲ ಮಹರ್ಷಿಗಳು, ಶಂತನು ಚಕ್ರವರ್ತಿಯ ತಂದೆಯಾದ ಪ್ರತೀಪರಾಜ, ಭರದ್ವಾಜ ಮಹರ್ಷಿಗಳು, ಭಗವಾನ್ ದತ್ತಾತ್ರೇಯರೇ ಮುಂತಾದ ಅನೇಕ ಪವಿತ್ರ ವಿಭೂತಿಗಳು ತಪಸ್ಸನ್ನು ಆಚರಿಸಿದ ಸ್ಥಳವು. ಮೊಟ್ಟಮೊದಲು ಶ್ರೀಮದ್ಭಾಗವತ ಸಪ್ತಾಹವನ್ನು ಆಚರಿಸಲು ನಾರದ ಮಹರ್ಷಿಗಳು ಮತ್ತು ಸನಕಾದಿಗಳು ಆರಿಸಿದ ಪವಿತ್ರ ಸ್ಥಳವೂ ಸಹ ಇದೇ ಆಗಿದೆ.

ಹರಿಕ್ಷೇತ್ರೇ ಹರಿಂ ದೃಷ್ಟ್ವಾ ಸ್ನಾತ್ವಾ ಪಾದೋದಕೇ ಜನಃ |
ಸರ್ವಪಾಪ ವಿನಿರ್ಮುಕ್ತೋ ಹರಿಣಾ ಸಹ ಮೋದತೇ ||

ಹರಿದ್ವಾರದಲ್ಲಿ ಶ್ರೀ ಹರಿಯ ದರ್ಶನ ಮಾಡಿ, ಹರಿಯ ಪಾದೋದಕವೆನಿಸಿದ, ಗಂಗೆಯಲ್ಲಿ ಸ್ನಾನ ಮಾಡಲು- ಜನರು ಸರ್ವ ಪಾಪಗಳಿಂದಲೂ ವಿಮುಕ್ತಿ ಹೊಂದಿ- ಮಹಾವಿಷ್ಣುವಿನೊಡನೆ ವೈಕುಂಠದಲ್ಲಿ ವಾಸಿಸುವರು. (ಸ್ಕಾಂದ ಪು.)

**4.** ಕಾಶೀಪುರಿ : ಅವಿಮುಕ್ತವೆಂದು ಕರೆಯಲ್ಪಡುವ ಈ ಪುಣ್ಯಪುರಿಯನ್ನು ಮತ್ಸ್ಯ ಪುರಾಣವು ಈ ರೀತಿ ಸ್ತುತಿಸಿದೆ.

ಅವಿಮುಕ್ತಂ ಪರಂ ಕ್ಷೇತ್ರಂ ಅವಿಮುಕ್ತೇ ಪರಾ ಗತಿಃ |
ಅವಿಮುಕ್ತೇ ಪರಾ ಸಿದ್ಧಿಃ ಅವಿಮುಕ್ತೇ ಪರಂ ಪದಮ್ ||

ಅವಿಮುಕ್ತವು ಅತ್ಯುತ್ತಮ ಕ್ಷೇತ್ರವು; ಅವಿಮುಕ್ತವು ಪರಮಗತಿಯನ್ನು ಕೊಡುವುದು. ಅವಿಮುಕ್ತವು ಪರಮಸಿದ್ಧಿಯನ್ನು ಕೊಡುವುದು. ಅವಿಮುಕ್ತವು ಪರಮಪದವನ್ನು ದೊರಕಿಸಿ ಕೊಡುವುದು.

ಈ ಕ್ಷೇತ್ರದ ಹೆಸರು ಶತಪಥ ಬ್ರಾಹ್ಮಣ, ಶುಕ್ಲಯಜುರ್ವೇದ ಮತ್ತು ಬೃಹದಾರಣ್ಯಕ ಉಪನಿಷತ್ತಿನಂತಹ ಅತ್ಯಂತ ಪ್ರಾಚೀನ ವೇದ ಸಾಹಿತ್ಯದಲ್ಲಿ ಸಹ ಉಕ್ತವಾಗಿದೆ.

ಸಾಕ್ಷಾತ್ ಶಿವನೇ ಪಾರ್ವತೀ ದೇವಿಯನ್ನು ಕುರಿತು ಈ ರೀತಿ ಹೇಳಿರುವನು. "ಪ್ರಿಯೇ! ವಾರಣಾಸಿಯು ಅತ್ಯಂತ ಪುಣ್ಯಕರವು. ಸಿದ್ಧರಿಂದಲೂ ಗಂಧರ್ವರಿಂದಲೂ ಸೇವಿಸಲ್ಪಡುತ್ತಿರುವುದು. ತ್ರಿಪಥಗಾಮಿನಿ ಗಂಗಾ ಇಲ್ಲಿ ಪ್ರವಹಿಸುತ್ತಿರುವಳು. ಅದು ನನಗೆ ಅತ್ಯಂತ ಪ್ರಿಯವಾದ ಸ್ಥಳವು".

ಪರಮೇಶ್ವರನು ಜ್ಯೋತಿರೂಪದಿಂದ ಇಲ್ಲಿ ಯಾವಾಗಲೂ ಬೆಳಗುತ್ತಿರುವುದರಿಂದಲೇ ಈ ಕ್ಷೇತ್ರವು ಕಾಶಿಯೆಂದು (ಕಾಶ್ ಎಂದರೆ ಬೆಳಗುವುದು ಎಂದರ್ಥ) ಕರೆಯಲ್ಪಡುತ್ತದೆ.



ವಾರಣ ಮತ್ತು ಅಸೀ ಉಪನದಿಗಳ ನಡುವಿನ ಗಂಗಾತೀರದಲ್ಲಿರುವ ಕ್ಷೇತ್ರವಿದಾಗಿರುವುದರಿಂದ ವಾರಣಾಸಿ ಎಂಬುದಾಗಿಯೂ ಪ್ರಸಿದ್ಧವು.

ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಬಹು ಮುಖ್ಯವಾದ ವಿಶ್ವೇಶ್ವರ ಸ್ವಾಮಿಯು ಪೂಜೆಗೊಳ್ಳುತ್ತಿರುವ ಪವಿತ್ರ ಸ್ಥಳವು.

ಪ್ರತಿಯೊಬ್ಬ ಭಾರತೀಯನೂ ತನ್ನ ಕುಟುಂಬದೊಡನೆ ಜೀವಮಾನದಲ್ಲಿ ಒಮ್ಮೆಯಾದರೂ ಕಾಶೀಯಾತ್ರೆ ಮಾಡಲು ಬಯಸಿ ಪರಮಾತ್ಮನನ್ನು ಆರಾಧಿಸುವ ಕ್ಷೇತ್ರವಿದಾಗಿದೆ.

ವೇದಗಳ ಕಾಲದಿಂದಲೂ ಮತ್ತು ಇಂದಿಗೂ ಸಹ ಕಾಶೀ ವಿಶ್ವನಾಥನ ದರ್ಶನವನ್ನು ತಮ್ಮ ಅಂತಿಮ ಇಚ್ಛೆಯೆಂದು ಪ್ರತಿಯೊಬ್ಬರೂ ಭಾರತದೇಶದಲ್ಲಿ ಪರಿಗಣಿಸಿದ್ದಾರೆ. ಈ ರಾಜ್ಯವನ್ನು ಸಾಕ್ಷಾತ್ತಾಗಿ ಶಿವನೇ ಆಳಿದನೆಂದು ಪುರಾಣಗಳ ಉಕ್ತಿಯು. ತ್ರಿಲೋಕಗಳೂ ಸೇರಿ ಒಂದಾಗಿರುವ ಸ್ಥಳವೇ ಕಾಶೀ ಕ್ಷೇತ್ರವು ಮತ್ತು "ನನ್ನ ರಾಜಗೃಹವು ಇಲ್ಲಿಯೇ ಪ್ರತಿಷ್ಠಿತವಾಗಿರುವುದು " ಎಂಬುದು ಶಿವೋಕ್ತಿಯು.

ಭಾರತೀಯರಿಗೆ ಅತ್ಯಂತ ಪ್ರಮುಖ ಪುಣ್ಯ ಪುರಿಯಾಗಿರುವುದರಿಂದ, ಈ ಕ್ಷೇತ್ರದ ಚರಿತ್ರೆಯನ್ನು ತಿಳಿಯುವುದು ನಮ್ಮ ಕರ್ತವ್ಯ. ಈ ಕ್ಷೇತ್ರವು ಎಷ್ಟು ಪ್ರಾಚೀನವಾದುದೆಂದು ಹೇಳಲು ಕಷ್ಟವಾದರೂ, ರೋಮ್ ಚಕ್ರಾಧಿಪತ್ಯವು ಸ್ಥಾಪಿತವಾಗುವ ವೇಳೆಗಾಗಲೇ ಭಾರತದಲ್ಲಿ ಇದು ಅತ್ಯಂತ ಪ್ರಸಿದ್ಧವಾಗಿದ್ದಿತು. ಉನ್ನತ ದರ್ಜೆಯ ಜ್ಞಾನಪೀಠವೆಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದಿತು. ಇದಕ್ಕೆ ಕಾರಣ ಮಹಿಮಾನ್ವಿತವಾದ ಕ್ಷೇತ್ರ, ಅಲ್ಲಿಯ ಭೂಭಾಗದ ಪವಿತ್ರತೆ, ಭಾರತ ದೇಶಕ್ಕೇ ಅತ್ಯಂತ ಪವಿತ್ರವೆನಿಸಿದ ಗಂಗಾ ನದಿಯ ತೀರ, ಹಿಂದೂ ರಾಜರುಗಳಿಂದ ನಿರ್ಮಿತವಾಗಿದ್ದ ಅರಮನೆಗಳು, ದೇವಾಲಯಗಳು ಮತ್ತು ಸಾಲುಸಾಲಾದ ತೀರ್ಥ ಘಟ್ಟಗಳು, ಇಷ್ಟೇ ಅಲ್ಲದೆ ಅತ್ಯಂತ ಉತ್ತಮವೆನಿಸಿದ್ದ ಖಗೋಳಾಲಯ ಮುಂತಾದವುಗಳನ್ನೊಳಗೊಂಡಿದ್ದ ಅದ್ಭುತ ನಗರವಾಗಿ ಕಾಶಿಯು ಕಂಗೊಳಿಸುತ್ತಿತ್ತು. ಭಗವಾನ್ ಬುದ್ಧನು ಕ್ರಿ. ಪೂ. 500ರಲ್ಲಿ ಇಲ್ಲಿ ಇದ್ದನೆಂಬುದಲ್ಲದೆ ಈ ನಗರವು ಮಹಾಭಾರತ ಮತ್ತು ರಾಮಾಯಣಗಳಲ್ಲೂ ವರ್ಣಿತವಾದ ಕ್ಷೇತ್ರವಾಗಿದೆ. ಕ್ರಿ. ಪೂ. 1000ದ ಸುಮಾರಿನಲ್ಲಿ ಈ ನಗರವನ್ನು ಈ ರೀತಿ ವರ್ಣಿಸಲಾಗಿದೆ. "ಆನಂದ ಕಾನನ ಎಂಬ ಹೆಸರಿನಿಂದ ಕಂಗೊಳಿಸುತ್ತಿರುವ ಈ ಸ್ಥಳದಲ್ಲಿ ಅನೇಕ ಪವಿತ್ರ ಕೊಳಗಳೂ, ಸರೋವರಗಳೂ ಇದ್ದು, ಇಲ್ಲಿದ್ದ ಪ್ರಸಿದ್ಧ ಗುರುಕುಲಗಳಲ್ಲಿ ಅನೇಕ ಋಷಿಗಳೂ, ವಿದ್ಯಾರ್ಥಿಗಳೂ, ಸಂನ್ಯಾಸಿಗಳೂ, ಜ್ಞಾನಿಗಳೂ, ಪಂಡಿತರೂ ಜಿಜ್ಞಾಸುಗಳೂ ವಾಸಿಸುತ್ತಿದ್ದರು. ಭಾರತದ ಬೇರೆ ಯಾವದೇ ಭಾಗದಲ್ಲಿರುವ ಯಾವ ವಿದ್ವಾಂಸನೇ ಆಗಲಿ ಈ ಕ್ಷೇತ್ರಕ್ಕೆ ಬಂದು ಇಲ್ಲಿನ ಪಂಡಿತರಿಂದ ಸೈ ಎನಿಸಿಕೊಳ್ಳದಿದ್ದಲ್ಲಿ, ಅವನು ಉತ್ತಮ ವಿದ್ವಾಂಸನೆಂಬ ಹೆಸರಿಗೆ ಪಾತ್ರನಾಗುತ್ತಿರಲಿಲ್ಲ." ಇದೇ ಸಂಸ್ಕೃತಿಯನ್ನು ಮುಂದುವರೆಸಿ, 1916ರಲ್ಲಿ ಪಂಡಿತ ಮದನ ಮೋಹನ ಮಾಳವೀಯರಿಂದ ಸ್ಥಾಪಿಸಲ್ಪಟ್ಟ ಬನಾರಸ್ ಹಿಂದೂ ವಿಶ್ವವಿದ್ಯಾನಿಲಯ ಸುಮಾರು 1300 ಎಕರೆ ಪ್ರದೇಶದಲ್ಲಿ ತಲೆ ಎತ್ತಿ ನಿಂತಿರುವ ಪ್ರಸಿದ್ಧ ವಿದ್ಯಾ ಕೇಂದ್ರವೆನಿಸಿದೆ. ಇಲ್ಲಿ ಅನೇಕ

shrinath.udupa@gmail.com

ಪ್ರಾಚ್ಯ ಮತ್ತು ಪಾಶ್ಚಾತ್ಯ ವಿಷಯಗಳ ಬಗ್ಗೆ ಕಲಿಯುವ ಸಕಲ ಸೌಕರ್ಯಗಳಿವೆ. ದಕ್ಷಿಣ ಆಫ್ರಿಕಾದಲ್ಲಿ ವಜ್ರದ ಗಣಿಗಳನ್ನು ಕಂಡು ಹಿಡಿಯುವುದಕ್ಕೆ ಅನೇಕ ವರ್ಷಗಳ ಮೊದಲೇ ಭಾರತವು ವಜ್ರಗಳ ಉತ್ಪತ್ತಿಗೆ ಪ್ರಸಿದ್ಧವಾಗಿದ್ದು ಕಾಶಿಯಲ್ಲಿ ತಯಾರಾಗುತ್ತಿದ್ದ ವಜ್ರಾಭರಣಗಳಿಗೆ ಪ್ರಪಂಚದ ಅನೇಕ ದೇಶಗಳಿಂದ ಬೇಡಿಕೆಯಿದ್ದಿತು.

ಭಗವಾನ್ ಬುದ್ಧನ ಕಾಲದಲ್ಲಿ ಕೋಸಲ ದೇಶದ ಒಂದು ಭಾಗವಾಗಿದ್ದ ಈ ಕ್ಷೇತ್ರವು ಅತ್ಯಂತ ಪ್ರಸಿದ್ಧವಾಗಿ, ಸಾರನಾಥ ಮುಂತಾದ ಸ್ಥಳಗಳು ಇಂದಿಗೂ ಸಾಕ್ಷಿಯಾಗಿ ನಿಂತಿವೆ.

ಏಳನೇ ಶತಮಾನದಲ್ಲಿ ಚೀನೀ ಯಾತ್ರಿಕ ಹ್ಯೂಯನತ್ಸಾಂಗನು ಇಲ್ಲಿಗೆ ಬಂದಿದ್ದು, ಆತನು ಈ ಕ್ಷೇತ್ರವನ್ನು ಕಣ್ಣಿಗೆ ಕಟ್ಟುವಂತೆ ಈ ರೀತಿ ವರ್ಣಿಸಿರುತ್ತಾನೆ.

"ಈ ಕ್ಷೇತ್ರದಲ್ಲಿ 20 ಪ್ರಮುಖ ದೇವಾಲಯಗಳಿವೆ. ಇಲ್ಲಿನ ಗೋಪುರಗಳು ಮತ್ತು ದೇವಾಲಯಗಳು ಅತ್ಯದ್ಭುತವಾದ ಶಿಲ್ಪ ಕಲೆಗಳಿಂದ ತುಂಬಿವೆ. ನೆರಳನ್ನು ಕೊಡುವ ಅನೇಕ ವೃಕ್ಷಗಳಿಂದ ತುಂಬಿ, ಶುದ್ಧ ಜಲದ ಝರಿಗಳಿಂದ ಆವೃತವಾಗಿವೆ. ಇಲ್ಲಿರುವ ದೇವ ಮಹೇಶ್ವರನ ವಿಗ್ರಹವು ಪಂಚ ಲೋಹದ್ದಾಗಿ - 100 ಅಡಿಗಳ ಎತ್ತರವಿದೆ. ಅತ್ಯದ್ಭುತವಾಗಿ ಕಡೆದಿರುವ ಈ ವಿಗ್ರಹವು ನಿಜವಾಗಿ ಜೀವದಿಂದ ತುಂಬಿರುವಂತೆ ಕಾಣುತ್ತದೆ."

ಇಷ್ಟು ಭವ್ಯವಾದ ವಿಗ್ರಹವು ಏನಾಯಿತೆಂಬುದು ಕಾಲಗರ್ಭದಲ್ಲೇ ಅಡಗಿಹೋಗಿದೆ. ಅಂತೂ, ಇಲ್ಲಿ ನಿರೂಪಿತವಾಗಿರುವ ಮಂದಿರವು ಹಿಂದೆ ಇದ್ದ ಬೃಹತ್ ಕಾಶಿ ವಿಶ್ವನಾಥ ಸ್ವಾಮಿ ದೇವಾಲಯವೆಂದು ಇಂದಿನ ಸಂಶೋಧಕರಿಂದ ತೀರ್ಮಾನಿಸಲ್ಪಟ್ಟಿದೆ. ಇಷ್ಟು ಅದ್ಭುತವಾಗಿದ್ದ ಮತ್ತು ಹಿಂದೂಗಳಿಗೆ ಅತ್ಯಂತ ಪವಿತ್ರವಾಗಿದ್ದ ಈ ಮಂದಿರವೂ ಸಹ ಹಲವು ಬಾರಿ ವಿದೇಶಿಯರ ದಾಳಿಗೆ ತುತ್ತಾಯಿತು. ಆದರೆ ಮುಖ್ಯ ವಿಚಾರವೇನೆಂದರೆ, ಪ್ರತಿ ಸಾರಿ ಈ ದೇವಾಲಯವು ಧ್ವಂಸವಾದಾಗಲೂ, ಮತ್ತೆ ಮತ್ತೆ ಅಂದಿನ ರಾಜಾಶ್ರಯದಿಂದ ಪುನಃ ಪುನಃ ಜೀರ್ಣೋದ್ಧಾರವಾಗಿ, ಧರ್ಮೋದ್ಧಾರಕ್ಕೆ ಕಾರಣವಾಯಿತು.

ಈ ದೇವಾಲಯ ಚರಿತ್ರೆಯಲ್ಲಿ ಒಮ್ಮೆ ಬಹು ಮುಖ್ಯ ಸಂಗತಿಯೊಂದು ನಡೆಯಿತೆಂದು ಹೇಳಲ್ಪಟ್ಟಿದೆ. (Immortal India - Vol I - Published by Bharatiya Vidya Bhavan).

ಈ ಮಂದಿರವು ಹಲವು ಬಾರಿ ದಾಳಿಗಳಿಗೆ ಒಳಗಾಗಿದ್ದು, ಕೊನೆಯಲ್ಲಿ ಸಿಕಂದರ್ ಲೋಧಿ ಎಂಬವನು 1494ರಲ್ಲಿ ಇದನ್ನು ಪೂರ್ಣವಾಗಿ ಕೆಡವಿ, ಮತ್ತೆ ಕಟ್ಟುವುದನ್ನು ಸಂಪೂರ್ಣವಾಗಿ ನಿಷೇಧಿಸಿದ್ದನು. ಸುಮಾರು 70 ವರ್ಷಗಳ ಕಾಲ ಇವನ ಆಡಳಿತ ನಡೆದು, ಅಂದು ಅಲ್ಲಿದ್ದ ಅನೇಕ ಹಿಂದೂ ಮಹನೀಯರು ಈ ನಿಷೇಧಾಜ್ಞೆಯನ್ನು ತೆರವುಗೊಳಿಸಲು ಬಹಳವಾಗಿ ಹೆಣಗಿ ವಿಫಲರಾಗಿದ್ದರು. ಜನರು ಬಹು ಕಷ್ಟದಿಂದ ಜೀವನ ನಡೆಸುವಂತಾಯಿತು. ಅಂತಹ ಸಂದರ್ಭದಲ್ಲಿ ರಾಜ್ಯವು ವಿಪರೀತವಾದ ಕ್ಷಾಮಕ್ಕೆ ತುತ್ತಾಗಿ ಬಹಳಷ್ಟು ಪ್ರಜೆಗಳು ಅಸು ನೀಗುವಂತಾಯಿತು. ಅಲ್ಲಿ ವಾಸವಾಗಿದ್ದ ಅನೇಕ



ರಾಜವಂಶೀಯರಿಗೂ ಜೀವ ಭಯವುಂಟಾಗಿ, ಕಾಶಿಯಲ್ಲಿ ವಾಸವಾಗಿದ್ದ ಅತ್ಯಂತ ಜ್ಞಾನಿಗಳೂ ತಪಸ್ವಿಗಳೂ ಆಗಿದ್ದ ನಾರಾಯಣಭಟ್ಟರೆಂಬವರನ್ನು ಸಂಧಿಸಿ, ಈ ವಿಪತ್ತಿಗೆ ಪರಿಹಾರ ಉಪಾಯವನ್ನು ಸೂಚಿಸಬೇಕೆಂದು ಬೇಡಿಕೊಂಡರು. ಈ ವಿಪತ್ತು ಬರಲು ಕಾರಣ ವಿಶ್ವನಾಥ ಸ್ವಾಮಿಯ ಪೂಜೆಗಳು ನಿಂತಿರುವುದೇ ಆಗಿರುವುದೆಂದೂ, ಈಗಿರುವ ನಿಷೇಧಾಜ್ಞೆಯನ್ನು ತೆರವು ಮಾಡಿ, ಪುನಃ ಮಂದಿರವನ್ನು ನಿರ್ಮಿಸಿ, ಪೂಜೆಗಳು ಪ್ರಾರಂಭವಾದಲ್ಲಿ ಖಂಡಿತವಾಗಿಯೂ ದೇಶಕ್ಕೆ ಒಳಿತಾಗುವುದೆಂದೂ ಅವರು ತಿಳಿಸಿದರು. ಕಾಲವು ಬಹುಕ್ರೂರವಾಗಿದ್ದರಿಂದ ರಾಜನು ಇದಕ್ಕೆ ಒಪ್ಪಿ, ತಕ್ಷಣ ಏನಾದರೂ ಮಾಡಿ ಮಳೆಯು ಬರುವಂತೆ ಮಾಡಿದರೆ, ತಾನು ನಿಷೇಧಾಜ್ಞೆಯನ್ನು ತೆರವು ಮಾಡುವುದಾಗಿ ಒಪ್ಪಿದನು. ನಾರಾಯಣ ಭಟ್ಟರು ತೀವ್ರವಾದ ಅನುಷ್ಠಾನ ಮಾಡಿ, ಭಗವಂತನ ಅನುಗ್ರಹದಿಂದ ಮಳೆಯು ಬರುವಂತೆ ಮಾಡಿದರು. ಹೇಳಿದ ಮಾತಿನಂತೆ ರಾಜನು ಪುನರ್ನಿರ್ಮಾಣಕ್ಕೆ ಒಪ್ಪಿಗೆ ಇತ್ತನು. ಅನಂತರ 1569ರಲ್ಲಿ ಹಿಂದೂಗಳು ಅತ್ಯಂತ ಭವ್ಯವಾದ ಮಂದಿರವನ್ನು ನಿರ್ಮಿಸಿದರು. ಹ್ಯೂಯನ್‌ತ್ಸಾಂಗನು ವರ್ಣಿಸಿರುವ ದೇವಾಲಯವು ಇದೇ ಇರಬಹುದೆಂದು "ಡಾ|ಹವೆಲ್" ಎಂಬ ಸಂಶೋಧಕನು ಹೇಳಿರುತ್ತಾನೆ. ಆದರೆ ದುರದೃಷ್ಟದಿಂದ ಕೇವಲ 10 ವರ್ಷಗಳ ನಂತರ, ಮತ್ತೆ ಔರಂಗಜೇಬನ ದಂಡಯಾತ್ರೆಗೆ ಸಿಕ್ಕಿ, ಮಂದಿರವು ನೆಲಸಮವಾಯಿತು. ವಿಶ್ವನಾಥ ಮಂದರವಷ್ಟೇ ಅಲ್ಲದೇ, ಬಿಂದುಮಾಧವ ಮತ್ತು ಕೃತ್ತಿವಾಸ ದೇವಾಲಯಗಳೂ ಸಹ ಪೂರ್ತಿಯಾಗಿ ಅಥವಾ ಭಾಗಶಃ ನಾಶಹೊಂದಿದವು.

ಕಾಲಕ್ರಮೇಣ ಪುನಃ ಇಂದೂರಿನ ಮಹಾರಾಣಿ ಅಹಲ್ಯಾಬಾಯಿ ಹೋಳ್ಕರ್‌ರವರ ಕೃಪೆಯಿಂದ ಈಗಿರುವ ಮಂದಿರವು 1777ರಲ್ಲಿ ನಿರ್ಮಾಣವಾಯಿತು. ಇದೇ ವರ್ಷದ ಭಾದ್ರಪದ ಕೃಷ್ಣ ಅಷ್ಟಮಿ ಸೋಮವಾರದಂದು (ಕೃಷ್ಣಾಷ್ಟಮಿ) ಅಂದರೆ 25 ಆಗಸ್ಟ್ 1777 ರಂದು ಪುನಃ ಪ್ರತಿಷ್ಠಾಪನಾ ಕಾರ್ಯಕ್ರಮವು ಅತ್ಯಂತ ವಿಜೃಂಭಣೆಯಿಂದ ನೆರವೇರಿತು. ಈಗ ಭಕ್ತಾದಿಗಳು ಕಾಶಿ ವಿಶ್ವನಾಥ ಸ್ವಾಮಿಯ ಸೇವೆ ಮತ್ತು ದರ್ಶನ ಮಾಡಲು ಅನುಕೂಲಿಸಿದ ಪುಣ್ಯವಂತೆ ಈಕೆ. ಸ್ಮರಣೀಯಳಾದ ಈಕೆ ಮಾಡಿದ ಕೆಲಸವನ್ನು ಮುಂದುವರೆಸಿ, ಗತ ವೈಭವವನ್ನು ವರ್ತಮಾನ ವೈಭವವನ್ನಾಗಿ ಮಾಡುವ ಸ್ಥಿತಿಗೆ ತರಬೇಕಾದ ಕರ್ತವ್ಯವು ಇಂದಿನ ಜನಾಂಗಕ್ಕಿದೆ. ಈ ಕೆಲಸವನ್ನು ಆಗಲೇ ಅಂದರೆ 1839ರಲ್ಲಿ ಪಂಜಾಬಿನ ಮಹಾರಾಜ ರಣಜಿತ್‌ಸಿಂಗ್‌ರವರು ಗೋಪುರವನ್ನು $22\frac{1}{2}$ ಮಣ ಚಿನ್ನದ ಕವಚದಿಂದ ಹೊದಿಸಿ ಅಲಂಕಾರ ಮಾಡುವ ಮೂಲಕ ಪ್ರಾರಂಭಿಸಿ, ಆದರ್ಶಪ್ರಾಯರಾಗಿರುತ್ತಾರೆ. ಇವರಿಬ್ಬರ ಸೇವೆಯು ಅತ್ಯಂತ ಅಮೋಘವಾದುದಾಗಿದೆ. ಆದರೆ ಮುಖ್ಯವಾದ ವಿಚಾರವೇಂದರೆ ವಿಶ್ವನಾಥಸ್ವಾಮಿಯ ಮೂಲ ದೇವಾಲಯವು ಇದ್ದ ಸ್ಥಳದಲ್ಲಿ ಮೊದಲೇ ಒಂದು ಮಸೀದಿಯನ್ನು ಕಟ್ಟಿದ್ದರಿಂದ, ಆ ಪವಿತ್ರ ಸ್ಥಾನವು ದಕ್ಕದೇ ಹೋಯಿತು. ಇದನ್ನು ಪುನಃ ಪಡೆಯಲು ಹಿಂದುಗಳ ಹೋರಾಟವು ನಡೆಯುತ್ತಲೇ ಇದೆ. ಈ ಪುಣ್ಯಪುರಿಯನ್ನು ಹಿಂದಿನ ವೈಭವ ಸ್ಥಿತಿಗೆ ನಾವು ತರಲು

shrinath.udupa@gmail.com

ಈಶ್ವರಾನುಗ್ರಹವು ಇನ್ನೂ ಆಗಬೇಕಾಗಿದೆ. ಈ ಕ್ಷೇತ್ರದ ಸಕಲವೈಭವಗಳನ್ನು ಮತ್ತು ಪೂರ್ಣ ಚರಿತ್ರೆಯನ್ನು ತಿಳಿಯಲು " Varanasi at the cross Roads" ಎಂಬ ಸಾವಿರಕ್ಕೂ ಮೀರಿದ ಪುಟಗಳಲ್ಲಿ ವರ್ಣಿಸಿರುವ, ಗ್ರಂಥವು ಓದಲೇಬೇಕಾದ ಗ್ರಂಥವಾಗಿದೆ. ಈ ಗ್ರಂಥದಲ್ಲಿ ಈ ಕ್ಷೇತ್ರದ ದೇವಾಲಯಗಳ ನಾಶ ಮತ್ತು ಅವುಗಳ ಅವನತಿಯೇ ಮುಂತಾದ ವಿವರಗಳನ್ನು ವಿಸ್ತಾರವಾಗಿ ಹೇಳಲಾಗಿದೆ. (ನೋಡಿ - Varanasi at the cross roads - 2002, Printed by The Ramakrishna Mission Institute of Culture, Kolkatta)

**5. ಕಾಂಚೀಪುರಿ :** ಬ್ರಹ್ಮನು ವಿಷ್ಣುಪ್ರೀತಿಗಾಗಿ ಒಂದು ಯಜ್ಞವನ್ನು ಆರಂಭಿಸಿದಾಗ, ಅದರಲ್ಲಿ ಭಾಗವಹಿಸಲು ಬಂದಿದ್ದವರಿಗಾಗಿ ವಸತಿಯನ್ನು ಕಲ್ಪಿಸಲು, ದೇವಶಿಲ್ಪಿ ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟ ಪಟ್ಟಣವೇ ಕಾಂಚೀಪುರಿಯೆಂದು ನಂಬಿಕೆ.

ಪಾರ್ವತೀ ದೇವಿಯು (ಒಮ್ಮೆ ಶಿವನು ತನ್ನ ಲೀಲೆಯಿಂದ ಅದೃಶ್ಯನಾಗಿದ್ದಾಗ) ಪುನಃ ಶಿವನನ್ನು ಕಾಣುವ ಸಲುವಾಗಿ ವಿಧಿವತ್ತಾಗಿ, ವೇದರೂಪವಾದ ಪವಿತ್ರ ಮಾವಿನ ಮರದ ಕೆಳಗೆ, ವಿಷ್ಣುವಿನ ಸಮ್ಮುಖದಲ್ಲಿ ಶಿವಪೂಜೆಯನ್ನು ಭಕ್ತಿಯಿಂದ ಮಾಡಿದ ಸ್ಥಳವಾಗಿರುವ ಈ ಕ್ಷೇತ್ರವು ಶಿವ, ವಿಷ್ಣು ಮತ್ತು ಶಕ್ತಿಯ ಸನ್ನಿಧಿಯನ್ನು ಹೊಂದಿ ಸಕಲರನ್ನು ಅನುಗ್ರಹಿಸುವ ದಿವ್ಯ ಪುಣ್ಯ ಪುರಿಯಾಗಿದೆ.

ಪುರಾಣಗಳಲ್ಲಿ ಕಾಶೀ ಮತ್ತು ಕಾಂಚೀ ಎಂಬುದು ಶಿವನ ಎರಡು ಕಣ್ಣುಗಳೆಂದು ವರ್ಣಿಸಲ್ಪಟ್ಟಿದೆ. ಇಂದು ತಮಿಳುನಾಡು ರಾಜ್ಯದಲ್ಲಿ ಮದ್ರಾಸಿಗೆ ಬಹಳ ಹತ್ತಿರದಲ್ಲಿರುವ ಕಾಂಚೀಪುರಂ ಎಂಬ ಸ್ಥಳವೇ ಈ ಪುಣ್ಯಪುರಿಯು. ಈ ಕ್ಷೇತ್ರವು ಎರಡು ಪುಣ್ಯ ಪ್ರದೇಶಗಳಿಂದ ಕೂಡಿ, 'ಶಿವಕಂಚಿ ಮತ್ತು ವಿಷ್ಣುಕಂಚಿ' ಎಂಬ ಹೆಸರುಗಳಿಂದ ಪ್ರಸಿದ್ಧವಾಗಿದೆ. ಶಿವಕಂಚಿಯಲ್ಲಿ ಶ್ರೀ ಪಾರ್ವತೀದೇವಿಯ ತಪಸ್ಸಿನ ಪ್ರಭಾವದಿಂದ ಆವಿರ್ಭವಿಸಿದ ಏಕಾಮ್ರೇಶ್ವರ ಸ್ವಾಮಿ ಸನ್ನಿಧಿಯೂ, ಪರಮ ಪವಿತ್ರ ಶಕ್ತಿಪೀಠಸ್ಥಿತ ಶ್ರೀ ಕಾಮಾಕ್ಷೀದೇವೀ ಸನ್ನಿಧಿಯೂ ಇದ್ದು, ವಿಷ್ಣುಕಂಚಿಯಲ್ಲಿ ಶ್ರೀಮನ್ನಾರಾಯಣ ಸ್ವರೂಪವಾದ ಶ್ರೀ ವರದರಾಜ ಸ್ವಾಮಿ ಸನ್ನಿಧಿಯೂ ಪ್ರಸಿದ್ಧವಾಗಿದೆ. ಆದಿಶಂಕರರು ಸ್ಥಾಪಿಸಿದ ಧರ್ಮಪೀಠವೂ ಸಹ ಇಲ್ಲಿದ್ದು ಕಂಚಿ-ಕಾಮಕೋಟಿ ಪೀಠವೆಂದು ಇದು ಪ್ರಸಿದ್ಧವಾಗಿದೆ. ಈ ದೇವಾಲಯಗಳು ಬೃಹತ್ ಸ್ವರೂಪದ್ದಾಗಿದ್ದು - ಮೊದಲು ಕ್ರಿ. ಶ. 6-8ನೇ ಶತಮಾನದಲ್ಲಿ ಪಲ್ಲವ ರಾಜರಿಂದ ಕಟ್ಟಲ್ಪಟ್ಟು, ಅನಂತರ ಚೋಳರಾಜರುಗಳಿಂದ ಅಭಿವೃದ್ಧಿ ಹೊಂದಿ, ವಿಜಯನಗರ ರಾಜ್ಯಸ್ಥಾಪಕ ಪ್ರಭು ಕೃಷ್ಣದೇವರಾಯರಿಂದ ಪೂರ್ಣವಾಗಿ ಬೆಳೆದು ನಿಂತು, ಇಂದು ಭಾರತೀಯರು ಹೆಮ್ಮೆ ಪಡುವಂತಹ ಅನುಪಮ ದೇವಾಲಯಗಳಾಗಿವೆ. ಪಂಚಭೂತ ಲಿಂಗ ಕ್ಷೇತ್ರಗಳಲ್ಲಿ ಇಲ್ಲಿನ ಏಕಾಮ್ರೇಶ್ವರ ಸ್ವಾಮಿಯು ಪೃಥ್ವಿಲಿಂಗವೆಂದು ಪ್ರಖ್ಯಾತವು.



**6. ಅವನ್ತಿಪುರಿ**

ಮಾಳವ ದೇಶದಲ್ಲಿದ್ದ ಒಂದು ಚಿಕ್ಕ ದೇಶ (ನೋಡಿ- ಷಟ್‌ಪಂಚಾಶದ್ದೇಶಗಳು). ಇಂದಿನ ಮಧ್ಯಪ್ರದೇಶದಲ್ಲಿರುವ ಉಜ್ಜಯಿನೀ ನಗರವು ಇದರ ರಾಜಧಾನಿಯಾಗಿದ್ದಿತು. ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾದ ಮಹಾಕಾಲೇಶ್ವರ ಸ್ವಾಮಿಯಿರುವ ಕ್ಷೇತ್ರವು. ಸ್ಕಾಂದ ಪುರಾಣದಲ್ಲಿ 'ಅವನ್ತ್ಯಕಾಂಡ' ವೆಂಬ ಹೆಸರಿನಲ್ಲಿ ಈ ಕ್ಷೇತ್ರದ ಮಹಿಮೆಯು ಅತ್ಯಂತ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಬೇರೆ ಬೇರೆ ಕಲ್ಪಗಳಲ್ಲಿ ಈ ಕ್ಷೇತ್ರಕ್ಕೆ ಬೇರೆ ಬೇರೆ ಹೆಸರುಗಳಿದ್ದವು. ಮೊಟ್ಟ ಮೊದಲು ಈ ಕ್ಷೇತ್ರಕ್ಕೆ ಮಹಾಕಾಲವನವೆಂಬ ಹೆಸರಿದ್ದು ನಂತರದಲ್ಲಿ ಕನಕಶೃಂಗ, ಕುಶಸ್ಥಳಿ, ಅವನ್ತಿ, ಪದ್ಮಾವತೀ, ಉಜ್ಜಯಿನಿ, ಕುಶದ್ಯುತಿ, ಅಮರಾವತಿ ಎಂಬ ಹೆಸರುಗಳಿದ್ದವು. ಈ ಹೆಸರುಗಳು ಬರಲು ಶಿವಲೀಲೆಯಿಂದ ಕೂಡಿದ ಅನೇಕ ಪ್ರಸಂಗಗಳೇ ಕಾರಣವಾದವು. (ಸ್ಕಂದ - ಅವನ್ತ್ಯಕಾಂಡ)

ಶಿವನು ತ್ರಿಪುರಾಸುರನನ್ನು ಸಂಹರಿಸಿ ಧರ್ಮಪ್ರತಿಷ್ಠಾಪನೆ ಮಾಡಿದ ಸ್ಥಳ. ಶ್ರೀ ಕೃಷ್ಣ ಪರಮಾತ್ಮನು 64 ವಿದ್ಯೆಗಳನ್ನು ಸಾಂದೀಪನಿ ಗುರುಗಳ ಆಶ್ರಮದಲ್ಲಿ ಕಲಿತು, ಆಚಾರ್ಯ-ಶಿಷ್ಯಪರಂಪರೆಯನ್ನು ಅನುಷ್ಠಿಸಿದ ಪವಿತ್ರ ಸ್ಥಳವೂ ಇಲ್ಲಿಯೇ ಇರುವುದು.

ಬಾಣಕವಿಯು ತನ್ನ ಕಾದಂಬರಿಯಲ್ಲಿ ಈ ಕ್ಷೇತ್ರವನ್ನು ವರ್ಣಿಸಿ, ಅಂತ್ಯದಲ್ಲಿ ಈ ರೀತಿ ಸಂಗ್ರಹವಾಗಿ ಹೇಳಿರುತ್ತಾನೆ.

**"ಹೇಳಲು ಹೆಚ್ಚೇನಿದೆ ! ಸುರಾಸುರರು ವಂದಿಸಲು ತಲೆ ಬಾಗಿದಾಗ, ಅವರ ಕಿರೀಟಗಳ ಪ್ರಶಸ್ತ ಮಣಿಗಳಿಂದ ಹೊಮ್ಮಿದ ಹೊಳಪಿನ ರಶ್ಮಿಗಳು ಯಾವ ದೇವನ ಪಾದಗಳ ನಖಗಳನ್ನು ಚುಂಬಿಸಿದವೋ!**

**ಮಹಾ ಅಸುರನಾದ ಯಾವ ಅಂಧಕನನ್ನು ತನ್ನ ಮೊನಚಾದ ತ್ರಿಶೂಲದಿಂದ ತಿವಿದು ನಿಲ್ಲಿಸಿದನೋ! ಗೌರಿಯನ್ನು ಸಂತೋಷಪಡಿಸಲು ತನ್ನ ತಲೆಯನ್ನು ಬಗ್ಗಿಸಿದಾಗ, ಯಾವನ ಜಟೆಯಲ್ಲಿನ ಚಂದ್ರನ ಅಲಗು ದೇವಿಯ ನೂಪುರಗಳನ್ನು ತಾಗಿದವೋ!**

**ತ್ರಿಪುರನನ್ನು ದಹಿಸಿದ ಭಸ್ಮದಿಂದ ಯಾವನು ಅಲಂಕೃತನಾಗಿರುವನೋ!**

**ಕಾಮದಹನದಲ್ಲಿ ಪತಿವಿಹೀನ ರತಿಯು ದುಃಖದಿಂದ ಅಳುತ್ತಾ ಕೈಗಳನ್ನೆತ್ತಿ ದೇಹವನ್ನು ಬಗ್ಗಿಸಿದವಳಾಗಿ ನಮಸ್ಕರಿಸಲು, ಅವಳ ಕೈಬಳೆಗಳು ಯಾವನ ಪಾದದಲ್ಲಿ ಬಿದ್ದಿತೋ!**

**ಪ್ರಲಯಾಗ್ನಿಯ ನಾಲಿಗೆಯಂತಿರುವ ಯಾವನ ಜಟೆಯಲ್ಲಿ ಸಿಕ್ಕಿಕೊಂಡು ಗಂಗೆಯು ಏನು ಮಾಡಲೂ ತೋರದಂತಾದಳೋ!**

**ಅಂತಹ ಮಹಾಕಾಲನು ತನ್ನ ಅತ್ಯಂತ ಪ್ರಿಯವಾದ ಕೈಲಾಸವನ್ನು ತೊರೆದು ಸ್ವಯಂ ಇಲ್ಲಿ ಬಂದು ನೆಲೆಸಿರುವನು!"**

shrinath.udupa@gmail.com

**7. ದ್ವಾರಕಾ ಕ್ಷೇತ್ರ :** "ಓ ವಿಶ್ವಭಾವನನೇ! ಜಗದ್ರಕ್ಷಕನೇ! ನಮಗೆ ಯಾವುದು ಶ್ರೇಯಸ್ಸೋ ಅದನ್ನು ನೀನೇ ದೊರಕಿಸಿಕೊಡಬೇಕು. ನೀನೇ ನಮ್ಮ ಮಾತೆಯೂ, ಆತ್ಮವೂ, ಸುಹೃತ್ತೂ, ತಂದೆಯೂ, ಸರ್ವ ವಿಧ ಸಂರಕ್ಷಕನೂ ಆಗಿದ್ದೀಯೆ. ಸದ್ಗುರುವೂ, ಶ್ರೇಷ್ಠವಾದ ಆರಾಧ್ಯದೇವತೆಯೂ ನೀನೇ. ನಿನ್ನ ಆಸರೆ ಪಡೆದು, ನಿನ್ನನ್ನು ಅನುಸರಿಸಿ, ನಾವು ಕೃತಕೃತ್ಯರಾಗಿ ಬಿಡುವೆವು. ನಾವೆಂತಹ ಸುಕೃತಿಗಳು ! ಇಂತಹ ನಾಥನನ್ನು ಪಡೆದಿರುವ ನಾವೇ ಧನ್ಯರು! ಯಾವುದು ದೇವತೆಗಳಿಗೂ ನೋಡಲು ದುರ್ಲಭವೋ - ಅಂತಹ ಪ್ರೇಮಭರಿತ ಮಂದಹಾಸದಿಂದಲೂ, ಸ್ನೇಹಪೂರ್ಣವಾದ ನೋಟದಿಂದಲೂ ಕಂಗೊಳಿಸುವ ಮುಖ ಕಮಲದಿಂದ ರಮಣೀಯವಾಗಿ ಸರ್ವಸೌಂದರ್ಯಗಳ ನೆಲೆ ಮನೆಯಾಗಿರುವ ನಿನ್ನ ದಿವ್ಯರೂಪವನ್ನು ನಾವು ಸದಾ ನೋಡುತ್ತಿದ್ದೇವಲ್ಲವೇ" (ಶ್ರೀಮದ್ಭಾಗವತ 1-11-8- ಭಾರತ ದರ್ಶನ ಪ್ರಕಾಶನ, ತ್ಯಾಗರಾಜನಗರ, ಬೆಂಗಳೂರು-28)

ಎಂಬುದಾಗಿ ಸ್ತುತಿಸಲ್ಪಟ್ಟಿರುವ ಶ್ರೀ ಕೃಷ್ಣ ಪರಮಾತ್ಮನು ನೆಲೆಸಿ, ರಾಜ್ಯಭಾರ ಮಾಡಿ ಧರ್ಮವನ್ನು ನೆಲೆಗೊಳಿಸಿ, ಇಂದಿಗೂ ಭಕ್ತಾದಿಗಳ ಮನಸ್ಸಿನಲ್ಲಿ ನಲಿಯುತ್ತಿರುವ ಆ ದಿವ್ಯರೂಪಿಯು ಬಾಳಿದಂತಹ ಕ್ಷೇತ್ರವೇ ಪರಮ ಪುಣ್ಯಪುರಿಯಾದ ದ್ವಾರಕಾ ಕ್ಷೇತ್ರವು. ಅನೇಕ ಪುರಾಣಗಳಲ್ಲಿ ವರ್ಣಿತವಾಗಿರುವ ಈ ಕ್ಷೇತ್ರವನ್ನು ಸ್ಕಾಂದ ಪುರಾಣವು 44 ದೀರ್ಘ ಅಧ್ಯಾಯಗಳಲ್ಲಿ ವರ್ಣಿಸಿದೆ. ಸಾಕ್ಷಾತ್ ಶ್ರೀ ಕೃಷ್ಣ ಪರಮಾತ್ಮನಿಂದಲೇ ನಿರ್ಮಾಣವಾದ ಅದ್ಭುತ ಕ್ಷೇತ್ರ. ಈ ನಗರವು 12ಯೋಜನ ಸುತ್ತಳತೆಯಿಂದ ಕೂಡಿದ್ದು, ಸಮುದ್ರ ಮಧ್ಯದಲ್ಲಿ ಅನೇಕ ದಿವ್ಯ ಉದ್ಯಾನವನಗಳಿಂದಲೂ, ಎತ್ತರವಾದ ಅರಮನೆಗಳಿಂದಲೂ, ಎತ್ತರವಾದ ಶಿಖರ ಗೋಪುರಗಳಿಂದಲೂ, ವಿಶಾಲವಾದ ಸಭಾಂಗಣಗಳಿಂದಲೂ ಕೂಡಿ ಅತ್ಯಂತ ಮನೋಹರವಾಗಿದ್ದ ದ್ವೀಪವೆಂದು ಪುರಾಣಗಳಲ್ಲಿ ವರ್ಣಿಸಲ್ಪಟ್ಟಿದೆ. ಈ ಸುಂದರವಾದ ದ್ವಾರಕಾ ಕ್ಷೇತ್ರವು ಸೌರಾಷ್ಟ್ರ ರಾಜ್ಯದಲ್ಲಿ (ಗುಜರಾತ್) ರೈವತಕ ಪರ್ವತದ ಬಳಿ, ಗೋಮತೀ ತೀರದಲ್ಲಿದ್ದು ಬಹುಸಂಖ್ಯೆಯಲ್ಲಿ ಯಾತ್ರಾರ್ಥಿಗಳನ್ನು ಆಕರ್ಷಿಸುತ್ತಿದೆ. ಈ ಕ್ಷೇತ್ರದಲ್ಲಿ ಪಂಚ "ಗ" ಕಾರಗಳು ಬಹುಮುಖ್ಯವು. 1. ಗೋಮತೀ ನದಿಯಲ್ಲಿ ಸ್ನಾನ. 2. ಗೋಮಯದಿಂದ ಶುದ್ಧಿ ಹೊಂದಿ ನಂತರ ಮಾಡುವ ಸ್ನಾನ. 3. ಗೋದಾನ 4. ಗೋಪೀಚಂದನದಿಂದ ಶರೀರವನ್ನು ಪವಿತ್ರಮಾಡಿಕೊಳ್ಳುವುದು. 5. ಗೋಪೀನಾಥನ ಪವಿತ್ರ ದರ್ಶನ ಪಡೆದು ಜನ್ಮ ಸಾರ್ಥಕತೆಯನ್ನು ಪಡೆಯುವುದು.

ಇಂತಹ ಪವಿತ್ರ ಕ್ಷೇತ್ರವನ್ನು ಹೊಂದಿರುವ ಭಾರತ ಭೂಮಿಯು ಧನ್ಯವು.

**ಪೂರಿ ಜಗನ್ನಾಥ ಕ್ಷೇತ್ರ :**

ಅದೋ ಯುದ್ದಾರುಪ್ಲವತೇ ಸಿಂಧೋಃ ಪಾರೇ ಅಪೂರುಷಮ್|
ತದಾ ರಭಸ್ವ ದುರ್ಹಣೋ ತೇನ ಗಚ್ಛ ಪರಸ್ತರಮ್ ||

ಋಗ್ವೇದ 10-155-3



shrinath.udupa@gmail.com

ಓ ಪವಿತ್ರ ಭಕ್ತನೇ ! ಸಮುದ್ರದಲ್ಲಿ ತೇಲಿ ಬಂದ ಮರದಿಂದ ಕೆತ್ತಲ್ಪಟ್ಟ ಆ ಪರಮ ಪುರುಷೋತ್ತಮನ ವಿಗ್ರಹವನ್ನು ಭಕ್ತಿಯಿಂದ ಆರಾಧಿಸಿ, ಅತ್ಯುತ್ತಮವಾದ ಪರಮ ಪದವಿಯನ್ನು ಪಡೆಯುವಂತಹನಾಗು. (ಸಾಯಣರ ಭಾಷ್ಯದ ಒಂದು ವಿವರಣೆಯಂತೆ) ಎಂಬ ಶ್ರುತಿ ವಾಕ್ಯವೇ ಇರುವಾಗ, ಈ ಕ್ಷೇತ್ರದ ಮಹಿಮೆಗೆ ಬೇರಾವ ಸಮರ್ಥನೆಯ ಆವಶ್ಯಕತೆಯಿಲ್ಲ. ಈ ಶ್ರುತಿ ವಾಕ್ಯಕ್ಕೆ ಸಾಯಣರಲ್ಲದೇ, ರಘುನಂದನರೆಂಬುವರೂ ಸಹ ತಮ್ಮ ಪುರುಷೋತ್ತಮ ತತ್ತ್ವವೆಂಬ ಗ್ರಂಥದಲ್ಲಿ ಇದೇ ರೀತಿಯ ವಿವರಣೆಯನ್ನು ನೀಡಿದ್ದಾರೆ. ಆ ಕ್ಷೇತ್ರವು ಕಲ್ಕತ್ತಾನಗರದಿಂದ 310 ಮೈಲಿ ದೂರದಲ್ಲಿ, ಒರಿಸ್ಸಾ ರಾಜ್ಯದಲ್ಲಿದ್ದು, ಪುರಾಣಗಳ ಪ್ರಕಾರ ಭೂಮಿಯ ನಾಭಿಯೆಂದು ಹೇಳಲ್ಪಟ್ಟಿದೆ. ಕೂಡಹುಟ್ಟಿದವರ ಕ್ಷೇತ್ರವೆಂದೇ ಪ್ರಸಿದ್ಧವಾಗಿರುವ ಈ ಸ್ಥಳದಲ್ಲಿ ಶ್ರೀಕೃಷ್ಣ, ಬಲರಾಮ ಮತ್ತು ಇವರ ತಂಗಿಯಾದ ಸುಭದ್ರಾದೇವಿಯ ಸನ್ನಿಧಿಯಿದ್ದು, ಅವರು ಭಕ್ತಾದಿಗಳನ್ನು ಅನುಗ್ರಹಿಸುತ್ತಿದ್ದಾರೆ. ಶ್ರೀಕೃಷ್ಣ ಪರಮಾತ್ಮನು ಜಗನ್ನಾಥ ಸ್ವಾಮಿಯೆಂಬ ಹೆಸರಿನಿಂದ ಇಲ್ಲಿ ನೆಲೆಸಿರುವನು. ಈ ಕಾರಣದಿಂದ ಈ ಸ್ಥಳವು ಪೂರಿ ಜಗನ್ನಾಥ ಕ್ಷೇತ್ರವೆಂದು ಪ್ರಸಿದ್ಧಿ ಹೊಂದಿದೆ. ವಾಯು ಪುರಾಣದಂತೆ ಈ ಕ್ಷೇತ್ರವು ಪಿತೃಪೂಜನಗಳಿಗೂ ಸಹ ಪ್ರಸಿದ್ಧಿಯಾಗಿದೆ.

ಪುರಿ ಕ್ಷೇತ್ರ ಯಾತ್ರೆಯನ್ನು ಪ್ರಯತ್ನಪೂರ್ವಕವಾಗಿ ಜ್ಯೇಷ್ಠ ಶುಕ್ಲ ದ್ವಾದಶಿಯಂದು ಮಾಡುವುದು ಅತ್ಯುತ್ತಮವೆಂದು ಹೇಳಲ್ಪಟ್ಟಿದೆ. ಇಲ್ಲಿಯ ಕ್ರಮವು- ಮೊದಲು ಮಾರ್ಕಂಡೇಯ ತೀರ್ಥದಲ್ಲಿ ಸ್ನಾನಮಾಡಿ, ಅದರ ಬಳಿ ಇರುವ ಶಿವದೇವರ ಸನ್ನಿಧಿಯಲ್ಲಿ ಪಂಚಾಕ್ಷರೀ ಮಂತ್ರದಿಂದ ಪೂಜೆ ಸಲ್ಲಿಸಿದ ನಂತರ ಸಾಕ್ಷಾತ್ ವಿಷ್ಣುದೇವರ ಪ್ರತೀಕವಾದ ಅಶ್ವತ್ಥ ವೃಕ್ಷವನ್ನು ಮೂರು ಸಾರಿ ಪ್ರದಕ್ಷಿಣೆ ಮಾಡಿ, ಶ್ರೀ ಬಲರಾಮ ದೇವರ ದರ್ಶನ ಮತ್ತು ಪೂಜೆಗಳನ್ನು ಮುಗಿಸಿ, ನಂತರ ಜಗನ್ನಾಥ ಸ್ವಾಮಿಯೆಂಬ ಹೆಸರಿನಿಂದ ಕಂಗೊಳಿಸುತ್ತಿರುವ ಪುರುಷೋತ್ತಮ ದೇವರನ್ನು ಅಷ್ಟಾಕ್ಷರೀ ಮಂತ್ರ ಅಥವಾ ಪುರುಷಸೂಕ್ತದಿಂದ ಪೂಜಿಸಬೇಕು. ಇದಾದ ನಂತರ ಸುಭದ್ರಾದೇವಿಯನ್ನು ಪೂಜಿಸಿ ಸಮುದ್ರ ಸ್ನಾನವನ್ನು ಮಾಡಬೇಕು. ಕೊನೆಯಲ್ಲಿ ಇಂದ್ರದ್ಯುಮ್ನ ತೀರ್ಥದಲ್ಲಿ ಸ್ನಾನ ಮಾಡುವುದು ಯಾತ್ರೆಯ ಕ್ರಮವು. ಆಷಾಢ ಶುಕ್ಲ ದ್ವಿತೀಯ ದಿನದಂದು ಇಲ್ಲಿ ಆಚರಿಸಲ್ಪಡುವ ರಥಯಾತ್ರೆಯು ಪ್ರಪಂಚದಲ್ಲೇ ಪ್ರಖ್ಯಾತವು. ಅಂದು ಸೇರುವ ಭಕ್ತಾದಿಗಳ ಸಂಖ್ಯೆ ಅಪರಿಮಿತವಾದದ್ದಾಗಿರುತ್ತದೆ. 45 ಅಡಿ ಎತ್ತರ, 1225 ಚದರಡಿ ಕ್ಷೇತ್ರವುಳ್ಳ ಮತ್ತು 7 ಅಡಿ ಎತ್ತರದ 16 ಚಕ್ರಗಳಿಂದ ಕೂಡಿರುವ ಜಗನ್ನಾಥ ರಥವು ಬಹಳ ಅಪೂರ್ವವಾದದ್ದಾಗಿದೆ. ಇಲ್ಲಿನ ದೇವಾಲಯವಾದರೋ 4 ಲಕ್ಷ ಚದರಡಿ ವಿಸ್ತೀರ್ಣವಿದ್ದು, 20 ಅಡಿ ಎತ್ತರದ ಸುತ್ತಲಿನ ಗೋಡೆಗಳಿಂದ ಆವೃತವಾಗಿ, 192 ಅಡಿ ಗೋಪುರವನ್ನು ಹೊಂದಿದೆ. ಈ ಆವರಣದಲ್ಲಿ 120 ದೇವಾಲಯಗಳಿವೆ. ಪ್ರತಿ ಭಾರತೀಯನೂ ಈ ಕ್ಷೇತ್ರವನ್ನು ಸಂದರ್ಶಿಸಿ

ಶ್ರೀಸ್ವಾಮಿಯ ಸೇವೆಯನ್ನು ಮಾಡಬೇಕು.

ಎರಡನೆಯ ಗುಂಪು - ಪಾತಾಳ ಲೋಕದಲ್ಲಿ ಪ್ರಸಿದ್ಧವಾಗಿರುವ ಮೂರು ಪುಣ್ಯ ಪುರಿಗಳು. ಅತ್ಯಂತ ಸಮರ್ಥರು ಮಾತ್ರ ಸಂದರ್ಶಿಸುವಂತಹ ಪುಣ್ಯ ಸ್ಥಾನಗಳು ಮಹಾಭಾರತದಲ್ಲಿ ಅರ್ಜುನ, ಭೀಮಸೇನ ಮುಂತಾದವರು ಸಂದರ್ಶಿಸಿದ ಬಗ್ಗೆ ಉಲ್ಲೇಖಗಳಿವೆ. ಪುರಾಣಗಳಲ್ಲೂ ಅನೇಕ ವೀರ ಪುರುಷರು ಸಂದರ್ಶಿಸಿದ ವಿವರಣೆಗಳಿವೆ. ಇವುಗಳು ಅಶೋಕವತೀ, ಭೋಗವತೀ ಮತ್ತು ಸಿದ್ಧವತೀಯೆಂಬ ಹೆಸರಿನಿಂದ ಕರೆಯಲ್ಪಟ್ಟಿವೆ.

ಮೂರನೆಯ ಗುಂಪು : ಅಂತರಿಕ್ಷದಲ್ಲಿರುವ ಅಷ್ಟದಿಕ್ಪಾಲಕರು ವಾಸಿಸುತ್ತಾ ಲೋಕಪಾಲನೆಯನ್ನು ಮಾಡುತ್ತಿರುವ ಪುಣ್ಯ ನಗರಿಗಳಾಗಿವೆ. ಪುಣ್ಯವಂತರು ದೇಹಾವಸಾನದ ನಂತರ ಸಂದರ್ಶಿಸಲು ಸಮರ್ಥರಾಗುವಂತಹ ಸ್ಥಾನಗಳು. ಈ ಲೋಕಗಳನ್ನು ಪುರಾಣಗಳಲ್ಲಿ ಅನೇಕ ವೀರಪುರುಷರು ಮತ್ತು ವೀರವನಿತೆಯರು ಭೂಮಿಯಲ್ಲಿ ವಾಸಿಸುತ್ತಿದ್ದಾಗಲೇ ಸಂದರ್ಶಿಸಿದರೆಂಬ ವಿವರಣೆಗಳು ಅನೇಕ ವಿಧವಾಗಿ ನಿರೂಪಿತವಾಗಿವೆ. ಮಹರ್ಷಿಗಳು ಸಾಮಾನ್ಯವಾಗಿಯೇ ತಮ್ಮ ತಪಃಶಕ್ತಿಯಿಂದ ಸಂದರ್ಶಿಸುತ್ತಿದ್ದ ಸ್ಥಳಗಳೆಂದೂ ವರ್ಣಿಸಲ್ಪಟ್ಟಿದೆ. ಇವುಗಳು ಅಮರಾವತೀ, ತೇಜೋವತೀ, ಸಂಯಮಿನೀ, ರಕ್ಷೋವತೀ, ಸಿಂಧುಮತೀ, ಗಂಧವತೀ, ಅಲಕಾವತೀ, ಯಶೋವತೀಯೆಂಬ ಎಂಟು ಹೆಸರುಗಳಿಂದ ಪ್ರಖ್ಯಾತವಾಗಿವೆ. ಇವುಗಳು ಕ್ರಮವಾಗಿ ಪೂರ್ವದಿಕ್ಕಿನಿಂದ, ಈಶಾನ್ಯದಿಕ್ಕಿನವರೆಗೆ ಎಂಟು ದಿಕ್ಕಿನಲ್ಲಿ ಪ್ರತಿಷ್ಠಿತವಾಗಿವೆ. ಇವುಗಳಲ್ಲಿ ಪ್ರತಿಷ್ಠಿತರಾಗಿರುವ ದಿಕ್ಪಾಲಕರು ಕ್ರಮವಾಗಿ ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ, ಈಶಾನ ದೇವತೆಗಳೆಂದು ಪ್ರಸಿದ್ಧರಾಗಿ, ಲೋಕಗಳನ್ನು ಪರಿಪಾಲಿಸುತ್ತಿರುವರು. (ನೋಡಿ - ಅಷ್ಟದಿಕ್ಪಾಲಕರು)

ಈ ಹದಿನೆಂಟು ಪುಣ್ಯ ಪುರಿಗಳನ್ನು ಸಂದರ್ಶಿಸಿದ ಒಬ್ಬ ಪುಣ್ಯಶರೀರಿಯ, ದಿವ್ಯದರ್ಶನದ ಪ್ರಭಾವವು ಸ್ಕಾಂದ ಪುರಾಣದ ಕಾಶೀಖಂಡದ ಪೂರ್ವ ಭಾಗದಲ್ಲಿ ಅತ್ಯಂತ ರೋಚಕವಾಗಿ ವಿವರಿಸಲ್ಪಟ್ಟಿದೆ.

## ೧. ಅಷ್ಟದಿಕ್ಪಾಲಕರು

ಇಂದ್ರ, ಅಗ್ನಿ, ಯಮ, ನಿರ್ಋತಿ, ವರುಣ, ವಾಯು, ಕುಬೇರ ಈಶಾನರೆಂಬುವರು ಅಷ್ಟದಿಕ್ಪಾಲಕರು. ಇವರು ಲೋಕಪಾಲಕರಾಗಿರುತ್ತಾರೆ. ಮಹಾಮೇರು ಪರ್ವತಕ್ಕೂ ಮೇಲೆ ಇರುವ ಊರ್ಧ್ವ ಪ್ರದೇಶದಲ್ಲಿ ಒಂಬತ್ತು ಪ್ರಸಿದ್ಧ ಪಟ್ಟಣಗಳಿವೆಯೆಂದೂ, ಮಧ್ಯದಲ್ಲಿ ಬ್ರಹ್ಮದೇವರು ವಾಸಿಸುವ ಮನೋವತಿಯೆಂಬ ರಾಜಧಾನಿಯಿದ್ದು, ಸುತ್ತಲೂ ಅಷ್ಟದಿಕ್ಕುಗಳಲ್ಲಿ ದಿಕ್ಪಾಲಕರು ವಾಸಿಸುತ್ತಿರುವರೆಂದೂ, ಇವರು ಸಶಕ್ತರಾಗಿ, ಸಪತ್ನೀ ಸಹ ಪರಿವಾರದಿಂದ, ಸರ್ವಾಲಂಕಾರಗಳನ್ನು ಹೊಂದಿ, ವಿವಿಧ ವಾಹನಗಳ ಮೇಲೆ ಆರೂಢರಾಗಿ, ಲೋಕರಕ್ಷಣೆ ಮಾಡುತ್ತಿರುವರೆಂದು ನಿರೂಪಿಸಿದೆ.



ಉತ್ತರ ದಿಕ್ಕನ್ನು ಸೌಮ್ಯವೆಂದೂ ಕರೆಯುತ್ತಾರೆ. ಸೌಮ್ಯದಿಕ್ಕಿಗೆ ಅಧಿಪನಾದುದರಿಂದ ಕುಬೇರ ದೇವತೆಯನ್ನು ಸೋಮದೇವತೆಯೆಂದೂ ಕರೆಯುತ್ತಾರೆ.

| *ದಿಕ್ಕುಗಳು* | *ಲೋಕ ಪಾಲಕರು* | *ಪತ್ನಿಯರು* | *ಹಸ್ತದಲ್ಲಿ ಹಿಡಿದಿರುವುದು* | *ವಾಹನ* | *ರಾಜಧಾನಿ* |
|---|---|---|---|---|---|
| ಪೂರ್ವ | ಇಂದ್ರ | ಶಚೀದೇವೀ | ವಜ್ರಾಯುಧ | ಐರಾವತ ಎಂಬ ಆನೆ | ಅಮರಾವತಿ |
| ಆಗ್ನೇಯ | ಅಗ್ನಿ | ಸ್ವಾಹಾ ಮತ್ತು ಸ್ವಧಾ | ಶಕ್ತ್ಯಾಯುಧ | ಅಜ(ಟಗರು) | ತೇಜೋವತಿ |
| ದಕ್ಷಿಣ | ಯಮ | ಶ್ಯಾಮಲಾದೇವೀ | ದಂಡಾಯುಧ | ಪುಂಡರೀಕ ಎಂಬ ಮಹಿಷ | ಸಂಯಮನಿ |
| ನೈರುತ್ಯ | ನಿರ್ಋತಿ | ದೀರ್ಘಾದೇವೀ | ಖಡ್ಗಾಯುಧ | ನರ | ರಕ್ಷೋವತಿ/ ಕೃಷ್ಣಾಂಗದ |
| ಪಶ್ಚಿಮ | ವರುಣ | ಕಾಳಿಕಾದೇವೀ | ಪಾಶಾಯುಧ | ಮಕರ | ಶ್ರದ್ಧಾವತಿ/ ಸಿಂಧುಮತಿ |
| ವಾಯವ್ಯ | ವಾಯು | ಅಂಜನಾದೇವೀ | ಅಂಕುಶ ಮತ್ತು ಧ್ವಜ | ಪ್ರಾಣಗಳು | ಗಂಧವತಿ |
| ಉತ್ತರ | ಸೋಮ/ ಕುಬೇರ | ಋದ್ಧಿದೇವೀ | ಅಮೃತ ಕಲಶ | ಅಶ್ವ | ಅಲಕಾವತಿ |
| ಈಶಾನ್ಯ | ಸಾಂಬಮೂರ್ತಿ | ಪಾರ್ವತೀ ದೇವೀ | ತ್ರಿಶೂಲ | ವೃಷಭ | ಈಶಾನಪುರಿ |

## ೨. ಅಷ್ಟ ವಸುಗಳು

ವೇದ ವಿಹಿತ ಕರ್ಮಗಳಲ್ಲಿ ಹವಿಸ್ಸನ್ನು ಸ್ವೀಕರಿಸುವ ದೇವತೆಗಳು 33 ಜನರೆಂದು ಹೇಳಲ್ಪಟ್ಟಿದೆ. ದೇವತೆಗಳು 33 ಕೋಟಿಯೆಂದು ಹೇಳಿದರೂ, ಇವರೆಲ್ಲರೂ ಈ 33 ದೇವತೆಗಳಲ್ಲಿ ಅಂತರ್ಗತರಾಗಿರುತ್ತಾರೆ. ಇವರೇ ಅಷ್ಟವಸುಗಳು(8), ಏಕಾದಶ ರುದ್ರರು (11), ದ್ವಾದಶಾದಿತ್ಯರು (12), ಇಂದ್ರ ಮತ್ತು ಪ್ರಜಾಪತಿಯೆಂಬ (2) ಹೆಸರುಗಳಿಂದ ಪ್ರಖ್ಯಾತರಾಗಿರುತ್ತಾರೆ. ಮಹಾ ಸಂಕಲ್ಪದಲ್ಲಿ ಈ ಲೋಕಗಳು ಅಷ್ಟ ವಸುಗಳಿಂದ ವಿರಾಜಿಸಲ್ಪಟ್ಟಿವೆಯೆಂದು ವರ್ಣಿತವಾಗಿದೆ. ದಕ್ಷ ಪ್ರಜಾಪತಿಯು ತನ್ನ 60 ಜನ ಪುತ್ರಿಯರಲ್ಲಿ, 10 ಜನರನ್ನು ಧರ್ಮದೇವತೆಗೆ ವಿವಾಹ ಮಾಡಿಕೊಟ್ಟನು. ಈ ಹತ್ತು ಜನರಲ್ಲಿ ಒಬ್ಬಳಾದ, "ವಸು" ಎಂಬ ಪತ್ನಿಗೆ ಜನಿಸಿದ 8 ಮಂದಿ ಪುತ್ರರು ಅಷ್ಟವಸುಗಳೆಂದು ಪ್ರಸಿದ್ಧರಾದರು. ಇವರ ಸಂಕ್ಷಿಪ್ತ ವಿವರಣೆಯು ಶ್ರೀಮದ್ಭಾಗವತದಲ್ಲಿ ಹೇಳಲ್ಪಟ್ಟಿದೆ. ಇವರು ಜ್ಯೋತಿಸ್ವರೂಪದಿಂದಿದ್ದು ತೇಜಸ್ಸು ಮತ್ತು ಬಲಕ್ಕೆ ಅಧಿದೇವತೆಗಳಾಗಿರುತ್ತಾರೆ. ಇವರು

shrinath.udupa@gmail.com

ಕರ್ಮಫಲಗಳನ್ನು ತಮ್ಮಲ್ಲಿಯೇ ಇಟ್ಟುಕೊಳ್ಳುವರೆಂದು ಉಕ್ತವಾಗಿದೆ. ವಸುಗಳ ಹೆಸರು ವಿವಿಧ ಪುರಾಣಗಳಲ್ಲಿ ಬೇರೆ ಬೇರೆ ರೀತಿಯಲ್ಲಿದೆ. ಈ ಮಹಾಸಂಕಲ್ಪದಲ್ಲಿ ವಿಷ್ಣುಪುರಾಣದಲ್ಲಿ ಉಕ್ತವಾಗಿರುವುದಕ್ಕೆ ಹತ್ತಿರ ಇದೆ. ಇವರ ಹೆಸರು ಮತ್ತು ಸಂತಾನಗಳು ಈ ರೀತಿ ಹೇಳಲ್ಪಟ್ಟಿದೆ.

| *ವಸುಗಳು* | *ಅವರ ಸಂತಾನಗಳು* |
|---|---|
| ಅನಲ | ಕುಮಾರ(ಕಾರ್ತಿಕೇಯ), ಶಾಖ, ವಿಶಾಖ, ನೈಗಮೇಯ |
| ಅನಿಲ | ಮನೋಜನ, ಅವಿಜ್ಞಾನ ಗತಿ |
| ಪ್ರತ್ಯೂಷ | ದೇವಲಋಷಿ |
| ಪ್ರಭಾಸ | ವಿಶ್ವಕರ್ಮ (ದೇವಶಿಲ್ಪಿ) |
| ಸೋಮ | ವರ್ಚಸ್ಸು (ಈತನಿಂದ ಮಾನವನು ವರ್ಚಸ್ವಿಯಾಗುವನು) |
| ದ್ರೋಣ (ಧರ್ಮ) | ದ್ರವಿಣ, ಹುತಹವ್ಯವಹ, ಶಿಶಿರ, ಪ್ರಾಣ ಮತ್ತು ವರುಣ. |
| ಆಪ (ಅಧ್ವರ) | ವೈತುಂಡ, ಶ್ರಮ, ಶಾಂತ ಮತ್ತು ಧ್ವನಿ - ಇವರು ಯಜ್ಞವನ್ನು ರಕ್ಷಿಸುವರು |
| ಧ್ರುವಾ | ಲೋಕವನ್ನೇ ನುಂಗುವ ಭಗವಾನ್ ಕಾಲನು. |

**ಸೃಷ್ಟಿ, ಸ್ಥಿತಿ ಮತ್ತು ಸಂಹಾರಗಳೆಂಬ ತ್ರಿವಿಧ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಲು ಜನಿಸಿದ ದಿವ್ಯ ದೇವತಾ ಶಕ್ತಿಗಳೇ ಈ ಹೆಸರುಗಳಿಂದ ಪ್ರಸಿದ್ಧವಾಯಿತೆಂದು ಹೇಳುತ್ತಾರೆ.**

### ಲ. ನವಗ್ರಹ ಪರಿಪಾಲಿತೇ

ಮಹಾಸಂಕಲ್ಪದಲ್ಲಿ **ಸೂರ್ಯಚಂದ್ರಾಂಗಾರಕ ಬುಧ ಬೃಹಸ್ಪತಿ ಶುಕ್ರಶನೈಶ್ಚರ ರಾಹುಕೇತ್ವಾಖ್ಯ ನವಗ್ರಹ ಪರಿಪಾಲಿತೇ** ಎಂದು ಹೇಳಿದೆ. ಸೂರ್ಯಾದಿ ಗ್ರಹಗಳನ್ನು ಲೋಕಪಾಲಕ ಶಕ್ತಿಗಳೆಂದು ಸ್ಮರಿಸಿದೆ. "**ಈಶಾವಾಸ್ಯಮಿದಂ ಸರ್ವಂ**" ಎಂಬುದಾಗಿ ಮನಗಂಡಿರುವ ಮಹರ್ಷಿಗಳು, ಗ್ರಹಗಳನ್ನು, ಕೇವಲ ಬೃಹತ್ ಭೌಗೋಳಿಕ ಮುದ್ದೆಗಳೆಂದು ಎಂದೂ ಭಾವಿಸಿರುವುದಿಲ್ಲ. ಹಿಡಿಯುವುದು ಅಥವಾ ಪ್ರೇರೇಪಿಸುವುದೆಂಬ ಅರ್ಥವನ್ನು ಇಟ್ಟುಕೊಂಡೇ 'ಗ್ರಹ' ಎಂಬ ಶಬ್ದವನ್ನು ವ್ಯವಹರಿಸಿರುತ್ತಾರೆ. ಭೂಮಿಯ ಮೇಲೆ ಸಕಲ ಜೀವಿಗಳ ಉತ್ಪತ್ತಿಯಿಂದ ಹಿಡಿದು ಸಕಲ ವ್ಯವಹಾರಗಳಿಗೂ ಮತ್ತು ಸೂರ್ಯಾದಿ ಗ್ರಹಗಳಿಗೂ ಇರುವ ಸಂಬಂಧವನ್ನು ಋಷಿಗಳು ತಮ್ಮ ಧ್ಯಾನದ ಮೂಲಕ ಅರಿತು, ಜನಗಳ ಒಳಿತಿಗಾಗಿ ಅನೇಕ ಗಹನವಾದ ವಿಚಾರಗಳನ್ನು ಆಚರಣೆಯಲ್ಲಿ ತಂದಿರುತ್ತಾರೆ. ಇಂದ್ರಿಯ ಗೋಚರವಾದ ಗ್ರಹಗಳನ್ನು ಕೇವಲ ಅವುಗಳ ಚಾರ, ಅಳತೆ ಅಥವಾ ಮೇಲ್ಮೈ ಲಕ್ಷಣಗಳಿಂದ ಮಾತ್ರ ತಿಳಿದರೆ ಪೂರ್ಣಜ್ಞಾನವಾಗುವುದಿಲ್ಲವೆಂಬ ಸತ್ಯವನ್ನು ತಿಳಿದು, ಇಂದಿನ ವಿಜ್ಞಾನವೂ ಸಹ



shrinath.udupa@gmail.com

ವಿಸ್ಮಯಪಡುವಂತೆ, ಗೂಢಾರ್ಥಗಳಿಂದ ಕೂಡಿದ ಗ್ರಹಗಳ ಆಂತರಿಕ ಸಾಹಿತ್ಯ ರಾಶಿಯನ್ನೇ ನಮ್ಮ ಮುಂದಿಟ್ಟಿರುತ್ತಾರೆ. ಇದನ್ನು ಅತೀಂದ್ರಿಯ ಜ್ಞಾನವೆಂದೇ ಪರಿಗಣಿಸಬೇಕಾದ ಪರಿಸ್ಥಿತಿಯು ನಿಧಾನವಾಗಿ ಇಂದು ಎಲ್ಲರ ಅರಿವಿಗೂ ಬರುತ್ತಿರುವುದು ಗಮನಾರ್ಹ ವಿಷಯವಾಗಿದೆ.

ಮಹರ್ಷಿ ವೇದವ್ಯಾಸರು ತಮ್ಮ ಬ್ರಹ್ಮಸೂತ್ರದಲ್ಲಿ-

"**ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಮ್**" ಎಂಬುದಾಗಿ ಹೇಳಿರುತ್ತಾರೆ (ಬ್ರ- 2-1-5). ಈ ಸೂತ್ರಕ್ಕೆ ಭಾಷ್ಯದಲ್ಲಿ "**ಅನುಗತಾಶ್ಚ ಸರ್ವತ್ರ ಅಭಿಮಾನಿನ್ಯಃ ಚೇತನದೇವತಾ ಮಂತ್ರಾರ್ಥವಾದೇ ಇತಿಹಾಸ ಪುರಾಣಾದಿಭ್ಯೋ ಅವಗಮ್ಯಂತೇ**" || ಎಂಬುದಾಗಿ ತಿಳಿಸಲ್ಪಟ್ಟಿದೆ.

"ಎಲ್ಲಾ ಕಡೆಯೂ ಅಭಿಮಾನಿ ದೇವತೆಗಳು ವ್ಯಾಪಿಸಿದ್ದಾರೆಂದು ಮಂತ್ರ, ಅರ್ಥವಾದ ಮತ್ತು ಪುರಾಣಗಳಿಂದ ತಿಳಿದು ಬರುತ್ತದೆ. ಆದ್ದರಿಂದ ಗ್ರಹಗಳೆಂದರೆ ಅಭಿಮಾನಿ ದೇವತೆಗಳೆಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ."

ಈ ಕಾರಣದಿಂದಲೇ ಮಹಾಸಂಕಲ್ಪದಲ್ಲಿ ಗ್ರಹಗಳನ್ನು ಪರಿಪಾಲಿತೆಯೆಂಬ ಶಬ್ದದಿಂದ ಸ್ತುತಿಸಿದೆ.

ಸಕಲ ಶುಭ ಕರ್ಮಗಳಲ್ಲೂ ಪ್ರಾರಂಭದಲ್ಲಿ ಗ್ರಹಪೂಜಾದಿಗಳನ್ನು ಆಚರಿಸಿ, ಆ ದೇವತೆಗಳಿಂದ ಅನುಗೃಹೀತರಾಗಿ ಮುಂದಿನ ಕರ್ಮಗಳನ್ನು ಆಚರಿಸುವ ಪದ್ಧತಿಗಳಿರುವುದರಿಂದ, ಅದಕ್ಕೆ ಬೇಕಾಗಿರುವ ಗ್ರಹದೇವತೆಗಳ ಮಾಹಿತಿಗಳನ್ನು ಪ್ರಧಾನವಾಗಿ ಈ ವಿವರಣೆಯಲ್ಲಿ ಕೊಡಲಾಗಿದೆ. ಭಾರತೀಯರಿಗೆ ಗ್ರಹಗಳೆಂದರೆ ಪ್ರಧಾನವಾಗಿ ಪರಮಾತ್ಮನ ರೂಪಗಳೆಂದೇ ಪವಿತ್ರ ಭಾವನೆಯಿರುವುದರಿಂದ, ಅವುಗಳ ಪೂಜಾದಿಗಳಲ್ಲಿ ಹೆಚ್ಚಿನ ಅರ್ಥವನ್ನು ಭಾವಿಸಿ, ಗಣಿತಮಯವಾದ ಮಾಹಿತಿಗಳನ್ನು ಸಂಶೋಧಕರ ಪಾಲಿಗೆ ಬಿಟ್ಟಿರುತ್ತಾರೆ. ಗ್ರಹಗಳೆಂದರೆ ಜೀವಂತ ವಸ್ತುಗಳೆಂದೇ ಪರಿಗಣಿಸಲ್ಪಟ್ಟಿದೆ. ಇಂದಿನ ವಿಜ್ಞಾನಿಗಳೂ ಸಹ ನಿಧಾನವಾಗಿ ಇದೇ ಅಭಿಪ್ರಾಯಕ್ಕೆ ಬರುತ್ತಿದ್ದಾರೆ. ಇತ್ತೀಚಿನ ಒಂದು ಪ್ರಸಿದ್ಧ ಆಂಗ್ಲ ಮಾಸ ಪತ್ರಿಕೆಯಲ್ಲಿ ಹೀಗೆ ನಿರೂಪಿಸಲಾಗಿದೆ

"The Earth instead of appearing as an INERT STATUE is a living Mobile thing" (National Geographic Magazine May 98). ಋಷಿಗಳು ಈ ದಿಕ್ಕಿನಲ್ಲಿ ಬಹಳವಾಗಿ ಅಧ್ಯಯನ ಮಾಡಿ. ತಮ್ಮ ಜ್ಞಾನದೃಷ್ಟಿಯಿಂದ ಗ್ರಹಗಳಿಗೆ ಆಧಾರವಾಗಿರುವ ದೈವಿಕ ಶಕ್ತಿಗಳನ್ನು ಸಹ ಗುರುತಿಸಿ, ಅವುಗಳನ್ನು ಪೂಜಾದಿಗಳಿಂದ ಒಲಿಸಿಕೊಂಡು ಪೃಥ್ವಿಗೆ ಒಳ್ಳೆಯದಾಗಿಸಿ, ಜೀವಿಗಳಿಗೆ ಪರಮಾತ್ಮನ ಅನುಗ್ರಹ ಸಂಪಾದಿಸಿಕೊಡುವುದರಲ್ಲಿ ಯಶಸ್ವಿಗಳಾಗಿರುತ್ತಾರೆ. ಸ್ಮೃತಿಗಳು ಸೂರ್ಯನನ್ನು ಗ್ರಹಪತಿ ಎಂಬುದಾಗಿ ಹೇಳಿ, ಯಾವುದೇ ಕರ್ಮವನ್ನು ಮಾಡಬೇಕಾದರೂ, ಸೂರ್ಯಾದಿ ಗ್ರಹಗಳನ್ನು ಪ್ರಾರಂಭದಲ್ಲಿ ಪೂಜಿಸಬೇಕಾದ ವಿಧಿಯನ್ನು ಒತ್ತಿ ಹೇಳಿವೆ.

**"ನವಗ್ರಹಮಖಂ ಕೃತ್ವಾ ತತಃ ಕರ್ಮ ಸಮಾರಭೇತ್|**
**ಅನ್ಯಥಾ ಫಲದಂ ಪುಂಸಾಂ ನ ಕಾಮ್ಯಂ ಜಾಯತೇ ಕ್ವಚಿತ್ ||"**

(ತಿಥ್ಯಾದಿ ತತ್ವಂ)

ಪುರಾಣಗಳು ಗ್ರಹಶಾಂತಿ, ಗ್ರಹಯಜ್ಞ, ಗ್ರಹಯಾಗ, ಮತ್ತು ಗ್ರಹಪೂಜಾದಿಗಳನ್ನು ಮಾಡಬೇಕಾದ ಅವಶ್ಯಕತೆಯನ್ನು ಪದೇ ಪದೇ ಹೇಳಿವೆ.

**ಶ್ರೀಕಾಮಃ ಶಾಂತಿಕಾಮೋ ವಾ ಗ್ರಹಯಜ್ಞಂ ಸಮಾಚರೇತ್ |**
**ವೃದ್ಧ್ಯಾಯುಃ ಪುಷ್ಟಿಕಾಮೋ ವಾ ತಥೈವಾಭಿಚರನ್ ಪುನಃ |**
**ಯೇನ ಬ್ರಹ್ಮನ್ ವಿಧಾನೇನ ತನ್ಮೇ ನಿಗದತಃ ಶೃಣು ||**

ಸಂಪತ್ತು, ಶಾಂತಿ, ಆಯುರ್ವೃದ್ಧಿ, ಆರೋಗ್ಯ ಇತ್ಯಾದಿಗಳನ್ನು ಬಯಸುವವನು ನವಗ್ರಹಗಳನ್ನು ಉಕ್ತ ಕ್ರಮದಲ್ಲಿ ಪೂಜಿಸಬೇಕು. (ಮತ್ಸ್ಯ ಪುರಾಣ)

ಗ್ರಹರೂಪದಿಂದ ವ್ಯಕ್ತವಾಗಿರುವ ಈ ದೇವತೆಗಳಿರುವ ಸ್ಥಳವನ್ನು ಈ ರೀತಿ ಗುರುತಿಸಿದೆ.

**ಅರ್ಕ ಶುಕ್ರಾಽರ ರಾಹ್ವರ್ಕಿ ಚಂದ್ರಜ್ಞಗುರವಃ ಕ್ರಮಾತ್ |**
**ಪೂರ್ವಾದೀನಾಂ ದಶಾಮೀಶಾಃ ಕ್ರಮಾನ್ನಷ್ಟಾದಿ ಸೂಚಕಾಃ ||**

ಸೂರ್ಯ(ಅರ್ಕ), ಶುಕ್ರ, ಅರ(ಮಂಗಳ), ರಾಹು ಮತ್ತು ಕೇತು, ಅರ್ಕಿ(ಶನಿ) ಚಂದ್ರಜ್ಞ, (ಬುಧ), ಗುರು ಗ್ರಹಗಳು ಪೂರ್ವಾದಿಯಾಗಿ ಅಷ್ಟ ದಿಕ್ಕುಗಳಲ್ಲಿ ಕ್ರಮವಾಗಿ ಪ್ರತಿಷ್ಠಿತವಾಗಿದ್ದು ಎಲ್ಲರನ್ನು ಕಾಪಾಡುವರು(ಈಶಾಃ). ಈ ಗ್ರಹಗಳಿಗೆ ಮೂಲದಲ್ಲಿ ಆ ಪರಮಾತ್ಮನೇ ಇರುವನೆಂದು ಸ್ತುತಿಸಿದೆ.

**"ಜೀವಾನಾಂ ಕರ್ಮಫಲದೋ ಗ್ರಹರೂಪೀ ಜನಾರ್ದನಃ |**
**ದೈತ್ಯಾನಾಂ ಬಲನಾಶಾಯ ದೇವಾನಾಂ ಬಲವೃದ್ಧಯೇ ||**
**ಕರ್ಮ ಸಂಸ್ಥಾಪನಾರ್ಥಾಯ ಗ್ರಹಾಃ ಜಾತಾಃ ಶುಭಾಃ ಕ್ರಮಾತ್|**
**ರಾಮೋಽವತಾರಃ ಸೂರ್ಯಸ್ಯ, ಚಂದ್ರಸ್ಯ ಯದುನಾಯಕಃ ||**
**ನೃಸಿಂಹೋ ಭೂಮಿಪುತ್ರಸ್ಯ ಬುದ್ಧಃ ಸೋಮಸುತಸ್ಯ ಚ |**
**ವಾಮನೋ ವಿಬುಧೇಜ್ಯಸ್ಯ ಭಾರ್ಗವೋ ಭಾರ್ಗವಸ್ಯ ಚ |**
**ಕೂರ್ಮೋ ಭಾಸ್ಕರಪುತ್ರಸ್ಯ ಸೈಂಹಿಕೇಯಸ್ಯ ಸೂಕರಃ |**
**ಕೇತೋರ್ಮೀನಾವತಾರಶ್ಚ ಯೇ ಚಾನ್ಯೇ ತೇಽಪಿ ಖೇಟಜಾಃ ||**

ಆ ಗ್ರಹರೂಪಿಯಾದ ಜನಾರ್ದನನೇ ಜೀವಿಗಳಿಗೆ ಕರ್ಮಫಲಗಳನ್ನು ಕೊಡುವ ಸಲುವಾಗಿ, ದೈತ್ಯರ ಬಲವನ್ನು ನಾಶ ಮಾಡಲು ಮತ್ತು ದೇವತೆಗಳ ಬಲವನ್ನು ವೃದ್ಧಿಸಲು, ಕರ್ಮ ಸಂಸ್ಥಾಪನೆಯನ್ನು ಮಾಡುವುದಕ್ಕಾಗಿ ಗ್ರಹಗಳಾಗಿ ಅವಿರ್ಭವಿಸಿದನು. ಸೂರ್ಯಾದಿಗ್ರಹಗಳಿಂದ ಕ್ರಮವಾಗಿ ಶ್ರೀರಾಮಚಂದ್ರ, ಶ್ರೀಕೃಷ್ಣ, ಶ್ರೀ ನಾರಸಿಂಹ,



shrinath.udupa@gmail.com

ಶ್ರೀ ಬುದ್ಧ, ಶ್ರೀ ವಾಮನ, ಶ್ರೀ ಪರಶುರಾಮ, ಶ್ರೀ ಕೂರ್ಮ, ಶ್ರೀ ವರಾಹ, ಶ್ರೀ ಮತ್ಸ್ಯ ಅವತಾರಗಳಿಂದ ಅವಿರ್ಭವಿಸಿ ಲೋಕಗಳನ್ನು ಕಾಪಾಡಿದನು.

ಮತ್ಸ್ಯ ಪುರಾಣದಲ್ಲಿ ಸೂರ್ಯಾದಿಗ್ರಹಗಳ ಸ್ವರೂಪವನ್ನು ಈ ರೀತಿ ಹೇಳಿದೆ. ಪರಮೇಶ್ವರನಿಂದ ಹೇಳಲ್ಪಟ್ಟ ಈ ಸ್ತೋತ್ರವನ್ನು ಧ್ಯಾನಕ್ಕಾಗಿ ಉಪಯೋಗಿಸುವುದು ರೂಢಿಯಲ್ಲಿದೆ.

***ಸೂರ್ಯದೇವತೆಯ ಸ್ವರೂಪ :***

**ಪದ್ಮಾಸನಃ ಪದ್ಮಕರಃ ಪದ್ಮಗರ್ಭಸಮದ್ಯುತಿಃ|**
**ಸಪ್ತಾಶ್ವಃ ಸಪ್ತರಜ್ಜುಶ್ಚ ದ್ವಿಭುಜಃ ಸ್ಯಾತ್ಸದಾ ರವಿಃ ||**

ಸೂರ್ಯದೇವನು ಪದ್ಮದ ಮೇಲೆ ಕುಳಿತು, ಪದ್ಮಗಳನ್ನು ಕೈಯಲ್ಲಿ ಹಿಡಿದಿರುವನು. ಅವನ ದೇಹ ಕಾಂತಿಯು ತಾವರೆ ಹೂವಿನ ಒಳಭಾಗದ ಕಾಂತಿಯನ್ನು ಹೋಲುವುದು. ಎರಡು ಭುಜಗಳಿಂದ ಕೂಡಿ, ಪ್ರತಿಷ್ಠಿತವಾಗಿರುವ ಈ ದೇವತೆಯ ರಥವು ಏಳು ಹಗ್ಗಗಳಿಂದ ಬಿಗಿಯಲ್ಪಟ್ಟ ಏಳು ಕುದುರೆಗಳಿಂದ ಕೂಡಿರುವುದು, ಎಂಬುದಾಗಿ ಆಕೃತಿಯನ್ನು ಕಲ್ಪಿಸಬೇಕು.

***ಚಂದ್ರದೇವತೆಯ ಸ್ವರೂಪ :***

**ಶ್ವೇತಃ ಶ್ವೇತಾಂಬರಧರಃ ಶ್ವೇತಾಶ್ವಃ ಶ್ವೇತವಾಹನಃ |**
**ಗದಾಪಾಣಿರ್ದ್ವಿಬಾಹುಶ್ಚ ಕರ್ತವ್ಯೋ ವರದಃ ಶಶೀ ||**

ಬೆಳ್ಳಗೆ ಶೋಭಿಸುತ್ತಿರುವ ದೇಹವುಳ್ಳವನಾಗಿಯೂ ಬಿಳಿ ಬಟ್ಟೆಯನ್ನು ಧರಿಸಿ, ಬಿಳಿಯ ಕುದುರೆಯನ್ನೇರಿ, ಗದೆಯನ್ನು ಹಿಡಿದು, ಭುಜದ್ವಯನಾಗಿ, ವರಮುದ್ರೆಯಿಂದ ಕೂಡಿ, ಶ್ವೇತವಾಹನನೆನಿಸಿದ ಚಂದ್ರನ ಮೂರ್ತಿಯನ್ನು ಧ್ಯಾನಿಸಬೇಕು.

***ಅಂಗಾರಕ ದೇವತೆಯ ಸ್ವರೂಪ :***

**ರಕ್ತಮಾಲ್ಯಾಂಬರಧರಃ ಶಕ್ತಿಶೂಲಗದಾಧರಃ |**
**ಚತುರ್ಭುಜಃ ಶ್ವೇತರೋಮಾ ವರದಃ ಸ್ಯಾದ್ಧರಾಸುತಃ ||**

ಭಕ್ತರನ್ನು ಕಾಪಾಡುವ ಅಂಗಾರಕ ದೇವತೆಯನ್ನು ಕೆಂಪು ಹೂವಿನಿಂದ ಅಲಂಕೃತನಾಗಿ, ಕೆಂಪು ಬಣ್ಣದ ವಸ್ತ್ರವನ್ನು ಧರಿಸಿ, ಶಕ್ತಿ ಶೂಲ ಗದಾಧರನಾಗಿ, ವರದ ಮುದ್ರೆಯಿಂದ ಕೂಡಿ, ಚತುರ್ಭುಜನಾಗಿ, ಬಿಳಿಯ ಕೂದಲಿನಿಂದ ಶೋಭಿಸುತ್ತಿರುವಂತೆ ಧ್ಯಾನಿಸಬೇಕು.

***ಬುಧ ಗ್ರಹ ದೇವತೆಯ ಸ್ವರೂಪ :***

**ಪೀತಮಾಲ್ಯಾಂಬರಧರಃ ಕರ್ಣಿಕಾರ ಸಮದ್ಯುತಿಃ |**
**ಖಡ್ಗ ಚರ್ಮಗದಾಪಾಣಿಃ ಸಿಂಹಸ್ಥೋ ವರದೋ ಬುಧಃ ||**

ವರದ ಮೂರ್ತಿಯಾದ ಬುಧ ದೇವತೆಯು ಪೀತಾಂಬರದಿಂದಲೂ, ಬಿಳಿ ಹೂವಿನಿಂದಲೂ ಅಲಂಕೃತನಾಗಿ, ಬೆಟ್ಟದಾವರೆಯನ್ನು ಹೋಲುವ ಮೈಬಣ್ಣದಿಂದ ಕೂಡಿ, ಖಡ್ಗ, (ಜಿಂಕೆಯ)ಚರ್ಮ, ಗದೆಗಳನ್ನು ಆಯುಧವನ್ನಾಗಿ ಹೊಂದಿ, ಸಿಂಹದ ಮೇಲೆ ಕುಳಿತಿರುವನು.

*ಬೃಹಸ್ಪತಿ ಗ್ರಹದೇವತೆ, ಶುಕ್ರದೇವತೆಗಳ ಸ್ವರೂಪವು :*

**ದೇವದೈತ್ಯಗುರೂ ತದ್ವತ್ಪೀತಶ್ವೇತೌ ಚತುರ್ಭುಜೌ |**
**ದಂಡಿನೌ ವರದೌ ಕಾರ್ಯೌ ಸಾಕ್ಷಸೂತ್ರಕಮಂಡಲೂ ||**

ದೇವತೆಗಳ ಗುರು ಬೃಹಸ್ಪತಿಯು ಹಳದಿ ಬಣ್ಣದ ವಸ್ತ್ರದಿಂದ ಅಲಂಕೃತನಾಗಿ ; ದಂಡ, ಜಪಸರ ಮತ್ತು ಕಮಂಡಲುಗಳನ್ನು ಹಿಡಿದು, ವರದ ಮುದ್ರೆಯಿಂದ ಕೂಡಿ, ಚತುರ್ಭುಜನಾಗಿ ಶೋಭಿಸುತ್ತಿರುವನು.

ದೈತ್ಯರ ಗುರುವಾದ ಶುಕ್ರ ದೇವತೆಯು ಬಿಳಿಯ ಬಣ್ಣದ ವಸ್ತ್ರದಿಂದ ಅಲಂಕೃತನಾಗಿ, ದಂಡ ಜಪಸರ ಮತ್ತು ಕಮಂಡಲುಗಳನ್ನು ಹಿಡಿದು, ವರದ ಮುದ್ರೆಯಿಂದ ಕೂಡಿ, ಚತುರ್ಭುಜನಾಗಿ ಶೋಭಿಸುತ್ತಿರುವನು.

*ಶನೈಶ್ಚರ ಗ್ರಹ ದೇವತೆಯ ಸ್ವರೂಪ :*

**ಇಂದ್ರನೀಲದ್ಯುತಿಃ ಶೂಲೀ ವರದೋ ಗೃಧ್ರವಾಹನಃ |**
**ಬಾಣಬಾಣಾಸನಧರಃ ಕರ್ತವ್ಯೋಽರ್ಕಸುತಸ್ತಥಾ ||**

ಸೂರ್ಯಪುತ್ರನಾದ ಶನೈಶ್ಚರ ದೇವತೆಯು ಇಂದ್ರನೀಲ ರತ್ನದಂತಹ, ದೇಹ ಕಾಂತಿಯನ್ನು ಹೊಂದಿ, ಧನುರ್ಬಾಣಗಳನ್ನೂ, ಶೂಲವನ್ನೂ ಹಿಡಿದವನಾಗಿ, ವರದಮುದ್ರೆಯಿಂದ ಕೂಡಿ, ಗೃಧ್ರವಾಹನನಾಗಿ ಶೋಭಿಸುತ್ತಿರುವನು. (ಗೃಧ್ರ-ಪಕ್ಷಿ)

*ರಾಹು ಗ್ರಹ ದೇವತೆಯ ಸ್ವರೂಪ :*

**ಕರಾಲವದನಃ ಖಡ್ಗ ಚರ್ಮ ಶೂಲೀ ವರಪ್ರದಃ |**
**ನೀಲಸಿಂಹಾಸನಸ್ಥಶ್ಚ ರಾಹುರತ್ರ ಪ್ರಶಸ್ಯತೇ ||**

ಭಯಂಕರ ಮುಖವುಳ್ಳವನಾಗಿ, ಖಡ್ಗ, ಚರ್ಮ, ಶೂಲಾಯುಧಗಳನ್ನು ಹಿಡಿದು, ವರದಮುದ್ರೆಯಿಂದ ಕೂಡಿ, ನೀಲರತ್ನ ನಿರ್ಮಿತವಾದ ಸಿಂಹಾಸನದ ಮೇಲೆ ಕುಳಿತಿರುವನೆಂದು ಪ್ರಸಿದ್ಧವಾಗಿದೆ.

*ಕೇತುಗ್ರಹದೇವತೆಯ ಸ್ವರೂಪ :*

**ಧೂಮ್ರಾ ದ್ವಿಬಾಹವಃ ಸರ್ವೇ ಗದಿನೋ ವಿಕೃತಾನನಾಃ |**
**ಗೃಧ್ರಾಸನಗತಾ ನಿತ್ಯಂ ಕೇತವಃ ಸ್ಯುರ್ವರಪ್ರದಾಃ ||**

ಕೇತು ದೇವತೆಯು ಹಲವಾರು ರೂಪಗಳಿಂದ ಕೂಡಿ, ಧೂಮ್ರವರ್ಣ ಕಾಂತಿಯಿಂದ ಶೋಭಿಸುತ್ತಿರುವನು. ವಿಕಾರವಾದ ಮುಖವನ್ನು ಹೊಂದಿ, ಗದಾಯುಧನಾಗಿ, ಗೃಧ್ರಾಸನದಲ್ಲಿ ಸ್ಥಿತರಾಗಿರುವನು.

**||ಸರ್ವೇ ಕಿರೀಟಿನಃ ಕಾರ್ಯಾ ಗ್ರಹಾ ಲೋಕಹಿತಾವಹಾಃ ||**



**ಸೂರ್ಯಾದಿ ಗ್ರಹಗಳು ಜನಿಸಿದ ಗೋತ್ರವೇ ಮೊದಲಾದ ವಿವರಗಳು**

| ಸಂ. | ವಿವರಗಳು | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು |
|---|---|---|---|---|---|---|---|---|---|---|
| 1. | ಗೋತ್ರ | ಕಾಶ್ಯಪ | ಅತ್ರಿ | ಭರದ್ವಾಜ | ಅತ್ರಿ | ಅಂಗೀರಸ | ಭಾರ್ಗವ | ಕಾಶ್ಯಪ | ಪೈಠೀನಸ | ಪೈಠೀನಸ(ಜೈಮಿನಿ) |
| 2. | ಜನ್ಮ ಸಂವತ್ಸರ | ಪ್ರಭವ | ನಂದನ | ಕ್ಷಯ | ಸೌಮ್ಯ | ಸೌಮ್ಯ | ಮನ್ಮಥ | ವಿಕಾರಿ | ... | .... |
| 3. | ಜನ್ಮ ಮಾಸ | ಮಾಘ | ಕಾರ್ತಿಕ | ಭಾದ್ರಪದ | ವೈಶಾಖ (ಜ್ಯೇಷ್ಠ) | ವೈಶಾಖ | ಚೈತ್ರ | ವೈಶಾಖ | ಭಾದ್ರಪದ | ಭಾದ್ರಪದ |
| 4 | ಜನ್ಮ ಪಕ್ಷ | ಶುಕ್ಲ | ಶುಕ್ಲ | ಶುಕ್ಲ | ಶುಕ್ಲ | ಶುಕ್ಲ | ಶುಕ್ಲ | ಕೃಷ್ಣ | ಶುಕ್ಲ | ಶುಕ್ಲ |
| 5 | ಜನ್ಮ ತಿಥಿ | ಸಪ್ತಮೀ | ಚತುರ್ದಶಿ | ದ್ವಿತೀಯಾ | ಏಕಾದಶಿ | ದ್ವಾದಶಿ | ದಶಮಿ | ನವಮಿ (ಅಮಾವಾಸ್ಯಾ) | ಪೌರ್ಣಮಿ | ಪೌರ್ಣಮಿ |
| 6. | ಜನ್ಮ ನಕ್ಷತ್ರ | ವಿಶಾಖ | ಕೃತ್ತಿಕಾ | ಹುಬ್ಬ | ಉತ್ತರ | ಧನಿಷ್ಠಾ | ಪುಷ್ಯ | ರೋಹಿಣಿ | ಅಭಿಜಿನ್ | ಅಭಿಜಿನ್ |
| 7. | ಜನ್ಮ ವಾರ | ಭಾನು | ಸೋಮ | ಮಂಗಳ | ಬುಧ | ಗುರು | ಶುಕ್ರ | ಶನಿ | ... | .... |
| 8. | ಸ್ಥಿತವಾಗಿರುವ ಮಂಡಲ | ವರ್ತುಲ | ಚತುರಸ್ರ | ತ್ರಿಕೋನ | ಬಾಣ | ದೀರ್ಘ ಚತುರಸ್ರ | ಪಂಚಕೋಣ | ಧನುಷ್ಯ | ಶೂರ್ಪ | ಧ್ವಜ |
| 9. | ಅಧಿದೇವತೆ | ಅಗ್ನಿ | ಅಪ್(ಜಲ) | ಭೂಮಿ | ವಿಷ್ಣು | ಇಂದ್ರ | ಇಂದ್ರಾಣೀ | ಪ್ರಜಾಪತಿ | ಸರ್ಪ | ಬ್ರಹ್ಮ |
| 10. | ಪ್ರತ್ಯಧಿದೇವತೆ | ಈಶ್ವರ (ರುದ್ರ) | ಪಾರ್ವತಿ (ಉಮಾ) | ಸ್ಕಂದ | ನಾರಾಯಣ (ಪುರುಷ) | ಬ್ರಹ್ಮಾ | ಇಂದ್ರ | ಯಮ | ಕಾಲ | ಚಿತ್ರಗುಪ್ತ |
| 11. | ದಿಕ್ಕುಗಳು(ಆದಿಪತ್ಯ) | ಪೂರ್ವ | ವಾಯುವ್ಯ | ದಕ್ಷಿಣ | ಉತ್ತರ | ಈಶಾನ್ಯ | ಆಗ್ನೇಯ | ಪಶ್ಚಿಮ | ನೈಋತ್ಯ | ಈಶಾನ್ಯ |



shrinath.udupa@gmail.com

| ಸಂ. | ವಿವರಗಳು | ರವಿ | ಚಂದ್ರ | ಕುಜ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು |
|---|---|---|---|---|---|---|---|---|---|---|
| 12. | ತತ್ತ್ವ | ತೇಜಸ್ಸು | ಜಲ | ತೇಜಸ್ಸು | ಭೂಮಿ | ಆಕಾಶ | ಜಲ | ವಾಯು | ವಾಯು | ಅಗ್ನಿ |
| 13. | ಜಾತಿ | ಕ್ಷತ್ರಿಯ | ವೈಶ್ಯ | ಕ್ಷತ್ರಿಯ | ವೈಶ್ಯ | ಬ್ರಾಹ್ಮಣ | ಬ್ರಾಹ್ಮಣ | ಶೂದ್ರ | ಚಾಂಡಾಲ | ಅಂತ್ಯಜ |
| 14. | ದೇಶ | ಕಳಿಂಗ | ಯಮುನ | ಅವನ್ತಿ | ಮಗಧ | ಸಿಂಧು | ಕಾಂಬೋಜ (ಪಾಂಚಾಲ) | ಸೌರಾಷ್ಟ್ರ | ಸಿಂಹಳ | ಬರ್ಭರ |
| 15. | ಪತ್ರ/ಸಮಿತ್ತುಗಳು | ಅರ್ಕ | ಮುತ್ತುಗ | ಕಾದಿರ | ಉತ್ತರಣೆ | ಅಶ್ವತ್ಥ | ಅತ್ತಿ | ಬನ್ನಿ | ಗರಿಕೆ | ದರ್ಭೆ |
| 16. | ಹೂವು (ಬಣ್ಣ) | ಕೆಂಪು | ಬಿಳಿ | ಕಣಗಲೆ | ಎಲ್ಲ ಬಣ್ಣಗಳು | ಹಳದಿ | ಬಿಳಿ | ಕಪ್ಪು(ನೀಲಿ) | ಕಪ್ಪು(ನೀಲಿ) | ಹೊಗೆ |
| 17. | ಧಾನ್ಯಗಳು | ಗೋಧಿ | ಅಕ್ಕಿ | ತೊಗರಿ | ಹೆಸರು | ಕಡಲೆ | ಅವರೆ | ಎಳ್ಳು | ಉದ್ದು | ಹುರುಳಿ |
| 18. | ಲೋಹ | ತಾಮ್ರ | ಬೆಳ್ಳಿ | ಚಿನ್ನ | ಹಿತ್ತಾಳೆ | ಚಿನ್ನ | ಬೆಳ್ಳಿ | ಕಬ್ಬಿಣ | ಸೀಸ | ಸತು |
| 19. | ರತ್ನ | ಮಾಣಿಕ್ಯ | ಮುತ್ತು | ಹವಳ | ಪಚ್ಚೆ | ಪುಷ್ಯರಾಗ | ವಜ್ರ | ನೀಲ | ಗೋಮೇಧಿಕ | ವೈಢೂರ್ಯ |
| 20. | ವರ್ಣ | ರಕ್ತ | ಬಿಳಿ | ರಕ್ತ | ಹಸಿರು(ಪೀತ) | ಹಳದಿ | ಬಿಳಿ | ನೀಲಿ/ಕಪ್ಪು | ಕಪ್ಪು | ಚಿತ್ರ |
| 21. | ಪತ್ನಿಯರು | ಛಾಯಾ/ಸಂಜ್ಞಾ | ರೋಹಿಣಿ | ಶಕ್ತಿ | ಜ್ಞಾನೀ | ತಾರಾ | ಸುಕೀರ್ತಿ | ಜ್ಯೇಷ್ಠಾ | ಸಿಂಹೀ | ಚಿತ್ರಲೇಖಾ |
| 22. | 'ನವಗ್ರಹಗಳ ಪೂಜೆಗಾಗಿ 1. ಪ್ರತಿಷ್ಠಿಸಬೇಕಾದ ಮತ್ತು 2. ಅಭಿಮುಖವಾಗಿರಿಸಬೇಕಾದ ದಿಕ್ಕುಗಳು | | | | | | | | | |
| | 1.1 ಋಗ್ವೇದ ಯಜುರ್ವೇದದಂತೆ | ಮಧ್ಯೆ | ಆಗ್ನೇಯ | ದಕ್ಷಿಣ | ಈಶಾನ್ಯ | ಉತ್ತರ | ಪೂರ್ವ | ಪಶ್ಚಿಮ | ನೈಋತ್ಯ | ವಾಯವ್ಯ |
| | 1.2 ಸಾಮವೇದದಂತೆ | ಮಧ್ಯೆ | ಪೂರ್ವ | ಆಗ್ನೇಯ | ದಕ್ಷಿಣ | ಉತ್ತರ | ಪಶ್ಚಿಮ | ನೈಋತ್ಯ | ವಾಯವ್ಯ | ಈಶಾನ್ಯ |
| | 2 ಅಭಿಮುಖ ದಿಕ್ಕು | ಪೂರ್ವ | ಪಶ್ಚಿಮ | ದಕ್ಷಿಣ | ಉತ್ತರ | ಉತ್ತರ | ಪೂರ್ವ | ಪಶ್ಚಿಮ | ದಕ್ಷಿಣ | ದಕ್ಷಿಣ |



ಎಲ್ಲಾ ಗ್ರಹದೇವತೆಗಳು ಕಿರೀಟಗಳಿಂದ ಅಲಂಕೃತರಾಗಿ, ಲೋಕ ಹಿತವನ್ನು ಮಾಡತಕ್ಕವರಾಗಿದ್ದಾರೆ. ಈ ರೀತಿಯಲ್ಲಿ ಅವರ ವಿಗ್ರಹಗಳನ್ನೂ ನಿರ್ಮಿಸಬೇಕು.

ಸೂರ್ಯಾದಿ ಗ್ರಹಗಳು ದಿವ್ಯ ದೃಷ್ಟಿಯುಳ್ಳ ಋಷಿಗಳ ಪ್ರಕಾರ, ಪರಮಾತ್ಮನ ದಿವ್ಯ ಶಕ್ತಿಗಳೆಂದು ಅವುಗಳ ಹೆಸರುಗಳ ಶಬ್ದದ ಉತ್ಪತ್ತಿಯೇ ಸೂಚಿಸುತ್ತದೆ.

**1. ಸೂರ್ಯ :** ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ -(ಯಜುರ್ವೇದ 7-42)

**ಯಶ್ಚರಾಚರಂ ಜಗತ್ ಸುನೋತಿ ಸೂತೇ| ಯೋSತ್ಪಾದಯತಿ ಸ ಸವಿತಾ ಪರಮೇಶ್ವರಃ|** ಜಗತ್ತನ್ನು ಸೃಷ್ಟಿಸುವುದರಿಂದ ಈತನು ಸವಿತೃವೆನಿಸಿದನು.

**√ದೋ -** ಅವಖಂಡನೇ ಧಾತುವಿನಿಂದ 'ಅದಿತಿ' ಶಬ್ದದ ಉತ್ಪತ್ತಿಯು. ಅದಿತಿ ಶಬ್ದದಿಂದ ಆದಿತ್ಯ ಶಬ್ದದ ಉತ್ಪತ್ತಿಯು. ನಾಶವಿಲ್ಲದವನು ಆದಿತ್ಯನು.

"ನ ವಿದ್ಯತೇ ವಿನಾಶೋ ಯಸ್ಯ ಸಃ ಅಯಂ ಅದಿತಿಃ | ಅದಿತಿರೇವ ಆದಿತ್ಯಃ ||

**2. ಚಂದ್ರ : √'ಚದಿ-ಆಹ್ಲಾದೇ'** ಧಾತುವಿನಿಂದ ಉತ್ಪತ್ತಿಯು. ಯಶ್ಚಂದತಿ ಚಂದಯತಿ ವಾ ಸಃ ಚಂದ್ರಃ ||

**3. ಮಂಗಳ :** ಮಗಿ ಗತ್ಯರ್ಥಕದಿಂದ ಮಂಗಳ ಶಬ್ದವು. ಮಂಗರೇಲ ಚ ಸೂತ್ರದಿಂದ ಉತ್ಪತ್ತಿಯಾದುದು- ಯೋ. ಮಂಗತಿ ಮಂಗಯತಿ ವಾ ಸಃ ಮಂಗಳಃ ||

**4. ಬುಧ : √'ಬುಧ್ ಅವಗಮನೇ ಧಾತುವಿನಿಂದ ಅವಗಮನೇ'** ಬುಧ ಶಬ್ದವು

- ಯೋ ಬುಧ್ಯತೇ ಬೋಧಯತಿ ವಾ ಸಃ ಬುಧಃ|

**5. ಬೃಹಸ್ಪತಿ : √'ಪಾ - ರಕ್ಷಣೇ'**ಯಿಂದ ಬೃಹಸ್ಪತಿಯು

ಯೋ ಬೃಹತಮಾಕಾಳದೀನಂ ಸತಿಃ ಸ್ವಾಮಿಸಲಯಿತ ಸ ಬೃಹಸ್ಪತಿಃ

**6. ಶುಕ್ರ : 'ಇಷುಚಿರ್‌ಪೂತಿ ಭಾವೇ'** ಎಂಬುದರಿಂದ ಶುಕ್ರಶಬ್ದವು

ಯಃ ಶುಚಯತಿ ಶೋಚಯತಿ ವಾ ಸಃ ಶುಕ್ರಃ ||

**7. ಶನೈಶ್ಚರ : √'ಚರ್ - ಗತಿಭಕ್ಷಣಯೋಃ'** ಎಂಬುದರಿಂದ ಶನೈಶ್ಚರ ಶಬ್ದವು

ಶನೈಶ್ಚ ಅವ್ಯಯವು ಸೇರಿ ಶನೈಶ್ಚರವೆಂಬುದಾಗಿದೆ

ಯಃ ಶನೈಶ್ಚರತಿ ಸಃ ಶನೈಶ್ಚರಃ ||

**8. ರಾಹು : √'ರಾಹ್ ತ್ಯಾಗೇ'** ಎಂಬುದರಿಂದ ರಾಹುಶಬ್ದವು

ಯೋ ರಹತಿ ಪರಿತ್ಯಜತಿ ದುಷ್ಟಂ ರಹಯತಿ |

ತ್ಯಜಯತಿ ವಾ ಸಃ ರಾಹುರೀಶ್ವರಃ ||

shrinath.udupa@gmail.com

9. ಕೇತು : √'ಕಿತ್ - ನಿವಾಸೇ ರೋಗಾಪನಯನೇ ಚ' ಎಂಬುದರಿಂದ ಕೇತುವು

ಯಃ ಕೇತಯತಿ ಚಿಕಿತ್ಸತಿ ವಾ ಸಃ ಕೇತುರೀಶ್ವರಃ ||

## ೯. ಸಪ್ತ ಮರುತ್ ಸಂಚಾರ ಸಂಜೀವಿತ ಜೀವನಿಕುರುಂಭೇ

ಕಶ್ಯಪ ಮಹರ್ಷಿಗಳ ಪತ್ನಿಯಾದ ದಿತಿದೇವಿಯು ತನ್ನ ಮಕ್ಕಳಾದ ಹಿರಣ್ಯಾಕ್ಷ ಮತ್ತು ಹಿರಣ್ಯಕಶಿಪು ಎಂಬ ಅಸುರರನ್ನು ಕಳೆದುಕೊಂಡು, ಅತ್ಯಂತ ದುಃಖಪಟ್ಟು, ಬಹಳ ಆಲೋಚನೆ ಮಾಡಿ, ಪತಿದೇವರನ್ನು ಮೆಚ್ಚಿಸಿ, ಪುನಃ ಶಕ್ತಿಯುತವಾದ ಸಂತತಿಯನ್ನು ಪಡೆಯಬೇಕೆಂದು, ಅವರ ಸೇವೆಯನ್ನು ಬಹಳ ಭಕ್ತಿಯಿಂದ ಮಾಡಿ, ಅವರ ಅನುಗ್ರಹಕ್ಕೆ ಪಾತ್ರಳಾದಳು. ಆಕೆಯ ಭಕ್ತಿಗೆ ಮೆಚ್ಚಿ ಅವರು ಕೇಳಿದ ವರವನ್ನು ಕೊಡಲು ಮುಂದಾದರು. ಸಮಯವನ್ನು ಸೂಕ್ತವಾಗಿ ಉಪಯೋಗಿಸಿಕೊಳ್ಳಲು, ಮೊದಲೇ ಯೋಚಿಸಿದ್ದಂತೆ, ದಿತಿ ದೇವಿಯು ತನಗೆ ಇಂದ್ರನನ್ನು ಸಂಹರಿಸುವಂತಹ ಪುತ್ರನಾಗಬೇಕೆಂದು ವರವನ್ನು ಕೇಳಿದಳು. ಕಶ್ಯಪರು ಸಂದಿಗ್ಧಕ್ಕೆ ಸಿಕ್ಕಿದವರಾಗಿ, ಬೇರೆ ಮಾರ್ಗವಿಲ್ಲದೆ ಈ ವರವನ್ನು ಅನುಗ್ರಹಿಸಿದರು. ಆದರೆ ಆಕೆಯು ಒಂದು ವರ್ಷಕಾಲ ಕಠಿನವ್ರತ ನಿಯಮಗಳನ್ನು ಅನುಸರಿಸಿದರೆ ಮಾತ್ರ ಇದು ಸಾಧ್ಯವೆಂದೂ ಅವರು ತಿಳಿಸಿದರು. ಅದರಂತೆಯೇ ಆಕೆಯು ಬಹಳ ಎಚ್ಚರದಿಂದ ನಿಯಮಗಳನ್ನು ಪಾಲಿಸುತ್ತಿದ್ದಳು. ವಿಧಿವಶದಿಂದ ಒಂದು ದಿನ ಸಂಧ್ಯಾ ಕಾಲದಲ್ಲಿ ಎಚ್ಚರ ತಪ್ಪಿ ನಿದ್ರೆಗೆ ಒಳಗಾದಳು. (ವ್ರತನಿಯಮದಂತೆ ಸಂಧ್ಯಾ ಕಾಲದಲ್ಲಿ ಧ್ಯಾನ, ಚಿಂತನೆ, ಸತ್ಸಂಗ ಇತ್ಯಾದಿಗಳನ್ನೇ ಮಾಡಬೇಕೆಂಬ ನಿಯಮವಿದೆ). ಇಂತಹ ಸಮಯವನ್ನೇ ನಿರೀಕ್ಷಿಸುತ್ತಿದ್ದ ದೇವರಾಜನಾದ ಇಂದ್ರನು, ಆಕೆಯ ಗರ್ಭವನ್ನು ಯೋಗಬಲದಿಂದ ಪ್ರವೇಶಿಸಿ, ಅಲ್ಲಿ ಬೆಳೆಯುತ್ತಿದ್ದ ಗರ್ಭವನ್ನು ತನ್ನ ವಜ್ರಾಯುಧದಿಂದ ಏಳು ಭಾಗಗಳಾಗಿ ಕತ್ತರಿಸಿದನು. ಅವುಗಳು ಏಳು ಪ್ರಧಾನ ರೂಪವನ್ನು ತಾಳಿದಾಗ, ಹೆದರಿ ಮತ್ತೆ ಏಳು ಏಳು ಭಾಗಗಳಾಗಿ ಕತ್ತರಿಸಿದನು. ಆಗ ಅವುಗಳು ಒಟ್ಟು 49 ರೂಪಗಳಾಗಿ ಬದುಕಿ ಉಳಿದುಕೊಂಡವು. ದಿತಿದೇವಿಯು ಬಹಳ ದಿನಗಳ ಕಾಲ ವ್ರತವನ್ನು ಅತ್ಯಂತ ನಿಷ್ಠೆಯಿಂದ ಮಾಡಿದ್ದರಿಂದ ಆ ಪುಣ್ಯ ಫಲವು ವ್ಯರ್ಥವಾಗಲಿಲ್ಲ. ಆ ಜೀವಿಗಳು ಅಳಲು ಪ್ರಾರಂಭಿಸಿದಾಗ, ಇಂದ್ರನು ಅಳಬಾರದೆಂದು ಹೇಳಿದನು( ಮಾ-ರುದ) ಆಗ ಅವುಗಳು ತಾವು ಮರುದ್ಗಣಗಳೆಂದೂ, ದೇವರಾಜನ ತಮ್ಮಂದಿರೇ ಆಗಿರುವಾಗ, ಏತಕ್ಕಾಗಿ ಸಂಹರಿಸುವ ಪ್ರಯತ್ನ ನಡೆಯಿತೆಂದು ಕೇಳಿದವು. ದೇವರಾಜನಿಗೆ ಸಂದರ್ಭದ ಅರಿವು ಪ್ರಾಪ್ತಿಯಾಗಿ, ಹೆದರಿಕೆಯನ್ನು ತೊರೆದು, ಅವುಗಳಿಗೆ ಶಾಶ್ವತವಾದ ಸೋಮಪಾನಕ್ಕೆ ಅರ್ಹರಾದ ದೇವತೆಗಳ ಪದವಿಯನ್ನು ಅನುಗ್ರಹಿಸಿದನು. ಇವರು 49 ಮಂದಿ ಇದ್ದರು. ಪ್ರಧಾನರಾದ ಸಪ್ತ ಮರುದ್ಗಣಗಳೆಂದು ಪ್ರಸಿದ್ಧರಾಗಿ ದೇವರಾಜನಿಗೆ ಸರಿಸಮಾನರಾದರು.



(ಭಾಗ 6-18). ಇವರ ಆವಹ- ನಿವಹ- ಸಂವಹ- ಅನುವಹ- ಪ್ರವಹ- ಉದ್ವಹ- ಪರಿವಹ ಎಂಬ ಹೆಸರುಗಳಿಂದ ಪ್ರಸಿದ್ಧರಾದರು. ಇವರ ಒಂದು ರೂಪದಿಂದ ಬ್ರಹ್ಮಲೋಕದಲ್ಲಿಯೂ, ಮತ್ತೊಂದು ರೂಪದಿಂದ ಇಂದ್ರಲೋಕದಲ್ಲಿಯೂ, ಮೂರನೆಯದು ' ದೇವವಾಯು' ಎಂಬ ರೂಪದಿಂದ ದೇವಲೋಕದಲ್ಲಿಯೂ, ಉಳಿದ ನಾಲ್ಕು ರೂಪಗಳಿಂದ ನಾಲ್ಕು ದಿಕ್ಕುಗಳಲ್ಲೂ ಸಂಚರಿಸುತ್ತಾ ಸಕಲ ಜೀವಿಗಳ ಸ್ಥಿತಿಗೂ ಕಾರಣರಾಗಿ ದಿವ್ಯರೂಪದಲ್ಲಿರುವರು.( ರಾಮಾ- ಬಾಲ)

## ೧೦. ದಶಾರಣ್ಯ ಪರಿಮಂಡಿತೇ

ಭೂಮಿಯು ಅನೇಕಾನೇಕ ಅರಣ್ಯಗಳಿಂದ ಪರಿವೃತವಾಗಿದೆ. ಇವುಗಳಲ್ಲಿ ಬಹು ಪ್ರಮುಖವಾದ ಮತ್ತು ಪುಣ್ಯಾರಣ್ಯಗಳೆಂದು ಕರೆಯಲ್ಪಟ್ಟಿರುವ ಹತ್ತು ಅರಣ್ಯಗಳಿಂದ ಭೂಮಿಯು ಪರಿಮಂಡಿತವಾಗಿದೆಯೆಂದು ಇಲ್ಲಿ ಸ್ತುತಿಸಿದೆ. ಈ ಅರಣ್ಯಗಳು ಅನೇಕ ಪುಣ್ಯನದಿಗಳಿಂದ ವಿರಾಜಿತವಾಗಿ, ಅನೇಕ ಋಷಿ ಮುನಿಗಳು ತಪಸ್ಸಿಗಾಗಿ ಆರಿಸಿಕೊಂಡ ಕ್ಷೇತ್ರಗಳಾಗಿವೆ. ವೇದಾಧ್ಯಯನ, ಪುರಾಣಶ್ರವಣ ಮತ್ತು ಯಜ್ಞಯಾಗಾದಿಗಳು ನಿರಂತರವಾಗಿ ಆಚರಿಸಲ್ಪಡುತ್ತಿದ್ದ ಪುಣ್ಯಸ್ಥಳಗಳಾದ್ದರಿಂದ ರಾಜ ಮಹಾರಾಜರುಗಳಾದಿಯಾಗಿ ಭೂಮಂಡಲಾಧಿಪತಿಗಳೂ ಸಹ ಈ ಪುಣ್ಯಾರಣ್ಯಗಳಿಗೆ ಬಂದು ಜ್ಞಾನ ಸಂಪಾದನೆಗಾಗಿ ಋಷಿಗಳನ್ನು ಆಶ್ರಯಿಸುತ್ತಿದ್ದರು. ಜ್ಞಾನವೇ ಪ್ರಧಾನವಾದ ಕಾಲವಾಗಿದ್ದರಿಂದ ಈ ಪುಣ್ಯಾರಣ್ಯಗಳನ್ನು ದುಷ್ಟರಿಂದ ರಕ್ಷಿಸುವುದು ತಮ್ಮ ಆದ್ಯ ಕರ್ತವ್ಯವೆಂದು ತಿಳಿದು, ಇವುಗಳ ಪರಿಪಾಲನೆಯಲ್ಲಿ ಕೃತಾರ್ಥತೆಯನ್ನು ಕಾಣುತ್ತಿದ್ದರು. ಇದರಿಂದ ನಿರಂತರ ವೈದಿಕ ಕರ್ಮಗಳು ನಡೆಯುತ್ತಿದ್ದು, ಪ್ರಪಂಚವು ದೇವತೆಗಳ ತೇಜಸ್ಸಿನಿಂದ ಶೋಭಿಸುತ್ತಾ, ಪ್ರಜೆಗಳು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಫಲಪುರುಷಾರ್ಥಗಳನ್ನು ಹೊಂದಲು ಅನುಕೂಲಕರವಾಗಿ ಸಂಪದ್ಭರಿತವಾಗಿದ್ದಿತು. ಶ್ರೀಮದ್ವಾಲ್ಮೀಕಿ ರಾಮಾಯಣದ ಅರಣ್ಯ ಕಾಂಡದಲ್ಲಿ ವಿಸ್ತಾರವಾಗಿ ಈ ಪುಣ್ಯಾರಣ್ಯಗಳ ವಿವರಣೆಯಿದೆ. ಪರಮಾತ್ಮನ ಅವತಾರವಾದ ಶ್ರೀ ರಾಮಚಂದ್ರ ಪ್ರಭುವು, ಈ ಪುಣ್ಯಾಶ್ರಮಗಳಲ್ಲಿ ತಪೋ ನಿರತರೂ, ಪರಮ ಜ್ಞಾನಿಗಳೂ ಆಗಿದ್ದ ಋಷಿಗಳನ್ನು ಧರ್ಮ ವಿರೋಧಿಗಳಾಗಿದ್ದ ಸುಬಾಹು, ಮಾರೀಚರೇ ಮುಂತಾದ ರಾಕ್ಷಸರ ಉಪಟಳಗಳಿಂದ ರಕ್ಷಿಸಿದನಲ್ಲದೇ, ಧರ್ಮ ಸಂಸ್ಥಾಪನೆ ಮಾಡಿದ ಪರಮಪವಿತ್ರ ಶ್ರೀರಾಮ ಚರಿತೆಯು ಇಂದಿಗೂ ಮನೆ ಮನೆಗಳಲ್ಲಿಯೂ ನಿತ್ಯವೂ ನಡೆಯುತ್ತಿರುವ ಪಠನೀಯ ಸ್ತೋತ್ರವಾಗಿದೆ. ರಾಜರೆಂದರೆ ಧರ್ಮ ರಕ್ಷಕರೆಂದೇ ಪರಿಗಣಿಸಲ್ಪಟ್ಟಿದ್ದ ಕಾಲವದಾಗಿದ್ದಿತು. ಈ ಪ್ರಭಾವದಿಂದಲೇ ಇಂದಿಗೂ ಸಹ ಪ್ರತಿಯೊಬ್ಬ ಭಾರತೀಯನೂ ತನ್ನ ಜೀವಮಾನದಲ್ಲಿ ಒಂದು ಸಾರಿಯಾದರೂ ಈ ಪುಣ್ಯಕ್ಷೇತ್ರ ಯಾತ್ರೆಯನ್ನು ಮಾಡುವ ಕ್ರಮವು ರೂಢಿಯಲ್ಲಿದೆ. ಇಂತಹ ಪುಣ್ಯಪ್ರದವಾದ ಹತ್ತು ಪುಣ್ಯಾರಣ್ಯಗಳ ಸೂಕ್ಷ್ಮ ಪರಿಚಯವು ಈ ರೀತಿ ಇದೆ.

shrinath.udupa@gmail.com

**1. ವಿಂಧ್ಯಾರಣ್ಯ :** ಭಾರತ ದೇಶದ ಮಧ್ಯಭಾಗದಲ್ಲಿ ಅಡ್ಡಲಾಗಿ ಹರಡಿಕೊಂಡಿರುವ ಪುರಾಣ ಪ್ರಸಿದ್ಧವಾದ ವಿಂಧ್ಯ ಪರ್ವತದ ಸುತ್ತಲಿನ ಸುಮಾರು 40,000 ಚ. ಮೈ. ವಿಸ್ತಾರ ಪ್ರದೇಶಗಳನ್ನೊಳಗೊಂಡಿರುವ ಈ ಭಾಗವು ವಿಂಧ್ಯಾರಣ್ಯವೆಂಬ ಹೆಸರಿನಿಂದ ಕರೆಯಲ್ಪಡುತ್ತಿದೆ. ಸಪ್ತ ಪವಿತ್ರ ಕುಲಾಚಲಗಳಲ್ಲಿ ಸೇರಿರುವ ಋಕ್ಷ ಮತ್ತು ಪಾರಿಯಾತ್ರ ಪರ್ವತಗಳೂ ಸಹ ಇದರಲ್ಲೇ ಸೇರಿವೆ. ಉತ್ತರ ಭಾರತದಲ್ಲಿ ಮಿರ್ಜಾಪುರ್ ಎಂಬ ಸ್ಥಳದಿಂದ ಸುಮಾರು 4ಮೈಲು ಹತ್ತಿರದಲ್ಲಿ ವಿಂಧ್ಯಾಚಲವೆಂಬ ರೈಲ್ವೇ ನಿಲ್ದಾಣವಿದೆ. ಈ ಸ್ಥಳದಲ್ಲೇ ವಿಂಧ್ಯವಾಸಿನೀ, ಕಾಳಿಕೋಹ ಮತ್ತು ಅಷ್ಟಭುಜಗಳೆಂಬ ಶಕ್ತಿ ಪೀಠಗಳಿವೆ. ಶ್ರೀಮದ್ದೇವೀ ಭಾಗವತದಲ್ಲಿ ಸ್ತುತಿಸಿರುವ ಮಹಾಕಾಳೀ, ಮಹಾಲಕ್ಷ್ಮೀ ಮತ್ತು ಮಹಾ ಸರಸ್ವತೀ ದೇವಿಯರು ನೆಲೆಸಿ, ಭಕ್ತಾದಿಗಳಿಂದ ಪೂಜೆಗೊಳ್ಳುತ್ತಿರುವ, ಅಷ್ಟಾದಶ ಶಕ್ತಿಪೀಠಗಳಲ್ಲಿ ಪ್ರಮುಖ ಶಕ್ತಿ ಕ್ಷೇತ್ರಗಳೆನಿಸಿವೆ. ಈ ಪುಣ್ಯಾರಣ್ಯದಲ್ಲಿಯೇ ತಪತಿ, ತಾಪೀ, ಪಯೋಷ್ಣೀ, ನಿರ್ವಿಂಧ್ಯಾ, ಕ್ಷಿಪ್ರಾ, ಋಷಭಾ, ವೇಣಾ, ವೈತರಣೀ, ವಿಶ್ವಮೂಲ, ಕುಮುದ್ವತೀ, ಕರತೋಯಾ, ಮಹಾಗೌರೀ, ದುರ್ಗಮಾ, ಶೀಲಾ ಮುಂತಾದ ಪವಿತ್ರ ನದಿಗಳು ಹರಿಯುತ್ತವೆ (ಮತ್ಸ್ಯ 114). ಅನೇಕ ಪುಣ್ಯ ನದಿಗಳಿಗೆ ಉಗಮ ಸ್ಥಾನವಾಗಿ ಪುಣ್ಯಕ್ಷೇತ್ರಗಳಿಂದ ಕೂಡಿರುವ ಈ ಪುಣ್ಯಾರಣ್ಯವನ್ನು ಇಲ್ಲಿ ಸ್ಮರಿಸಿದೆ.

**2. ದಂಡಕಾರಣ್ಯ :** ದಂಡಕನೆಂಬುವನು ಸೂರ್ಯವಂಶದ ಅರಸು. ಇಕ್ಷ್ವಾಕು ಮಹಾರಾಜನ ನೂರು ಮಂದಿ ಮಕ್ಕಳಲ್ಲಿ ಒಬ್ಬನಾದ ಈತನು ಮಹಾಮೂರ್ಖನಾಗಿದ್ದರಿಂದ ಇವನಿಗೆ ದಂಡಕನೆಂದು ಹೆಸರಿಟ್ಟಿದ್ದು; ಇವನ ಘೋರ ಕೃತ್ಯಗಳಿಗೆ ಬೇಸತ್ತು ವಿಂಧ್ಯ ಮತ್ತು ಶೈವಲವೆಂಬ ಪರ್ವತಗಳ ನಡುವೆ, ಒಂದು ರಾಜ್ಯವನ್ನು ಕಲ್ಪಿಸಿ ಈತನನ್ನು ಪ್ರತ್ಯೇಕವಾಗಿ ಈತನ ತಂದೆಯು ಇಟ್ಟಿದ್ದನು. ಈತನು ಅಲ್ಲಿಯೇ ಶುಕ್ರಾಚಾರ್ಯರಿಂದ ಅನುಗೃಹೀತನಾಗಿ, ಮಧುಮಂತವೆಂಬ ಹೆಸರಿನ ನಗರವನ್ನು ನಿರ್ಮಿಸಿ ಆಳುತ್ತಿದ್ದನು. ಒಮ್ಮೆ ಶುಕ್ರಾಚಾರ್ಯರು ಆಶ್ರಮದಲ್ಲಿಲ್ಲದ ಸಮಯವನ್ನು ಉಪಯೋಗಿಸಿಕೊಂಡು, ಅವರ ಹಿರಿಯ ಮಗಳಾದ ಅರಜೆ ಎಂಬವಳನ್ನು ಕೆಣಕಿ, ಏಳು ರಾತ್ರಿಗಳೊಳಗಾಗಿ ಪರಿವಾರ ಸಮೇತ ಸರ್ವನಾಶವಾಗಲೆಂದು ಆಚಾರ್ಯರಿಂದ ಶಾಪಗ್ರಸ್ತನಾದ. ಆಗ ಅವನ ನಗರವೆಲ್ಲವೂ ಭಸ್ಮವಾಗಿ, ಅಲ್ಲಿ ಗಿಡಮರಗಳು ಬೆಳೆದು ಅದು ಘೋರವಾದ ಅರಣ್ಯವಾಯಿತು. ಇದಕ್ಕೆ ಜನಸ್ಥಾನವೆಂದೂ, ದಂಡಕಾರಣ್ಯವೆಂದೂ ಹೆಸರಾಯಿತು. (ರಾಮಾಯಣ - ಉತ್ತರಕಾಂಡ 79-81) ಅಗ್ನಿಸ್ಪರ್ಶದಿಂದ ಪವಿತ್ರವಾಗಿ, ಮತ್ತೆ ವನಸ್ಪತಿಗಳಿಂದ ಸಮೃದ್ಧವಾದ ಈ ಅರಣ್ಯವು ಮಹಾಋಷಿಗಳಿಂದ ಆಕರ್ಷಿತವಾಗಿ ಪುಣ್ಯಾರಣ್ಯವೆನಿಸಿತು. ಶ್ರೀಮದ್ವಾಲ್ಮೀಕಿ ರಾಮಾಯಣದಲ್ಲಿ ಈ ಪವಿತ್ರ ಭೂಮಿಯ ವಿವರಣೆ ವಿಸ್ತಾರವಾಗಿ ಈ ರೀತಿ ವರ್ಣಿಲ್ಪಟ್ಟಿದೆ.

"ಶ್ರೀರಾಮಚಂದ್ರನು ವಿಶಾಲವಾದ ದಂಡಕಾರಣ್ಯವನ್ನು ಪ್ರವೇಶಿಸಿ, ಅಲ್ಲಿ ಅನೇಕ ತಪಸ್ವಿಗಳ ಆಶ್ರಮಗಳನ್ನು ಕಂಡನು. ಅಲ್ಲಲ್ಲಿ ಹರಡಿದ್ದ ದರ್ಭೆಗಳು, ನಾರು ಬಟ್ಟೆಗಳು ಗೋಚರಿಸುತ್ತಿದ್ದವು. ತಪೋಜನ್ಯವಾದ ತೇಜಸ್ಸಿನಿಂದ ಆಶ್ರಮ ಮಂಡಲವು



shrinath.udupa@gmail.com

ಸೂರ್ಯಮಂಡಲದಂತೆ ವಿರಾಜಿಸುತ್ತಿತ್ತು. ಅಲ್ಲಿ ಸಕಲ ಪ್ರಾಣಿಗಳೂ ನಿರ್ಭಯದಿಂದ ಸಂಚರಿಸುತ್ತಿದ್ದವು. ಆಶ್ರಮದ ಅಂಗಳವು ಅತ್ಯಂತ ಸ್ವಚ್ಛವಾಗಿತ್ತು. ಅಪ್ಸರೆಯರೂ ಸಹ ಅಲ್ಲಿಗೆ ಬಂದು ಭಕ್ತಿ, ಶ್ರದ್ಧೆ, ಗೌರವಗಳಿಂದ ವಿನೀತರಾಗುತ್ತಿದ್ದರು. ಆಶ್ರಮದಲ್ಲಿ ವಿಶಾಲವಾದ ಯಜ್ಞಶಾಲೆಗಳಿದ್ದು, ಅವು ಯಜ್ಞದ್ರವ್ಯಗಳಿಂದ ತುಂಬಿದ್ದವು. ಆಶ್ರಮದ ಸುತ್ತಲಿನ ಪ್ರದೇಶಗಳಲ್ಲೆಲ್ಲಾ ಬಿಲ್ವ, ಅಶ್ವತ್ಥಾದಿ ಪುಣ್ಯ ವೃಕ್ಷಗಳೂ ಸಿಹಿಯಾದ ಫಲಗಳಿಂದ ತುಂಬಿದ ಅನೇಕ ವೃಕ್ಷಗಳೂ ಇದ್ದು, ಅದು ಅತ್ಯಂತ ರಮಣೀಯ ಸ್ಥಳವಾಗಿದ್ದಿತು. ಬಲಿಹರಣ, ವೈಶ್ವದೇವಾದಿ ಹೋಮಗಳ ನಿತ್ಯಾಚರಣೆಯಿಂದ ಆ ಪುಣ್ಯಾಶ್ರಮಗಳು ಶೋಭಿಸುತ್ತಿದ್ದವು. ವೇದಘೋಷಗಳಿಂದ ಪ್ರತಿಧ್ವನಿಸುತ್ತಿದ್ದ, ಆ ಸ್ಥಳದಲ್ಲಿ ಆಶ್ರಮವಾಸಿಗಳು ನಾರು ಬಟ್ಟೆ, ಕೃಷ್ಣಾಜಿನಗಳನ್ನು ಧರಿಸಿದವರಾಗಿ, ವೃದ್ಧ ತಪಸ್ವಿಗಳು ಸೂರ್ಯನ ತೇಜಸ್ಸಿನಂತೆ ಜ್ವಲಿಸುತ್ತಿದ್ದರು. ಪುಣ್ಯಾತ್ಮರೂ, ಆಹಾರ ನಿಯಮವುಳ್ಳವರೂ, ಧರ್ಮಾಚರಣೆಯುಳ್ಳವರೂ, ಆದ ಮಹರ್ಷಿಗಳಿಂದ ಶೋಭಿತವಾಗಿ ಬ್ರಹ್ಮಲೋಕದಂತೆ ಅದು ಕಾಣುತ್ತಿದ್ದಿತು. ಶ್ರೀರಾಮಚಂದ್ರನು ಪತ್ನಿ ಮತ್ತು ಸಹೋದರ ಸಹಿತನಾಗಿ ವಿನಮ್ರ ಭಾವನೆಯಿಂದಲೂ, ಅತ್ಯಂತ ಭಕ್ತಿ ಶ್ರದ್ಧೆಗಳಿಂದಲೂ ಬಂದದ್ದನ್ನು ನೋಡಿ ದಿವ್ಯಜ್ಞಾನ ಸಂಪನ್ನರಾದ ಮಹರ್ಷಿಗಳು, ಪೂರ್ಣಚಂದ್ರನೇ ಮೂಡಿ ಬಂದನೋ, ಎಂಬಂತಿದ್ದ ಶ್ರೀರಾಮಚಂದ್ರನನ್ನು ಸ್ವಾಗತಿಸಿ ಆಶೀರ್ವದಿಸಿದರು."

ಆ ಪವಿತ್ರ ಮೂರ್ತಿಯು ತನ್ನ ಕರ್ತವ್ಯವನ್ನು ಅರಿತು, ಆ ಆಶ್ರಮವಾಸಿಗಳಿಗೆ ತೊಂದರೆ ಕೊಡುತ್ತಿದ್ದ ವಿರಾಧನೇ ಮುಂತಾದ ದುಷ್ಟರನ್ನು ಸಂಹರಿಸಿ, ಅವರ ಧರ್ಮಾಚರಣೆಗಳು ನಿರಾತಂಕವಾಗಿ ನಡೆಯುವಂತೆ ಮಾಡಿದನು. ಪವಿತ್ರವಾದ ಅಗಸ್ತ್ಯಾಶ್ರಮ, ಶರಭಂಗ ಮಹರ್ಷಿಗಳ ಆಶ್ರಮ, ಸುತೀಕ್ಷ್ಣ ಮುನಿಗಳ ಆಶ್ರಮ, ಪಂಚವಟೀ, ಶಿವಭಕ್ತೆ ಶಬರಿಯ ಆಶ್ರಮ, ಮುಂತಾದ ಅನೇಕ ಆಶ್ರಮಗಳನ್ನು ಶ್ರೀರಾಮಚಂದ್ರನು ಸಂದರ್ಶಿಸಿದನೆಂದು ಹೇಳಲ್ಪಟ್ಟಿದೆ. ಇಂದೂ ಸಹ ಇಲ್ಲಿರುವ ಪವಿತ್ರ ಕ್ಷೇತ್ರಗಳಿನ್ನು ಅನೇಕ ಯಾತ್ರಾರ್ಥಿಗಳು ಬರುತ್ತಾರೆ.

**3. ಚಂಪಕಾರಣ್ಯ :** ಉತ್ತರ ಭಾರತದ ಒಂದು ಪವಿತ್ರ ಸ್ಥಳ. ಕೌಶಿಕೀ ನದಿಯ ಬಳಿಯಿರುವ ಕುಶಿಕಾಶ್ರಮದಿಂದ ಮುಂದೆ ಹೋದರೆ ಚಂಪಕಾರಣ್ಯ ಕ್ಷೇತ್ರವಿರುವುದು. ಇಲ್ಲಿ ನಿಯತಾಹಾರನಾಗಿ, ಅನುಷ್ಠಾನ ಪರನಾಗಿ ಒಂದು ರಾತ್ರಿ ಕಳೆಯುವುದರಿಂದ ಅತ್ಯಂತ ಪುಣ್ಯ ಸಂಪಾದನೆಯಾಗುವುದೆಂದು ಹೇಳಲ್ಪಟ್ಟಿದೆ (ಮಹಾಭಾರತ- ವನ. 84). ದೇವ ನದಿಯೆನಿಸಿದ ಕೌಶಿಕ ನದೀ ತೀರದಲ್ಲಿಯೇ ವಿಶ್ವಾಮಿತ್ರ ಮಹರ್ಷಿಗಳು ತಪಸ್ಸನ್ನಾಚರಿಸುತ್ತಿದ್ದರು. ಕಶ್ಯಪ ವಂಶೀಯರಾದ ವಿಭಾಂಡಕ ಮುನಿ ಮತ್ತು ಅವರ ಪುತ್ರ ಋಷ್ಯಶೃಂಗರೂ ಸಹ ಇಲ್ಲಿಯೇ ತಪಸ್ಸನ್ನಾಚರಿಸುತ್ತಿದ್ದರು.

ಈಗಿನ ಬಿಹಾರ್ ರಾಜ್ಯದ ದರ್ಭಾಂಗ, ಚಂಪಾರಣ್ ಮತ್ತು ಮುಸಾಫಿರ್ ಜಿಲ್ಲೆಗಳು ಮಿಥಿಲಾ ನಗರಕ್ಕೆ ಸೇರಿತ್ತೆಂದೂ, ಚಂಪಕಾರಣ್ಯವು ಮಿಥಿಲಾ ನಗರಕ್ಕೆ ಪಕ್ಕದಲ್ಲಿದ್ದ

ಪ್ರದೇಶವೆಂದೂ, ಚಂಪಕಾರಣ್ಯದಿಂದ ಗಂಡಕೀ ನದೀ ತೀರದವರೆಗೂ ಇದ್ದ ಪ್ರದೇಶವು ಮಿಥಿಲಾ ನಗರವಾಗಿತ್ತೆಂದೂ ಪರಿಗಣಿಸಲಾಗಿದೆ(ಇಂಡಿಯನ್ ಗೆಜೆಟಿಯರ್)

**4.** ಶ್ವೇತಾರಣ್ಯ : ಕಾವೇರೀ ನದೀ ತೀರದಲ್ಲಿರುವ ಒಂದು ತಪೋವನ ಪ್ರದೇಶ. ಮಾರ್ಕಂಡೇಯನು ಇಲ್ಲಿಯೇ ತಪಸ್ಸು ಮಾಡಿ, ಶಿವನ ಕೃಪೆಯಿಂದ ಮೃತ್ಯುವನ್ನು ಜಯಿಸಿದನೆಂದು ಹೇಳಲ್ಪಟ್ಟಿದೆ. (ರಾಮಾಯಣ, ಅರಣ್ಯ)

**5.** ನೈಮಿಷಾರಣ್ಯ : ಗೋಮತಿ ನದೀ ತೀರದಲ್ಲಿರುವ ಒಂದು ಪವಿತ್ರತಮವಾದ ಪ್ರದೇಶ. ಹಿಂದೆ ಮಹರ್ಷಿಗಳು ತಮಗೆ ತಪೋಯೋಗ್ಯವಾದ ಸ್ಥಾನವು ಯಾವುದೆಂದು ಬ್ರಹ್ಮದೇವರನ್ನು ಪ್ರಾರ್ಥಿಸಿದಾಗ, ಅವನು ಒಂದು ಮನೋಮಯವಾದ ಚಕ್ರವನ್ನು ನಿರ್ಮಿಸಿ ಭೂಲೋಕದ ಕಡೆಗೆ ತಿರುಗಿಸಿ ಬಿಟ್ಟು, ಇದರ ಪಟ್ಟಿಯು ಎಲ್ಲಿ ಮುರಿದು ಬೀಳುವುದೋ, ಅದೇ ಶ್ರೇಷ್ಠವಾದ ಸ್ಥಳವೆಂದು ತಿಳಿಸಿದನು. ಋಷಿಗಳು ಆ ಚಕ್ರವನ್ನು ಹಿಂಬಾಲಿಸಿದಾಗ, ಆ ಚಕ್ರದ ಪಟ್ಟಿಯು ಮುರಿದು ಬಿದ್ದ ಸ್ಥಳವೇ ಪುಣ್ಯಕ್ಷೇತ್ರ ನೈಮಿಷಾರಣ್ಯವೆಂದು ಕರೆಯಲ್ಪಟ್ಟಿತು. ಹಿಂದೆ ಬ್ರಹ್ಮಾದಿ ದೇವತೆಗಳು ಇಲ್ಲಿ ಸತ್ರಯಾಗ ಮಾಡಿದ್ದಾಗ ತಪಸ್ಸೇ ಯಜಮಾನವಾಗಿದ್ದಿತು, ಭೂಮಾತೆಯೇ ಯಜಮಾನಿಯಾಗಿದ್ದಳು. ಬ್ರಹ್ಮದೇವರೇ ಬ್ರಹ್ಮಸ್ಥಾನವನ್ನಲಂಕರಿಸಿದ್ದರು, ಜ್ಞಾನಿಗಳೇ ಯಜ್ಞ ಸಾಮಗ್ರಿಗಳಾಗಿದ್ದರು. ಮಹಾ ತೇಜಸ್ವಿಯಾದ ಯಮದೇವರೇ, ಮಹಾತ್ಮರುಗಳಿಂದ ಕೂಡಿ ಈ ಸತ್ರಯಾಗ ಮಾಡಿದ್ದರೆಂದು ವರ್ಣಿಸಲ್ಪಟ್ಟಿದೆ. (ವಾಯು ಪು.1-2-6)

"ಇದಂ ತ್ರೈಲೋಕ್ಯವಿಖ್ಯಾತಂ ತೀರ್ಥಂ ನೈಮಿಷಮುತ್ತಮ್|| (ಕೂರ್ಮ 42-1-4) ವರಾಹಪುರಾಣದ ಪ್ರಕಾರ ಇಲ್ಲಿದ್ದ ರಾಕ್ಷಸರನ್ನು ನಿಮಿಷ ಮಾತ್ರದಲ್ಲಿ ಭಗವಂತನು ಸಂಹರಿಸಿದ್ದರಿಂದ ನೈಮಿಷಾರಣ್ಯವೆಂದು ಹೆಸರಾಯಿತು.

ಚಕ್ರದ ಪಟ್ಟಿಯು ಕಳಚಿಕೊಂಡು ಬಿದ್ದ ಸ್ಥಳವನ್ನು ಚಕ್ರತೀರ್ಥವೆಂದು ಕರೆಯುವರು. ಗೋಮತೀ ನದಿಯ ಎಡ ದಂಡೆಯ ಮೇಲಿರುವ ಈ ಸ್ಥಳವು ಭಾರತದೇಶದಲ್ಲಿನ 51 ಪಿತೃ ಸ್ಥಾನಗಳಲ್ಲಿ ಒಂದಾಗಿದೆ. ಈ ತೀರ್ಥದ ಬಳಿಯೇ ಮಹರ್ಷಿಗಳಿಗೆ ಸೂತ ಪುರಾಣಿಕರು 18 ಪುರಾಣಗಳನ್ನು ಶ್ರವಣ ಮಾಡಿಸಿದರು. ದ್ವಾಪರ ಯುಗದಲ್ಲಿ ಬಲರಾಮನು ತನ್ನ ತೀರ್ಥಯಾತ್ರೆಯನ್ನು ಮುಗಿಸಿ, ಈ ಸ್ಥಳಕ್ಕೆ ಬಂದು ಯಜ್ಞವೊಂದನ್ನು ಮಾಡಿದನು. ನೈಮಿಷಾರಣ್ಯದ ಪ್ರದಕ್ಷಿಣಾ ಮಾರ್ಗವು 168 ಮೈಲುಗಳಾಗುತ್ತವೆ. ವಾಯುಪುರಾಣದ ಉಲ್ಲೇಖದಂತೆ ಈಗಲೂ ಸಹ ಈ ಕ್ಷೇತ್ರದ ಯಾವುದೋ ಒಂದು ಗುಪ್ತ ಸ್ಥಳದಲ್ಲಿ ಋಷಿಗಳ ಸ್ವಾಧ್ಯಾಯ- ಅನುಷ್ಠಾನಗಳು ನಡೆಯುತ್ತಲೇ ಇವೆ.

ಉತ್ತರ ರೈಲ್ವೆ ಮಾರ್ಗದಲ್ಲಿರುವ 'ಬಾಲಾಮಲೂ' ಜಂಕ್ಷನ್‌ನಿಂದ 16 ಮೈಲು ದೂರದಲ್ಲಿ ನೈಮಿಷಾರಣ್ಯವೆಂಬ ನಿಲ್ದಾಣವಿದೆ. ಅಥವಾ ಅಯೋಧ್ಯೆ ಮತ್ತು ರೋಹಿಲ್



shrinath.udupa@gmail.com

ಖಂಡದ ರೈಲ್ವೆ ಮಾರ್ಗದಲ್ಲಿ 'ಸಾಂಡಿಲಾ' ಎಂಬ ನಿಲ್ದಾಣದಿಂದ 24 ಮೈಲು ದೂರದಲ್ಲಿ ಅಥವಾ ಸೀತಾಪುರದಿಂದ 20 ಮೈಲು ದೂರದಲ್ಲಿ ಈ ಸ್ಥಳವಿದ್ದು ಈ ಮಾರ್ಗದಿಂದಲೂ ತಲುಪಬಹುದು.

**ಈ ಪ್ರದೇಶದಲ್ಲಿನ ಮುಖ್ಯ ಪವಿತ್ರ ಸ್ಥಳಗಳು.**

1. ನೈಮಿಷಾರಣ್ಯ ನಿಲ್ದಾಣದಿಂದ ಎರಡು ಕಿ.ಮೀ. ದೂರದಲ್ಲಿರುವ ಚಕ್ರತೀರ್ಥ ಮತ್ತು ಅಲ್ಲಿನ 'ಭೂತನಾಥ ಮಹಾದೇವ' ದೇವಾಲಯ.
2. ನೈಮಿಷಾರಣ್ಯದ ಪ್ರದಕ್ಷಿಣೆಯು ಪ್ರತಿವರ್ಷವೂ ಫಾಲ್ಗುಣ ಅಮಾವಾಸ್ಯೆಯಂದು ಪ್ರಾರಂಭವಾಗಿ ಪೂರ್ಣಿಮೆಯಂದು ಪೂರ್ಣಗೊಳ್ಳುತ್ತದೆ. ಇಲ್ಲಿನ ಚಿಕ್ಕ ಪ್ರದಕ್ಷಿಣೆಯೆಂದರೆ 5 ಕಿ.ಮೀ. ದೂರ ಉಳ್ಳದ್ದು. ಈ ಪ್ರದಕ್ಷಿಣದಲ್ಲಿ ಬರುವ ಚಕ್ರತೀರ್ಥ, ಪಂಚ ಪ್ರಯಾಗ, ಅಕ್ಷಯವಟ, ಲಲಿತಾದೇವಿ ದೇವಾಲಯ, ಗೋವರ್ಧನ ಮಹಾದೇವ, ಕ್ಷೇಮಕಾಮಾದೇವಿ, ಜಾನಕೀಕುಂಡ, ಆಂಜನೇಯ ದೇವಾಲಯ, ಕಾಳೀ ಸರೋವರ, ಅನ್ನಪೂರ್ಣಾ ಮತ್ತು ವಿಶ್ವನಾಥ ದೇವಾಲಯ, ಧರ್ಮರಾಜ ದೇವಾಲಯ, ವ್ಯಾಸ ಶುಕ ದೇವಾಲಯ, ಬ್ರಹ್ಮಾವರ್ತ ನಿರ್ಜಲ ಸರೋವರ, ಗಂಗೋತ್ರಿ ನಿರ್ಜಲ ಸರೋವರ, ದಶಾಶ್ವಮೇಧ ದಿಣ್ಣೆ, ಪುಷ್ಕರ ಸರೋವರ, ಗೋಮತೀ ನದಿ, ಸೂತ ಮುನಿಗಳ ದೇವಾಲಯಗಳು ಮುಖ್ಯ ಸ್ಥಳಗಳಾಗಿವೆ.
3. ರುದ್ರಾವರ್ತವೆಂಬ ಪವಿತ್ರ ಬಾವಿ, ನೈಮಿಷಾರಣ್ಯ ನಿಲ್ದಾಣದಿಂದ 5 ಕಿ.ಮೀ. ದೂರದಲ್ಲಿದೆ.
4. ಮಿಥಿಲಾ ಎಂಬ ತೀರ್ಥವು ನಿಲ್ದಾಣದಿಂದ 4 ಕಿ.ಮೀ. ದೂರದಲ್ಲಿದ್ದು, ಇಲ್ಲಿ ದಧೀಚಿ ಮುನಿಗಳ ಆಶ್ರಮವಿತ್ತೆಂದು ಪ್ರಸಿದ್ಧವಾಗಿದೆ.
5. ನಿಲ್ದಾಣದಿಂದ 15 ಕಿ. ಮೀ. ದೂರದಲ್ಲಿರುವ 'ಧೌತಪಾಪಾ'ವೆಂಬ ತೀರ್ಥದಲ್ಲಿ ಸ್ನಾನ ವಿಶೇಷವು.
6. ಗೋಮತೀ ನದೀ ತೀರದಲ್ಲಿರುವ ಸೀತಾಕುಂಡವೆಂಬುದು, ಸೀತಾದೇವಿಯು ಸ್ನಾನ ಮಾಡಿದ್ದರಿಂದ ಪವಿತ್ರತೆಯನ್ನು ಹೊಂದಿರುವ ತೀರ್ಥವಾಗಿದೆ. ಕಾರ್ತಿಕ ಪೌರ್ಣಮಿಯು ಇಲ್ಲಿ ಬಹಳ ವಿಶೇಷವು. ಭಾರತದೇಶದಲ್ಲಿ ನೈಮಿಷಾರಣ್ಯವು ಅತ್ಯಂತ ಪವಿತ್ರವೆನಿಸಿರುವ ಪುಣ್ಯಾರಣ್ಯವಾಗಿದೆ.

**6. ದ್ವೈತಾರಣ್ಯ :** ಇದನ್ನು ದ್ವೈತವನವೆಂದೂ ಸಹ ಹೇಳುತ್ತಾರೆ. ಸರಸ್ವತೀ ನದೀ ತೀರದಲ್ಲಿರುವ ಪುಣ್ಯಾರಣ್ಯವೆಂದು ಹೇಳಲ್ಪಟ್ಟಿದೆ. ಅರ್ಜುನನ ಸಲಹೆಯಂತೆ ಪಾಂಡವರು ಇಲ್ಲಿ ಅರಣ್ಯವಾಸ ಮಾಡಲು ನಿರ್ಧರಿಸಿದರು. ಇಂದಿನ 'ಘಗ್ಗರ್' ಎಂಬ ಹೆಸರುಳ್ಳ ನದಿಯೇ ಸರಸ್ವತೀ ನದಿಯೆಂದು ಗುರುತಿಸಿದ್ದಾರೆ. ದ್ವೈತವೆಂಬ ಪುಣ್ಯ ಸರೋವರವೂ ಸಹ ಇಲ್ಲಿಯೇ ಇರುವುದು. ಪಾಂಡವರು ಇಲ್ಲಿ ವಾಸಿಸುತ್ತಿದ್ದಾಗ ಅನವರತವಾದ ವೇದಮಂತ್ರಗಳಿಂದ ಪ್ರತಿಧ್ವನಿಸುತ್ತಿದ್ದ ಈ ಅರಣ್ಯವು ಬ್ರಹ್ಮಲೋಕದ ಸ್ಮರಣೆಯನ್ನು ತರುವುದಾಗಿದ್ದಿತೆಂದು ಪ್ರಶಂಸಿಸಲ್ಪಟ್ಟಿದೆ. ನಾನಾ ಶಾಖೆಗಳ ಬ್ರಾಹ್ಮಣರು ಸುಸ್ವರದಿಂದ ಪಠನ ಮಾಡುತ್ತಿದ್ದ ಶಬ್ದ ತರಂಗಗಳ ಜೊತೆಗೆ, ಪಾಂಡವರ ಧನುಷ್ಟಂಕಾರಗಳೂ ಬೆರೆತು ಬ್ರಹ್ಮ-ಕ್ಷತ್ರ ತೇಜಸ್ಸಿನ ಸಮಾಗಮವಾದಂತಾಗಿ ಹೆಚ್ಚಿನ ಸಂತಸವನ್ನುಂಟುಮಾಡುತ್ತಿತ್ತೆಂದು ವರ್ಣಿಸಲ್ಪಟ್ಟಿದೆ. ಅನೇಕ ಮುನಿಗಳು ಈ ಸ್ಥಳಕ್ಕೆ ಬಂದು, ಆಶ್ರಯವನ್ನು ಹೊಂದಿ ನಿರ್ಭಯರಾಗಿ ಯಜ್ಞಯಾಗಗಳನ್ನು ಆಚರಿಸುತ್ತಿದ್ದರು (ಮಹಾಭಾರತ - ವನ)

**7. ಗುಹಾರಣ್ಯ :** ತುಂಗಭದ್ರಾ ನದೀ ತೀರದಲ್ಲಿರುವ, ಕರ್ನಾಟಕ ಪ್ರದೇಶದಲ್ಲಿನ ಹರಿಹರವೆಂಬ ಕ್ಷೇತ್ರವು. ವಾಣಿಜ್ಯ ಪ್ರಸಿದ್ಧವಾದ ದಾವಣಗೆರೆ ಎಂಬ ಸ್ಥಳಕ್ಕೆ ಬಹಳ ಹತ್ತಿರದಲ್ಲಿರುವ ಸ್ಥಳವು. ಗುಹನೆಂಬ ರಾಕ್ಷಸನು ಬ್ರಹ್ಮದೇವರನ್ನು ತಪಸ್ಸಿನಿಂದ ಮೆಚ್ಚಿಸಿ ಹರಿಯಿಂದಾಗಲಿ ಅಥವಾ ಹರನಿಂದಾಗಲಿ ತನಗೆ ಮರಣ ಬರದಂತೆ ವರ ಪಡೆದನು. ಈತನು ವರಗರ್ವಿತವಾಗಿ ಪ್ರಜೆಗಳನ್ನು ಬಹಳವಾಗಿ ಹಿಂಸಿಸುತ್ತಿರಲು, ಶಿವ ಮತ್ತು ವಿಷ್ಣು ಶಕ್ತಿಗಳಿಂದೊಡಗೂಡಿದ ಒಂದು ದಿವ್ಯ ಶಕ್ತಿಯು ಅವಿರ್ಭವಿಸಿ, ಈ ರಾಕ್ಷಸನ ಸಂಹಾರವಾಯಿತು. ಅಂದಿನಿಂದ ಈ ಸ್ಥಳಕ್ಕೆ ಗುಹಾರಣ್ಯ ಕ್ಷೇತ್ರವೆಂದು ಹೆಸರಾಯಿತು. ಇದರ ಬಳಿ ಕ್ರಿ. ಶ. 1223ರಲ್ಲಿ ಹೊಯ್ಸಳ ರಾಜನಾದ ಎರಡನೇ ನರಸಿಂಹನೆಂಬ ರಾಜನಿಂದ ಹರಿಹರೇಶ್ವರ ದೇವಾಲಯವು ಸ್ಥಾಪಿತವಾಯಿತು. ಇದು ಕರ್ನಾಟಕದಲ್ಲಿ ಬಹು ಪ್ರಸಿದ್ಧ ದೇವಾಲಯವಾಗಿದೆ.

**8. ದೇವದಾರುವನ :** ಹಿಮವತ್ ಪರ್ವತದ ತಪ್ಪಲಿನಲ್ಲಿರುವ ಒಂದು ವನ. ಎಲ್ಲಾ ಬಗೆಯ ವೃಕ್ಷಗಳಿಂದಲೂ, ಹೂಬಳ್ಳಿಗಳಿಂದಲೂ ತುಂಬಿದ್ದ ಈ ಸ್ಥಳದಲ್ಲಿ ಅತ್ರಿ ಮಹರ್ಷಿಗಳ ತಪೋವನವಿದ್ದಿತು. ಇವರ ತೇಜಸ್ಸಿನಿಂದ ಆವೃತವಾಗಿದ್ದ ಈ ಸ್ಥಳದಲ್ಲಿ ನಾನಾ ಜಾತಿಯ ಪಶು, ಮೃಗಪಕ್ಷಿಗಳು ಪರಸ್ಪರ ವೈರವಿಲ್ಲದೇ ಆನಂದದಿಂದ ವಾಸಿಸುತ್ತಿದ್ದವು. ಪುರೂರವ ಭೂಪಾಲನು ಒಮ್ಮೆ ತಾನು ಅತ್ಯಂತ ತೇಜಸ್ವಿಯಾಗಬೇಕೆಂದು ಬಯಸಿ, ಭಗವನ್ ವಿಷ್ಣುವನ್ನು



shrinath.udupa@gmail.com

ಕುರಿತು ತಪಸ್ಸು ಮಾಡಲು, ಈ ಸ್ಥಳವನ್ನು ಆರಿಸಿಕೊಂಡನು. ಈ ಸ್ಥಳದಲ್ಲಿ ಹರಿಯುತ್ತಿದ್ದ ಪವಿತ್ರವಾದ ಐರಾವತಿಯೆಂಬ ನದಿಯಲ್ಲಿ ಸ್ನಾನಮಾಡಿ, ದಿವ್ಯ ತೇಜಸ್ಸಿನಿಂದೊಡಗೂಡಿ ಈ ಸ್ಥಳದಲ್ಲಿ ತಪಸ್ಸನ್ನಾಚರಿಸಿ ಅನುಗೃಹೀತನಾದನು. ಈ ಸ್ಥಳವು ದೇವದಾರುವನವೆಂಬ ಹೆಸರಿನಿಂದ ಪ್ರಸಿದ್ಧಿ ಹೊಂದಿತು. (ಮತ್ಸ್ಯ 120)

**9. ಕದಳಿಕಾವನ :** ಬಾಳೆಯ ಗಿಡಗಳಿಂದ ತುಂಬಿದ್ದ ಮನೋಹರವಾದ ಒಂದು ವನ. ಇದು ಹಿಮವತ್ಪರ್ವತದ ತಪ್ಪಲಿನಲ್ಲಿರುವ ನರ ನಾರಾಯಣ ಕ್ಷೇತ್ರವಾದ ಬದರಿಕಾಶ್ರಮದ ಬಳಿ ಇದೆ. (ಮಹಾಭಾರತ. ವನ 146) ಆಂಜನೇಯ ಸ್ವಾಮಿಯು ಭೀಮಸೇನನಿಗೆ ಶ್ರೀರಾಮಚರಿತ್ರೆಯನ್ನು ಸಂಕ್ಷಿಪ್ತವಾಗಿ ಹೇಳಿದ ಸ್ಥಳ. ಈ ಚರಿತ್ರೆಯು ಇಂದಿಗೂ 'ಹನುಮದ್ರಾಮಾಯಣ'ವೆಂದು ಪ್ರಸಿದ್ಧಿಯಾಗಿದೆ. ಈ ಸ್ಥಳದಲ್ಲಿ ಆಂಜನೇಯ ಸ್ವಾಮಿಯು ತನ್ನ ಮಹಾರೂಪವನ್ನು ಭೀಮಸೇನನಿಗೆ ಪ್ರದರ್ಶಿಸಿ, ಯುಗಗಳ ನಿರೂಪಣೆ, ಚಾತುರ್ವರ್ಣ್ಯಗಳ ಮಹಿಮೆ, ಧರ್ಮ ಪ್ರತಿಪಾದನೆ ಮುಂತಾದ ಅನೇಕ ವಿಚಾರಗಳನ್ನು ತಿಳಿಸಿದನು. ಇದೇ ಕಾರಣಗಳಿಂದ ಈ ಸ್ಥಳ ಅತ್ಯಂತ ಪವಿತ್ರ ಸ್ಥಳವಾಯಿತು. ನರನಾರಾಯಣರ ತಪಸ್ಸಿನಿಂದ ಪವಿತ್ರವಾಗಿರುವ ಈ ದಿವ್ಯಭೂಮಿಯಾದ ಬದರಿಕಾಶ್ರಮಕ್ಕೆ ಪಾಂಡವರು ತಮ್ಮ ಅರಣ್ಯವಾಸದ ಸಂದರ್ಭದಲ್ಲಿ ಬಂದು ವಾಸಿಸಿದ್ದರು. ಅರ್ಜುನನು ದಿವ್ಯಾಸ್ತ್ರಗಳನ್ನು ಸಂಪಾದಿಸಲು ಸ್ವರ್ಗಕ್ಕೆ ಹೋಗಿದ್ದಾಗ, ಅವನ ಪುನರಾಗಮನವನ್ನು ವೀಕ್ಷಿಸುತ್ತಾ ಈ ಸ್ಥಳದಲ್ಲಿ ಆರು ರಾತ್ರಿಗಳನ್ನು ಕಳೆದರು. ಆ ಸಂದರ್ಭದಲ್ಲಿ ಒಮ್ಮೆ ಈಶಾನ್ಯ ದಿಕ್ಕಿನಿಂದ ಬೀಸುತ್ತಿದ್ದ ಗಾಳಿಯ ರಭಸಕ್ಕೆ ಸಿಕ್ಕಿದ್ದ ಸೌಗಂಧಿಕವೆಂಬ ಒಂದು ಪುಷ್ಪವು ದ್ರೌಪದಿಯು ಕುಳಿತಿದ್ದೆಡೆಗೆ ಬಂದು ಬಿದ್ದಿತು. ಆಕರ್ಷಿತಳಾದ ದ್ರೌಪದಿಯು, ಆ ಮನೋಹರವಾದ, ಪುಷ್ಪಗಳ ಮೇಲಿನ ತನ್ನ ಆಸೆಯನ್ನು ಭೀಮಸೇನನ ಬಳಿಯಲ್ಲಿ ವ್ಯಕ್ತ ಪಡಿಸಿದಳು. ಭೀಮಸೇನನು ತನ್ನ ಪತ್ನಿಯ ಮನಸ್ಸಂತೋಷಪಡಿಸಲು, ಈಶಾನ್ಯ ದಿಕ್ಕಿನ ಕಡೆ, ಆ ಪುಷ್ಪವೃಕ್ಷವನ್ನು ಹುಡುಕಿಕೊಂಡು ಹೊರಟನು. ದಾರಿಯಲ್ಲಿ ಎದುರಿಗೆ ಬಂದ ಕ್ರೂರ ಮೃಗಗಳನ್ನು ಲಕ್ಷಿಸದೆ, ಅತ್ಯಂತ ಉತ್ಸಾಹದಿಂದ, ಅಡ್ಡ ಬಂದ ಗಿಡ ಮರಗಳನ್ನು ಸಹ ಕಿತ್ತುಹಾಕುತ್ತಾ ಮುಂದೆ ಹೋಗುತ್ತಿದ್ದ ಭೀಮಸೇನನನ್ನು, ಅದೇ ಸ್ಥಳದಲ್ಲಿ ಬಾಳೆಯ ಗಿಡಗಳಿಂದ ತುಂಬಿದ್ದ ಕದಳಿಕಾವನದಲ್ಲಿದ್ದ ಆಂಜನೇಯ ಸ್ವಾಮಿಯು ನೋಡಿ, ಅವನಿಂದ ಈ ವನವು ಧ್ವಂಸವಾಗಿ ಹಾಳಾಗುವುದನ್ನು ಮತ್ತು ಭೀಮಸೇನನು ಪಾಪಗ್ರಸ್ತನಾಗುವುದನ್ನು ತಪ್ಪಿಸುವ ಸಲುವಾಗಿ, ಅವನನ್ನು ತಡೆದು ವಿವೇಕವನ್ನು ಹೇಳಿ, ಸರಿಯಾದ ಮಾರ್ಗವನ್ನು ತೋರಿಸಿದನು. ಅತ್ಯಂತ ಪವಿತ್ರ ಸ್ಥಳವಾದ

ಈ ಕ್ಷೇತ್ರವನ್ನು ಮಹಾಭಾರತದ ವನಪರ್ವದಲ್ಲಿನ 146ನೇ ಅಧ್ಯಾಯದಲ್ಲಿ ರಮಣೀಯವಾಗಿ ವರ್ಣಿಸಿದೆ. ಆಂಧ್ರ ಪ್ರದೇಶ ರಾಜ್ಯದಲ್ಲಿ ಶ್ರೀಶೈಲ ಕ್ಷೇತ್ರದ ಬಳಿಯೂ ಕದಳೀವನವೆಂಬ ಪವಿತ್ರ ಪ್ರದೇಶವಿದೆ. ಇಲ್ಲಿ ಶಿವಶರಣೆ ಅಕ್ಕಮಹಾದೇವಿಯವರು ತಪಸ್ಸನ್ನು ಮಾಡಿದ್ದರು.

**10. ಇಕ್ಷುವನ -** ಪ್ಲಕ್ಷ ದ್ವೀಪಕ್ಕೆ ಸೇರಿದುದೆಂದು ಹೇಳಲ್ಪಟ್ಟಿದೆ (ವಾಯು 49)

## ೧೧. ಏಕಾದಶರುದ್ರ ವಿದ್ಯೋತಿತೇ

ಈ ಹನ್ನೊಂದು ರುದ್ರರ ಹೆಸರುಗಳು ಕಲ್ಪಭೇದದಿಂದ ಪುರಾಣಗಳಲ್ಲಿ ಭಿನ್ನ ಭಿನ್ನವಾಗಿ ಕರೆಯಲ್ಪಟ್ಟಿವೆ. ಇಲ್ಲಿ ಕೊಟ್ಟಿರುವ ಹೆಸರುಗಳು ಆಗಮಶಾಸ್ತ್ರದ ಪ್ರಕಾರವಿದೆ. ಇವರುಗಳ ಉತ್ಪತ್ತಿಯನ್ನು ವಿಧವಿಧವಾಗಿ ಹೇಳಲಾಗಿದೆ.

ದಕ್ಷ ಪ್ರಜಾಪತಿಯ 60 ಜನ ಪುತ್ರಿಯರಲ್ಲಿ ಒಬ್ಬಳಾದ ಸರೂಪ ಎಂಬವಳಿಂದ ಭೂತನೆಂಬ ಋಷಿಗೆ ಏಕಾದಶ ರುದ್ರರು ಉತ್ಪತ್ತಿಯಾದರು. (ಶ್ರೀಮದ್ಭಾಗವತ 6-6)

ಬ್ರಹ್ಮನು ಸನಕಾದಿಗಳಿಗೆ ಪ್ರಜಾ ಸೃಷ್ಟಿಯಲ್ಲಿ ನಿರತರಾಗಬೇಕೆಂದು ಹೇಳಿದಾಗ, ಅವರು ಸ್ವಭಾವತಃ ವೈರಾಗ್ಯಶೀಲರಾಗಿದ್ದರಿಂದ ನಿರಾಕರಿಸಿದರು. ಇದರಿಂದ ಬ್ರಹ್ಮನು ಕ್ರೋಧವಶನಾದಾಗ ರುದ್ರದೇವನ ಆವಿರ್ಭಾವವಾಯಿತು. ಅವನಿಗೆ ಬ್ರಹ್ಮನು ಹನ್ನೊಂದು ಸ್ಥಾನಗಳನ್ನು ಕಲ್ಪಿಸಿದಾಗ ಏಕಾದಶ ರುದ್ರರ ಆವಿರ್ಭಾವವಾಯಿತು. ಈ ಸ್ಥಾನಗಳು ಕ್ರಮವಾಗಿ ಹೃದಯ, ಇಂದ್ರಿಯ, ಪ್ರಾಣ, ಆಕಾಶ, ವಾಯು, ಅಗ್ನಿ, ಜಲ, ಪೃಥ್ವಿ, ಸೂರ್ಯ, ಚಂದ್ರ ಮತ್ತು ತೇಜಸ್ಸು ಎಂಬುದಾಗಿ ನಿರೂಪಿತವಾಗಿದೆ. (ಶ್ರೀಮದ್ಭಾಗವತ 3-12)

ತೈತ್ತಿರೀಯ ಕೃಷ್ಣ ಯಜುರ್ವೇದದ ಅರುಣ ಪ್ರಶ್ನೆಯಲ್ಲಿ ಇವರುಗಳನ್ನು **"ಅಸಂಖ್ಯಾತಾಃ ಸಹಸ್ರಾಣಿ | ಸ್ಮರ್ಯತೇ ನ ಚ ದೃಶ್ಯತೇ"|** ಎಂಬುದಾಗಿ ಹೇಳಿದೆ.

ದೇವತೆಗಳನ್ನು ರಾಕ್ಷಸ ಬಾಧೆಯಿಂದ ರಕ್ಷಿಸುವ ಸಲುವಾಗಿ ಕಶ್ಯಪ ಮಹರ್ಷಿಗಳು ಶಿವನನ್ನು ಕುರಿತು ತಪಸನ್ನಾಚರಿಸಿದಾಗ, ಲೋಕ ಕಲ್ಯಾಣಕ್ಕಾಗಿ ಶಿವನು ಅವರ ಪತ್ನಿಯಾದ ಸುರಭಿದೇವಿಯಲ್ಲಿ ಹನ್ನೊಂದು ರೂಪದಿಂದ ಅವತರಿಸಿದನು. ಇವರೇ ಏಕಾದಶ ರುದ್ರರೆಂದು ಪ್ರಖ್ಯಾತರಾದರು. ಇವರೆಲ್ಲರೂ ಸಾಕ್ಷಾತ್ ಶಿವ ಸ್ವರೂಪರೇ. ದೇವತೆಗಳ ಸಂರಕ್ಷಣೆಗಾಗಿ ಸ್ವರ್ಗಲೋಕದಲ್ಲಿ ವಿರಾಜಿಸುತ್ತಿರುವರು. ಈ ಏಕಾದಶ ರುದ್ರರಿಗೆ ಅನುಚರರಾಗಿ ಕೋಟಿಗಟ್ಟಲೆ ರುದ್ರರಿರುವರು. ಇವರು ತ್ರಿಲೋಕದಲ್ಲೂ ಸರ್ವವ್ಯಾಪಿಯಾಗಿ ಎಲ್ಲ ಕಡೆಯೂ ಸ್ಥಿತರಾಗಿರುವರು. (ಶಿವ ಪುರಾಣ - ಶತರುದ್ರ ಸಂಹಿತೆ)



shrinath.udupa@gmail.com

## ೧೨. ದ್ವಾದಶಾದಿತ್ಯ ಪ್ರಕಾಶಿತೇ

ಈ ಹನ್ನೆರಡು ಜನ ಆದಿತ್ಯರ ಹೆಸರುಗಳು ಕಲ್ಪಭೇದದಿಂದ ಅನೇಕ ಪುರಾಣ ಮತ್ತು ಇತರೆ ಗ್ರಂಥಗಳಲ್ಲಿ ಸ್ವಲ್ಪ ವ್ಯತ್ಯಾಸದಿಂದ ಉಕ್ತವಾಗಿವೆ. ಮಹಾಸಂಕಲ್ಪದಲ್ಲಿ ಇವರುಗಳನ್ನು "ಮಿತ್ರ, ಅರ್ಯಮಾ, ತ್ವಷ್ಟ್ರ, ಧಾತೃ, ವಿವಸ್ವಂತ, ವರುಣ, ಭಗ, ಅಂಶುಮತ್, ಇಂದ್ರ, ಪರ್ಜನ್ಯ, ವಿಷ್ಣು ಮತ್ತು ಪೂಷಾ ಎಂಬ ಹೆಸರುಗಳಿಂದ ಸ್ತುತಿಸಿದೆ.

ವಿಷ್ಣು ಪುರಾಣದಲ್ಲಿ ಈ ದೇವತೆಗಳನ್ನು ಸಂವತ್ಸರದ ಹನ್ನೆರಡು ಮಾಸಗಳ ಅಧಿಪತಿಗಳೆಂದು ಹೇಳಿದೆ. (ಸೂರ್ಯನನ್ನು ಬೇರೆ ಬೇರೆ ಮಾಸಗಳಲ್ಲಿ ಬೇರೆ ಬೇರೆ ಹೆಸರಿನಿಂದ ಗುರುತಿಸಲಾಗಿದೆ)

ಸೂರ್ಯನ ರಥವು ದೇವತೆಗಳಾದ ಆದಿತ್ಯರಿಂದಲೂ, ಋಷಿಗಳಿಂದಲೂ, ಗಂಧರ್ವರಿಂದಲೂ, ಅಪ್ಸರೆಯರಿಂದಲೂ, ಯಕ್ಷ ಸರ್ಪ ರಾಕ್ಷಸರಿಂದಲೂ ಅಧಿಷ್ಠಿತವಾಗಿರುತ್ತದೆ. ಪ್ರತಿ ಮಾಸದಲ್ಲೂ ಈ ಏಳು ಗುಂಪಿನಿಂದಲೂ ಒಬ್ಬೊಬ್ಬರು ಅಧಿಷ್ಠಿತರಾಗುತ್ತಾರೆ. ಇವರುಗಳೆಲ್ಲಾ ವಿಷ್ಣುಶಕ್ತಿಯಿಂದ ಸಂದೀಪ್ತರಾಗಿ ಸೂರ್ಯ ಮಂಡಲದಲ್ಲಿ ನೆಲೆಸಿರುತ್ತಾರೆ. ಋಷಿಗಳು ಸೂರ್ಯದೇವನನ್ನು ಸ್ತುತಿಸುತ್ತಿರುತ್ತಾರೆ. ಗಂಧರ್ವರು ಎದುರಿಗೆ ಸಂಗೀತವನ್ನು ಹಾಡುತ್ತಿರುತ್ತಾರೆ. ಅಪ್ಸರೆಯರು ನರ್ತಿಸುತ್ತಿರುತ್ತಾರೆ. ರಾಕ್ಷಸರು ರಥದ ಹಿಂಭಾಗದಲ್ಲಿ ಹಿಮ್ಮೇಳವಾಗಿ ಬರುತ್ತಿರುತ್ತಾರೆ. ಸರ್ಪಗಳು ರಥದ ಸಾಗಾಣಿಕೆಗೆ ಅಣಿಮಾಡಿಕೊಡುತ್ತವೆ. ಯಕ್ಷರು ಲಗಾಮುಗಳನ್ನು ಹಿಡಿಯುತ್ತಾರೆ.

ಇವರೆಲ್ಲರ ಜೊತೆಗೆ ವಾಲಖಿಲ್ಯರೆಂಬ ಪರಮತೇಜಸ್ವಿಗಳಾದ ಋಷಿಗಳು ರಥದ ಸುತ್ತಲೂ ನೆರೆದಿದ್ದು ಸಂಧಿ ಕಾಲಗಳಲ್ಲಿ ಸೂರ್ಯದೇವನಿಗೆ ಅರ್ಘ್ಯ ಕೊಟ್ಟು ತೇಜಸ್ಸನ್ನು ಹೆಚ್ಚಿಸುತ್ತಿರುತ್ತಾರೆ. ಈ ರೀತಿ ಸೂರ್ಯದೇವನು ಹನ್ನೆರಡು ಮಾಸಗಳಲ್ಲಿ ಪವಿತ್ರವಾದ ಹನ್ನೆರಡು ಹೆಸರುಗಳಿಂದ ವಿಖ್ಯಾತನಾಗಿ ತನ್ನ ರಥದಲ್ಲಿ ಇವರೆಲ್ಲರಿಂದೊಡಗೂಡಿ ಸಂಚರಿಸುತ್ತಾ ಲೋಕಗಳನ್ನು ಸಂರಕ್ಷಿಸುತ್ತಾನೆ. (ನೋಡಿ - ಉದಕ ಶಾಂತಿ ಮಂತ್ರಗಳು)

ಸೂರ್ಯದೇವರ ರಥದಲ್ಲಿ ಪ್ರತಿ ಮಾಸದಲ್ಲಿಯೂ ಪ್ರತಿಷ್ಠಿತರಾಗಿ ಸಂಚರಿಸುತ್ತಿರುವ ಈ ಸಪ್ತ ವರ್ಗಗಳನ್ನು ಕೆಳಗೆ ತೋರಿಸಿರುವ ಪದಕದಲ್ಲಿ ಕೊಡಲಾಗಿದೆ. ಇವರುಗಳು ತಮ್ಮ ತಮ್ಮ ಸಮಯದಲ್ಲಿ ಚಳಿ, ಉಷ್ಣತೆ, ಜಲವೃಷ್ಟಿ- ಇವುಗಳಿಗೆ ಕಾರಣಗಳಾಗುತ್ತಾರೆ.

| ಮಾಸಗಳು | ಆದಿತ್ಯರು | ಋಷಿಗಳು | ಗಂಧರ್ವರು | ಅಪ್ಸರೆಯರು | ಯಕ್ಷರು | ಸರ್ಪಗಳು | ರಾಕ್ಷಸರು |
|---|---|---|---|---|---|---|---|
| ಚೈತ್ರ | ಧಾತಾ | ಪುಲಸ್ತ್ಯ | ತುಂಬುರ | ಕ್ರತುಸ್ಥಲಾ | ರಥಭೃತ್ | ವಾಸುಕಿ | ಹೇತಿ |
| ವೈಶಾಖ | ಅರ್ಯಮಾ | ಪುಲಹ | ನಾರದ | ಪುಂಜಿಕಸ್ಥಲಾ | ರಥೌಜಾ | ಕಚ್ಛವೀರ | ಪ್ರಹೇತಿ |
| ಜ್ಯೇಷ್ಠ | ಮಿತ್ರ | ಅತ್ರಿ | ಹಾಹಾ | ಮೇನಕಾ | ರಥಸ್ವನಾ | ತಕ್ಷಕ | ಪೌರುಷೇಯ |
| ಆಷಾಢ | ವರುಣ | ವಸಿಷ್ಠ | ಹೂಹೂ | ಸಹಜನ್ಯಾ | ರಥಚಿತ್ರಾ | ನಾಗ | ರಥ |
| ಶ್ರಾವಣ | ಇಂದ್ರ | ಅಂಗೀರಸ | ವಿಶ್ವಾವಸು | ಪ್ರಮ್ಲೋಚ | ಸ್ರೋತ | ಏಲಾಪುತ್ರ | ಸರ್ಪ |
| ಭಾದ್ರಪದ | ವಿವಸ್ವಾನ್ | ಭೃಗು | ಉಗ್ರಸೇನ | ಅನುಮ್ಲೋಚ | ಆಪೂರಣ | ಶಂಖಪಾಲ | ವ್ಯಾಘ್ರ |
| ಆಶ್ವಯುಜ | ಪೂಷಾ | ಗೌತಮ | ವಸುರುಚಿ | ಘೃತಾಚೀ | ಸುಷೇಣ | ಧನಂಜಯ | ವಾತ |
| ಕಾರ್ತಿಕ | ಪರ್ಜನ್ಯ | ಭಾರದ್ವಾಜ | ವಿಶ್ವಾವಸು-2 | ವಿಶ್ವಾಚೀ | ಸೇನಜಿತ್ | ಐರಾವತ | ಆಪ |
| ಮಾರ್ಗಶಿರ | ಅಂಶ | ಕಾಶ್ಯಪ | ಚಿತ್ರಸೇನ | ಊರ್ವಶೀ | ತಾರ್ಕ್ಷ್ಯ | ಮಹಾಪದ್ಮ | ವಿದ್ಯುತ್ |
| ಪುಷ್ಯ | ಭಗ | ಕ್ರತು | ಊರ್ಣಾಯು | ಪೂರ್ವಚಿತ್ತಿ | ಅರಿಷ್ಟನೇಮಿ | ಕಾರ್ಕೋಟಕ | ಸ್ಫೂರ್ಜ |
| ಮಾಘ | ತ್ವಷ್ಟಾ | ಜಮದಗ್ನಿ | ಧೃತರಾಷ್ಟ್ರ | ತಿಲೋತ್ತಮಾ | ಋತಜಿತ್ | ಕಂಬಲ | ಬ್ರಹ್ಮೋಪೇತ |
| ಫಾಲ್ಗುಣ | ವಿಷ್ಣು | ವಿಶ್ವಾಮಿತ್ರ | ಸೂರ್ಯವರ್ಚ (ಸುವರ್ಚನ) | ರಂಭಾ | ಸತ್ಯಜಿತ್ | ಅಶ್ವತರ | ಯಜ್ಞೋಪೇತ |



ಶ್ರೀಮದ್ಭಾಗವತದ ಷಷ್ಠ್ಮಸ್ಕಂಧ ಷಷ್ಠಾಧ್ಯಾಯದಲ್ಲಿ ನಿರೂಪಿಸಿರುವಂತೆ ಕಶ್ಯಪ ಮಹರ್ಷಿಗಳಿಗೆ ಅದಿತಿ ದೇವಿಯಿಂದ ದ್ವಾದಶಾದಿತ್ಯರು ಜನಿಸಿದರು. ಇವರುಗಳು ವಿವಸ್ವಂತ, ಅರ್ಯಮಾ, ಪೂಷಾ, ತ್ವಷ್ಟಾ, ಸವಿತ, ಭಗ, ಧಾತಾ, ವಿಧಾತಾ, ವರುಣ, ಮಿತ್ರ, ಶಕ್ರ ಮತ್ತು ಉರುಕ್ರಮ ಎಂಬ ಹೆಸರಿನಿಂದ ಪ್ರಖ್ಯಾತರಾಗಿರುತ್ತಾರೆ. ಇವರುಗಳ ಸಂತಾನವು ಈ ರೀತಿ ಉಕ್ತವಾಗಿದೆ. ಇವು ಸೃಷ್ಟಿಯನ್ನು ನಿಯಂತ್ರಿಸಿ, ಮುಂದುವರೆಸಲು ಜನಿಸಿದ ಪರಮಾತ್ಮನ ಅನಂತ ಶಕ್ತಿಯಿಂದ ಕೂಡಿದ ರೂಪಗಳು.

1. ವಿವಸ್ವಂತ - ಸಂಜ್ಞಾದೇವಿಯಿಂದ ವೈವಸ್ವತ ಮನು ಮತ್ತು ಯಮ, ಯಮಿಯರೆಂಬ ಅವಳಿ ಮಕ್ಕಳು.

   ಸಂಜ್ಞಾದೇವಿಯು ಹೆಣ್ಣು ಕುದುರೆ ರೂಪ ತಾಳಿ ಅಶ್ವಿನಿದೇವತೆಗಳಿಗೆ ಜನ್ಮವಿತ್ತಳು.

   ಛಾಯಾದೇವಿಯಿಂದ ಶನೈಶ್ಚರ ಮತ್ತು ಸಾವರ್ಣಿ ಮನುವೆಂಬ ಇಬ್ಬರು ಪುತ್ರರು, ತಪತಿಯೆಂಬ ಕನ್ಯೆ.

2. ಅರ್ಯಮಾ - ಮಾತೃಕೆ ಎಂಬವಳಿಂದ ಚರ್ಷಣಿಗಳೆಂಬ ಪುತ್ರರು ಜನಿಸಿದರು. ಇವರುಗಳು ಕರ್ತವ್ಯ ಮತ್ತು ಅಕರ್ತವ್ಯ ಜ್ಞಾನಗಳಿಂದ ಕೂಡಿದವರಾಗಿದ್ದರು. ಆದುದರಿಂದ ಇವರುಗಳನ್ನು ಆಧರಿಸಿಯೇ ಬ್ರಹ್ಮದೇವರು ಮನುಷ್ಯಜಾತಿಯನ್ನು ಕಲ್ಪಿಸಿದರು.

3. ಪೂಷಾ - ಯಾವುದೇ ಸಂತಾನವಾಗಲಿಲ್ಲ. ದಕ್ಷಯಾಗದಲ್ಲಿ ಶಿವನನ್ನು ನೋಡಿ ನಗಲು, ವೀರಭದ್ರನು ಪೂಷನ ಹಲ್ಲುಗಳನ್ನು ಉದರಿಸಿದ್ದರಿಂದ, ಈ ದೇವತೆಯು ಹಿಟ್ಟಿನ ರೂಪದಲ್ಲೇ ಅನ್ನವನ್ನು ಸೇವಿಸುವಂತಾಯಿತು.

4. ತ್ವಷ್ಟಾ - ದೈತ್ಯರ ಸಹೋದರಿಯಾದ ರಚನೆಯೆಂಬವಳಿಂದ - ಸಂನಿವೇಷ ಮತ್ತು ವಿಶ್ವರೂಪರೆಂಬ ಇಬ್ಬರು ಪುತ್ರರು ಜನಿಸಿದರು. ವಿಶ್ವರೂಪನು ದೇವತೆಗಳ ಪುರೋಹಿತನಾಗಿದ್ದನು(ಬೃಹಸ್ಪತಿಯು ಸ್ವರ್ಗವನ್ನು ತೊರೆದಿದ್ದಾಗ)

5. ಸವಿತೃ - ಪೃಶ್ನಿ ದೇವಿಯಿಂದ-ಸಾವಿತ್ರೀ, ವ್ಯಾಹೃತಿ, ತ್ರಯೀ, ಅಗ್ನಿಹೋತ್ರ, ಪಶು, ಸೋಮ, ಚಾತುರ್ಮಾಸ್ಯ ಮತ್ತು ಪಂಚಮಹಾಯಜ್ಞಗಳೆಂಬ ಎಂಟು ಜನ ಉತ್ಪತ್ತಿಯಾದರು.

6. ಭಗ - ಸಿದ್ಧಿಯೆಂಬ ಪತ್ನಿಯಲ್ಲಿ-ಮಹಿಮಾ, ವಿಭು ಮತ್ತು ಪ್ರಭು ಎಂಬ ಮೂವರು ಪುತ್ರರೂ ಆಶೀಯೆಂಬ ಪುತ್ರಿಯೂ ಜನಿಸಿದರು.

7. ಧಾತೃ - ಕುಹೂ ಎಂಬ ಪತ್ನಿಯಿಂದ ಸಾಯಂಕಾಲವೂ, ಸಿನೀವಾಲೀ ಎಂಬ ಪತ್ನಿಯಿಂದ ದರ್ಶವೂ, ರಾಕಾ ಎಂಬ ಪತ್ನಿಯಿಂದ ಪ್ರಾತಃಕಾಲವೂ, ಅನುಮತಿ ಎಂಬ ಪತ್ನಿಯಿಂದ ಪೌರ್ಣಮಾಸವೂ ಹುಟ್ಟಿದವು.

shrinath.udupa@gmail.com

8. ವಿಧಾತ - ಕ್ರಿಯೆಯೆಂಬ ಪತ್ನಿಯಲ್ಲಿ ಪುರೀಷ್ಯವೆಂಬ ಹೆಸರಿನಿಂದ ಐದು ಅಗ್ನಿಗಳು ಉತ್ಪನ್ನವಾದವು.

9. ವರುಣ - ಚರ್ಷಣಿಯೆಂಬ ಪತ್ನಿಯಲ್ಲಿ ಭೃಗು ಮಹರ್ಷಿಗಳು ದ್ವಿತೀಯ ಜನ್ಮವನ್ನು ಪಡೆದರು. ಇದಕ್ಕೆ ಮೊದಲು ಇವರು ಬ್ರಹ್ಮದೇವರ ಪುತ್ರರು. ವಾಲ್ಮೀಕಿ ಮಹರ್ಷಿಗಳು ಕೂಡ ವರುಣಪುತ್ರರೇ.

10. ಮಿತ್ರ ಮತ್ತು ವರುಣ ದೇವತೆಗಳು -

(i) ಇವರಿಗೆ ಊರ್ವಶಿಯನ್ನು ಕಂಡು ವೀರ್ಯಸ್ಖಲನವಾಗಿ ವೀರ್ಯವನ್ನು ಕುಂಭದಲ್ಲಿ ರಕ್ಷಿಸಿದಾಗ-ಅದರಿಂದ ಅಗಸ್ತ್ಯ ಮತ್ತು ವಸಿಷ್ಠ ಋಷಿಗಳ ಜನ್ಮವಾಯಿತು.

(ii) ಮಿತ್ರದೇವತೆಯ ಪತ್ನಿ ರೇವತಿಯಲ್ಲಿ- ಉತ್ಸರ್ಗ, ಅರಿಷ್ಟ ಮತ್ತು ಪಿಪ್ಪಲರೆಂಬ ಮೂರು ಜನರು ಜನಿಸಿದರು.

11. ಶಕ್ರ ಅಥವಾ ಇಂದ್ರ - ಶಚೀದೇವಿಯಿಂದ ಜಯಂತ, ಋಷಭ ಮತ್ತು ಮೀಢ್ವಾನ್ ಎಂಬವರು ಜನಿಸಿದರು.

12. ಉರುಕ್ರಮ (ವಾಮನ) - ಶ್ರೀಮನ್ನಾರಾಯಣನು ಮಾಯೆಯಿಂದ ವಾಮನ ರೂಪವನ್ನು ತಾಳಿ ಕೀರ್ತಿಯೆಂಬ ಪತ್ನಿಯಿಂದ ಬೃಹಚ್ಛ್ಲೋಕನೆಂಬ ಪುತ್ರನನ್ನು ಪಡೆದನು. ಈತನಿಂದ ಸೌಭಾಗನೇ ಮುಂತಾದ ಅನೇಕರು ಜನಿಸಿದರು.

ಇದೇ ಹೆಸರುಗಳನ್ನು ಹೊಂದಿರುವ ದ್ವಾದಶಾದಿತ್ಯರಿಗೆ ಶ್ರೀ ಬ್ರಹ್ಮಪುರಾಣವು ಕುತೂಹಲಕಾರಿಯಾದ ಮತ್ತೊಂದು ವಿವರಣೆಯನ್ನು ನಿರೂಪಿಸಿದೆ.

ಸಾವಿರಾರು ಕಿರಣಗಳುಳ್ಳ ಸೂರ್ಯನು, ಇಂದ್ರಿಯಗಳಿಗೆ ಅಗೋಚರವಾದ ತನ್ನ ದಿವ್ಯಸ್ವರೂಪವನ್ನು ಹನ್ನೆರಡು ರೀತಿಯಿಂದ ಆದಿತ್ಯನೆಂಬ ದಿವ್ಯನಾಮವನ್ನು ಹೊಂದಿ ಪ್ರಪಂಚವನ್ನು ಬೆಳಗುತ್ತಿರುವನು ಮತ್ತು ಜಗತ್ತೆಲ್ಲವನ್ನೂ ವ್ಯಾಪಿಸಿರುವನು.

i. ಸೂರ್ಯದೇವನ ಮೊದಲನೇ ಇಂದ್ರಮೂರ್ತಿಯು ದೇವೇಂದ್ರನೆಂಬ ಹೆಸರಿನಿಂದ ಸ್ವರ್ಗಾಧಿಪತಿಯಾಗಿ ಆಸುರೀ ಶಕ್ತಿಗಳ ವಿರುದ್ಧ ಯಾವಾಗಲೂ ಹೋರಾಡುತ್ತಿರುವನು.

ii. ಎರಡನೆಯ 'ಧಾತ' ಎಂಬ ಹೆಸರಿನಿಂದ ಕರೆಯಲ್ಪಡುವ ಮೂರ್ತಿಯು ಬ್ರಹ್ಮನಾಗಿದ್ದು ನಾನಾ ಬಗೆಯ ಸೃಷ್ಟಿಗಳನ್ನು ಮಾಡುತ್ತಿರುವುದು.

iii. ಮೂರನೆಯದಾದ ಪರ್ಜನ್ಯವೆಂಬ ಮೂರ್ತಿಯು ಮೇಘಗಳಲ್ಲಿ ಪ್ರತಿಷ್ಠಿತವಾಗಿದ್ದು ತನ್ನ ಕಿರಣಗಳಿಂದ ಮಳೆಯನ್ನು ಸುರಿಸುವುದು.

iv. ತ್ವಷ್ಟ್ರುವೆಂಬ ನಾಲ್ಕನೇ ಮೂರ್ತಿಯು ವನಸ್ಪತಿ ಮತ್ತು ಔಷಧಿಗಳಲ್ಲಿದ್ದುಕೊಂಡು ಜೀವಿಗಳಿಗೆ ಅನುಕೂಲವನ್ನುಂಟುಮಾಡುತ್ತಿರುವುದು.



shrinath.udupa@gmail.com

v. ಐದನೆಯದಾದ ಪೂಷನೆಂಬ ಮೂರ್ತಿಯು ಆಹಾರ ಪದಾರ್ಥಗಳಲ್ಲಿದ್ದು ಜೀವಿಗಳನ್ನು ಕಾಪಾಡುತ್ತಿರುವುದು.

vi. ಆರನೆಯದಾದ ಅರ್ಯಮನೆಂಬ ಮೂರ್ತಿಯು ವಾಯುವಿನಲ್ಲಿದ್ದುಕೊಂಡು ಸಕಲ ಚಲನೆಗೂ ಕಾರಣವಾಗಿರುವುದು.

vii. ಏಳನೇ ಮೂರ್ತಿಯಾದ ಭಗನೆಂಬ ದೇವನು ಮನುಷ್ಯರ ಶರೀರದಲ್ಲಿ ಮತ್ತು ಐಶ್ವರ್ಯರೂಪದಲ್ಲಿರುವ ಪದಾರ್ಥಗಳಲ್ಲಿಯೂ ನೆಲೆಸಿರುವನು.

viii. ವಿವಸ್ವಾನ್ ಎಂಬುದು ಎಂಟನೇ ಸ್ವರೂಪವು. ಇದು ಸಕಲ ಜೀವಿಗಳಲ್ಲಿಯೂ ಜಠರಾಗ್ನಿಯಲ್ಲಿ ಪ್ರತಿಷ್ಠಿತವಾಗಿ ನಿತ್ಯವೂ ಆಹಾರವನ್ನು ಪಚನ ಮಾಡುವುದು ಮತ್ತು ಗಿಡಗಳಲ್ಲಿ ಹುಟ್ಟುವ ಕಾಯಿಗಳೂ ಸಹ ಈ ಶಾಖದಿಂದಲೇ ಹಣ್ಣಾಗಿ, ಆಹಾರ ರೂಪದಿಂದ ಪ್ರಕಟವಾಗುವುದು.

ix. ಒಂಬತ್ತನೆಯ ಮೂರ್ತಿಯಾದ ವಿಷ್ಣುವು ನಿತ್ಯವೂ ಸದ್ಭಾವನೆಗಳಿಗೆ ಮೃತ್ಯುರೂಪದಿಂದಿರುವ ಆಸುರೀ ಶಕ್ತಿಗಳನ್ನು ನಾಶಮಾಡುವುದರಲ್ಲಿ ನಿರತವಾಗಿರುವುದು.

x. ಅಂಶುಮಾನ್ ಎಂಬ ಹತ್ತನೇ ರೂಪವು ಗಾಳಿಯಲ್ಲಿ ಪ್ರತಿಷ್ಠಿತವಾಗಿ ಸಕಲರನ್ನು ಆನಂದಗೊಳಿಸುತ್ತಿರುವುದು.

xi. ಹನ್ನೊಂದನೆಯ ಮೂರ್ತಿಯಾದ ವರುಣನೆಂಬ ರೂಪವು ಜಲದಲ್ಲಿದ್ದು ಸಕಲ ಪ್ರಾಣಿಗಳನ್ನೂ ಸಲಹುತ್ತಿರುವುದು.

xii. ಮಿತ್ರನೆಂಬ ರೂಪವೇ ಹನ್ನೆರಡನೆಯದು. ಈ ದೇವತೆಯು ಚಂದ್ರಭಾಗಾ ನದೀ ತೀರದಲ್ಲಿ ನೆಲೆಸಿ, ಯಾವಾಗಲೂ ಯೋಗದಲ್ಲಿದ್ದು, ಲೋಕ ಕ್ಷೇಮಕ್ಕಾಗಿ ತಪಸ್ಸನ್ನಾಚರಿಸುತ್ತಾ ಜನಗಳನ್ನು ಅನುಗ್ರಹಿಸುತ್ತಿರುವನು. ಈ ಕಾರಣದಿಂದಲೇ ಈ ದೇವತೆಯು ಮಿತ್ರನೆಂದು ಪ್ರಸಿದ್ಧನಾಗಿರುವನು. ಹೀಗೆ ಪರಮಾತ್ಮನಾದ ಸೂರ್ಯದೇವನು ತನ್ನ ಹನ್ನೆರಡು ರೂಪಗಳಿಂದ ಜಗತ್ತನ್ನೆಲ್ಲಾ ವ್ಯಾಪಿಸಿರುವನು. ಆದ್ದರಿಂದ ಈ ದ್ವಾದಶಾದಿತ್ಯರನ್ನು ಭಕ್ತಿಯಿಂದ ಸ್ಮರಿಸಿದೆ.

**೧೩-೧೪ ದ್ವಾತ್ರಿಂಶದಾಯುಧ ಮಂಡಲ ಮಂಡಿತದೋರ್ದಂಡ ಷೋಡಶ ಭೂಪಾಲ ಪಾಲಿತೇ**

ಈ ಪೃಥ್ವಿಯು ಮೂವತ್ತೆರಡು ಮುಖ್ಯ ಆಯುಧ ಮಂಡಲದಿಂದ ಶೋಭಿತರಾದ ಹದಿನಾರು ಭೂಪಾಲರುಗಳಿಂದ ಪಾಲಿಸಲ್ಪಟ್ಟಿರುವುದೆಂದು ವರ್ಣಿಸಲ್ಪಟ್ಟಿದೆ. ಈ ಆಯುಧಗಳು ಕೇವಲ ಯೋಧರುಗಳು ಉಪಯೋಗಿಸುವ ಸಾಮಾನ್ಯ ಆಯುಧಗಳಾಗಿರುವುದಿಲ್ಲ. ಭೂಪಾಲರೆಂದರೆ ಅಸಾಧಾರಣ ಸಾಮರ್ಥ್ಯ ಉಳ್ಳವರು. ತ್ರಿಲೋಕಗಳಲ್ಲೂ ಸಂಚರಿಸಲು ಸಮರ್ಥರಾಗಿರುವ ಮತ್ತು ತಮ್ಮ ಅಸಾಧಾರಣ ತಪಸ್ಸಿನ

ಮೂಲಕ ದೇವತೆಗಳನ್ನೂ ಮೆಚ್ಚಿಸಿ, ಅನುಗ್ರಹಪೂರ್ವಕವಾಗಿ, ಅಸ್ತ್ರ ಶಸ್ತ್ರ ಸಂಪತ್ತನ್ನು ಹೊಂದಿರುವ ಮಹಾಪುರುಷರು. ಸಾಮಾನ್ಯ ಆಯುಧಗಳು ಇವರುಗಳಿಂದ ಅಭಿಮಂತ್ರಿಸಲ್ಪಟ್ಟಾಗ, ಅವು ಕೇವಲ ಆಯುಧಗಳಾಗಿರದೆ, ಪ್ರಚಂಡ ಶಕ್ತಿಯನ್ನು ಮೈಗೂಡಿಸಿಕೊಳ್ಳುತ್ತವೆ. ಸಾಮಾನ್ಯ ಮನುಷ್ಯರು ಈ ಆಯುಧ ಶಕ್ತಿಗಳನ್ನು ಊಹಿಸಿಕೊಳ್ಳಲೂ ಸಾಧ್ಯವಿಲ್ಲ. ಇಂತಹ ಅಸ್ತ್ರಗಳಿಂದ ನಡೆದ ಮಹಾ ಮಹಾ ಯುದ್ಧಗಳು ಪುರಾಣಗಳಲ್ಲಿ ವರ್ಣಿಸಲ್ಪಟ್ಟಿವೆ. ಬ್ರಹ್ಮಶಿರೋ ಅಸ್ತ್ರಗಳೇ ಮುಂತಾದ ಪ್ರಬಲವಾದ ಅಸ್ತ್ರಗಳು ವಿವರಿಸಲ್ಪಟ್ಟಿವೆ. ಪರಮಾತ್ಮನ ಅನಂತ ಶಕ್ತಿ ಸ್ವರೂಪವನ್ನು ಧ್ಯಾನಿಸುವಾಗ, ಆತನು ಅನೇಕ ಆಯುಧಗಳಿಂದ ಅಲಂಕೃತವಾದಂತೆ ಭಾವಿಸುವುದು ಆಧ್ಯಾತ್ಮಿಕ ಸಾಧನೆಯ ಒಂದು ಮಾರ್ಗವೂ ಆಗಿದೆ. ಪರಮಾತ್ಮನಿಗಿರುವ ಅಲೌಕಿಕವಾದ, ಅತ್ಯದ್ಭುತವಾದ, ಮನುಷ್ಯ ಶಕ್ತಿಯ ಕೋಟಿ ಕೋಟಿ ಪಟ್ಟು ಹೆಚ್ಚಾಗಿರುವ ಮಹತ್ತಾದ ಶಕ್ತಿಯನ್ನು ಊಹಿಸಿಕೊಳ್ಳಲು ಅನುಕೂಲಿಸುವ ಈ ಕಲ್ಪನೆಯು ಬಹಳ ಹಿಂದಿನಿಂದಲೂ ಬಂದದ್ದಾಗಿದೆ. ಉದಾಹರಣೆಗೆ; ಆಳಿದ ಮಹಾ ಸ್ವಾಮಿಯವರಾದ, ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರಿಂದ ಪ್ರಕಾಶಿತವಾದ "ದೇವತಾಧ್ಯಾನ ಮಾಲಿಕಾ" ಎಂಬ ಗ್ರಂಥದಲ್ಲಿ ನಿರೂಪಿಸಿರುವ "ಶ್ರೀ ಚಾಮುಂಡಾಂಬಿಕಾ ಧ್ಯಾನ" ಶ್ಲೋಕದಲ್ಲಿ ಈ ದೇವಿಯನ್ನು ದ್ವಾತ್ರಿಂಶದ್ಭುಜ ಚಾಮುಂಡಾಂಬಿಕೆಯೆಂದು ಸ್ಮರಿಸಲಾಗಿದೆ. ದುಷ್ಟ ಶಿಕ್ಷಕ, ಶಿಷ್ಟ ರಕ್ಷಕರಾದ ಭೂಪಾಲರನ್ನು ಪರಮಾತ್ಮನ ಸ್ವರೂಪವೆಂದೇ ಪ್ರಜೆಗಳು ಭಾವಿಸುತ್ತಿದ್ದರಿಂದ, ಇಲ್ಲಿ ಅಂತಹ ಮಹಾಮಹಿಮರಾದ ಷೋಡಶ ಭೂಪಾಲರನ್ನು, ಮಂತ್ರಶಕ್ತಿಯುತವಾದ ಆಯುಧಗಳಿಂದ ಕೂಡಿದವರೆಂದು ಹೇಳಿದೆ. ಮಹಾಸಂಕಲ್ಪದಲ್ಲಿ ಪರಮಪಾವನ ಶ್ರೀರಾಮಚಂದ್ರಮೂರ್ತಿಯೇ ಆದಿಯಾಗಿ ಹದಿನೆಂಟು ಭೂಪಾಲರನ್ನು ಸ್ಮರಿಸಿ, ಅವರಿಂದ ಪರಿಪಾಲಿಸಲ್ಪಟ್ಟಿರುವ ಪೃಥ್ವಿಯೆಂದು ಸ್ತುತಿಸಿದೆ. ಮಹಾಭಾರತದ ಅನುಶಾಸನ ಪರ್ವದಲ್ಲಿ ಭೀಷ್ಮಾಚಾರ್ಯರು ಯುಧಿಷ್ಠಿರನಿಗೆ ನಿತ್ಯ ಸ್ಮರಣೀಯರಾದ ದೇವತಾ - ಪರ್ವತ-ಋಷಿ-ರಾಜರ ನಾಮ ಸಂಕೀರ್ತನೆಯನ್ನು ತಿಳಿಯಪಡಿಸಿ, ಇದನ್ನು ಮೂರು ಸಂಧ್ಯಾಕಾಲಗಳಲ್ಲೂ ಪಠಿಸುವವನು ಸರ್ವ ಪಾಪಗಳಿಂದ ಮುಕ್ತನಾಗುತ್ತಾನೆಂದು ಹೇಳಿರುತ್ತಾರೆ. ಇಂತಹ ಪವಿತ್ರವಾದ ಈ ಸಂಕೀರ್ತನೆಯಲ್ಲಿ ಈ ಷೋಡಶ ಭೂಪಾಲರನ್ನು ಸಹ ಸ್ಮರಿಸಲಾಗಿದೆ. ಇವರುಗಳ ಸಂಕ್ಷಿಪ್ತ ಚರಿತ್ರೆಯು ಮಹಾಭಾರತದಲ್ಲಿ ವರ್ಣಿತವಾಗಿದೆ. (ದ್ರೋಣಪರ್ವ- 55).

ಶ್ರೀಕೃಷ್ಣ ಪರಮಾತ್ಮನು ಯುಧಿಷ್ಠಿರನಿಗೆ, ಸಮಾಧಾನ ಮಾಡುವ ಸಲುವಾಗಿ, ಈ ಹದಿನಾರು ರಾಜಶ್ರೇಷ್ಠರ ಉಪಾಖ್ಯಾನವನ್ನು ತಿಳಿಸಿ, (ಶಾಂತಿ ಪರ್ವ ಅ -29) ಉತ್ತಮೋತ್ತಮವಾದ ಈ ಇತಿಹಾಸ ಶ್ರವಣವು ಮನಸ್ಸಿಗೆ ಆಪ್ಯಾಯಮಾನವನ್ನು ಉಂಟು ಮಾಡುತ್ತದೆ; ಆಯುಷ್ಯವು ವರ್ಧಿಸುತ್ತದೆ; ಕ್ರೂರಗ್ರಹಗಳ ಬಾಧೆಯನ್ನು ಶಮನ ಮಾಡುತ್ತದೆ ಎಂಬುದಾಗಿ ಭಗವಂತನು ಅಪ್ಪಣೆ ಕೊಡಿಸಿರುತ್ತಾನೆ.

ಈ ಭೂಪಾಲರುಗಳು ಸಾಮಾನ್ಯ ರಾಜರಂತೆ ಇದ್ದವರಲ್ಲ. ಇವರುಗಳು ತ್ರಿಕರಣ ಶುದ್ಧಿಯಿಂದ ಧರ್ಮವನ್ನು ಪ್ರತಿಷ್ಠಾಪಿಸಲು, ಸಕಲವನ್ನೂ ತ್ಯಾಗ ಮಾಡಿದ ಅತ್ಯಂತ



shrinath.udupa@gmail.com

ಶ್ರೇಷ್ಠವರ್ಗದ ರಾಜರಾಗಿದ್ದರು. ಅವತಾರ ಪುರುಷರಂತೆಯೇ ರಾಜ್ಯಪರಿಪಾಲನೆ ಮಾಡುತ್ತಿದ್ದ, ಈ ಭೂಪಾಲರ ರಾಜಧಾನಿಗಳು ಭಾರತವರ್ಷದಲ್ಲಿದ್ದರೂ, ಇವರ ಶಾಸನಗಳು ಇಡೀ ಭೂಮಂಡಲದಲ್ಲಿ ನಡೆಯುತ್ತಿದ್ದು, ಪೃಥ್ವಿಯಲ್ಲಿರುವ ಸಕಲ ಜೀವಿಗಳೂ ಸುಖ, ಶಾಂತಿಯಿಂದಿರುತ್ತಿದ್ದರು.

ಶ್ರೀಮದ್ಭಗವದ್ಗೀತೆಯಲ್ಲಿ ಶ್ರೀ ಕೃಷ್ಣಪರಮಾತ್ಮನು - "ಪ್ರಾಣಿಗಳು ಅನ್ನದಿಂದ ಹುಟ್ಟುತ್ತವೆ; ಅನ್ನವು ಮಳೆಯಿಂದ ಉಂಟಾಗುವುದು; ಯಜ್ಞದಿಂದ ಮಳೆಯಾಗುವುದು; ಯಜ್ಞವು ಕರ್ಮಗಳಿಂದ ಆಗುವುದು; ಕರ್ಮಗಳು ವೇದದಿಂದ ಆಗುತ್ತವೆ ಮತ್ತು ವೇದಗಳು ನಾಶರಹಿತವಾದ ಬ್ರಹ್ಮನಿಂದ ಆದದ್ದು. ಹೀಗಿರುವುದರಿಂದ ಎಲ್ಲವನ್ನು ಬೆಳಗುತ್ತಿರುವ ವೇದವು ಯಾವಾಗಲೂ ಯಜ್ಞದಲ್ಲಿಯೇ ಪ್ರತಿಷ್ಠಿತವಾಗಿರುವುದು. ಹೀಗೆ ಸುತ್ತುತ್ತಿರುವ ಚಕ್ರವನ್ನು ಯಾವನು ಅನುಸರಿಸದೇ ಇರುವನೋ ಅವನ ಜೀವನವು ಪಾಪಮಯವಾಗಿ, ಇಂದ್ರಿಯಗಳ ಆಟದಲ್ಲಿಯೇ ಕಾಲವನ್ನು ಕಳೆಯುತ್ತಿರುವ ಆತನ ಬಾಳು ವ್ಯರ್ಥವು" (ಗೀತಾ-ಅಧ್ಯಾಯ 3 ಶ್ಲೋಕ - 14ರಿಂದ16) ಎಂದು ಹೇಳಿರುವನು.

<u>ಹಿಂದೆ ಭೂಪಾಲರುಗಳು ಈ ಚಕ್ರವು ವ್ಯತ್ಯಾಸವಾಗದಂತೆ, ಯಜ್ಞಗಳನ್ನು ಅತ್ಯಂತ ಭಕ್ತಿಯಿಂದಲೂ ಶ್ರದ್ಧೆಯಿಂದಲೂ ಮಾಡುತ್ತಾ, ಲೋಕಪಾಲಕರಾದ ದೇವಾದಿ ದೇವತೆಗಳ ಸಂಪರ್ಕವನ್ನು ಹೊಂದಿ ಪ್ರಜಾಪಾಲನೆ ಮಾಡುತ್ತಿದ್ದು, ದೇವತೆಗಳ ಅನುಗ್ರಹದಿಂದ ದೇಶಗಳು ಸಂಪತ್ ಸಮೃದ್ಧಿಯಿಂದ ಕೂಡಿ, ಪ್ರಜೆಗಳು ಸುಖಶಾಂತಿಗಳನ್ನು ಹೊಂದಿ, ಸತ್ಕರ್ಮಾಚರಣೆಗಳನ್ನು ಮಾಡುತ್ತಾ ಪುಣ್ಯಭಾಗಿಗಳಾಗಿ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ಚತುರ್ವಿಧ ಫಲ ಪುರುಷಾರ್ಥವನ್ನು ಹೊಂದುತ್ತಿದ್ದರು. ಇಂತಹ ಭೂಪಾಲರುಗಳಿದ್ದ ಭಾರತ ದೇಶವು ಹೆಮ್ಮೆ ಪಡುವಂತಿದ್ದಿತು.</u>

ಧರ್ಮ ಪರಾಯಣರಾಗಿ ಈ ಪೃಥ್ವಿಯನ್ನು ಆಳಿದ ಭೂಪಾಲರುಗಳು ಇಂದಿಗೂ ಸಹ ತಮ್ಮ ದಿವ್ಯದೇಹಗಳಿಂದ ಲೋಕಪಾಲಕನಾದ ಧರ್ಮರಾಜನಿಗೆ ಸಹಾಯಕರಾಗಿದ್ದು, ಆ ಲೋಕದಲ್ಲಿ ಧರ್ಮರಾಜನ ಸಭೆಯಲ್ಲಿ ಸದಸ್ಯರಾಗಿ, ಶೋಭಿಸುತ್ತಿರುವರೆಂದು ಗರುಡ ಪುರಾಣದಲ್ಲಿ ಹೇಳಲ್ಪಟ್ಟಿದೆ.(ಗರುಡ ಪು.14ನೇ ಅಧ್ಯಾಯ). ಪೃಥ್ವಿಯಲ್ಲಿ ಧರ್ಮಾವಲಂಬಿಗಳನ್ನು ಪ್ರೇರಿಸುತ್ತಾ, ಧರ್ಮ ಸಂಸ್ಥಾಪನಾ ಕಾರ್ಯಕ್ರಮಗಳು ನಿರಂತರವಾಗಿ ನಡೆಯಲು ಶ್ರಮಿಸುತ್ತಿರುವ ಈ ಷೋಡಶ ಭೂಪಾಲರುಗಳನ್ನು ಸ್ಮರಿಸುವುದರ ಮೂಲಕ ಅವರುಗಳ ದಿವ್ಯತೇಜಸ್ಸಿಗೆ ಸ್ಪಂದಿಸಿ, ಶುಭ ಕರ್ಮಗಳನ್ನು ಪ್ರಾರಂಭಿಸಲು ಮಹಾ ಸಂಕಲ್ಪವು ಕರೆ ನೀಡಿದೆ. ಈ ಭೂಪಾಲರುಗಳ ಚರಿತ್ರೆಯು ವಿವರವಾಗಿ ಇತಿಹಾಸ, ಪುರಾಣಗಳಲ್ಲಿ ವಿವರಿಸಲ್ಪಟ್ಟಿದೆ. ಇವರುಗಳ ಸೂಕ್ಷ್ಮ ಪರಿಚಯವು ಈ ರೀತಿ ಇದೆ.

1. *ಶ್ರೀರಾಮಚಂದ್ರ* - ದಶರಥ ಚಕ್ರವರ್ತಿ-ಕೌಸಲ್ಯಾದೇವಿಗೆ ಜನಿಸಿದ,ಭಗವನ್ ವಿಷ್ಣುವಿನ ಅವತಾರ ಪುರುಷ. ತ್ರೇತಾಯುಗದಲ್ಲಿ ಶ್ರೇಷ್ಠ ಭೂಪಾಲನೆನಿಸಿ, ರಾಮರಾಜ್ಯವನ್ನು ಮಾದರಿಯಾಗಿ ಪ್ರಪಂಚಕ್ಕೆ ತೋರಿಸಿದ ಆದರ್ಶ ಚಕ್ರವರ್ತಿ. (ನೋಡಿ - ಅಯೋಧ್ಯಾಪುರಿ).

2. *ಜಾಮದಗ್ನ್ಯ* - ಭೃಗುವಂಶದ ಜಮದಗ್ನಿ ಮಹರ್ಷಿಯ ಪುತ್ರ. ಪರಶುರಾಮನೆಂಬ ಹೆಸರಿನಿಂದ ಪ್ರಕಟಗೊಂಡ ವಿಷ್ಣುವಿನ ಅವತಾರ ಪುರುಷ. ವೈವಸ್ವತ ಮನ್ವಂತರದ 19ನೇ ತ್ರೇತಾಯುಗದಲ್ಲಿ ಅವತರಿಸಿದ ಭೂಪಾಲ.

3. *ದಿಲೀಪ* - ಈತನು ಸಗರ ಚಕ್ರವರ್ತಿಯ ಮಗನಾದ ಅಂಶುಮಂತನೆಂಬುವನ ಪುತ್ರ. ಇಕ್ಷ್ವಾಕು ವಂಶದ ಭೂಪಾಲ.

4. *ಅಂಗ* - ಸ್ವಾಯಂಭುವ ಮನುವಿನ ವಂಶದಲ್ಲಿ ಜನಿಸಿದ ಸರ್ವತೇಜಸನೆಂಬುವನ ಪುತ್ರನಾದ ಚಕ್ಷುವೆಂಬುವನು ಚಾಕ್ಷುಷ ಮನ್ವಂತರದಲ್ಲಿ ಮನು ಪದವಿಯನ್ನು ಪಡೆದನು. ಈತನಿಗೆ ಜನಿಸಿದ ಉಲ್ಮುಕನೆಂಬವನ ಪುತ್ರನೇ ಅಂಗನೆಂಬ ಭೂಪಾಲನು. ಈತನು ಶೀಲದ ನಿಧಿಯೇ ಆಗಿದ್ದನು.

5. *ಗಯ* - ಚಂದ್ರವಂಶದ ದೊರೆಯಾದ ಅಮೂರ್ತರಯಸನೆಂಬವನ ಪುತ್ರ. ಈತನು ಸ್ವರ್ಣದಿಂದಲೇ ಯಜ್ಞವೇದಿಕೆಯನ್ನು ನಿರ್ಮಿಸಿ ಯಜ್ಞಗಳನ್ನು ಆಚರಿಸುತ್ತಿದ್ದನೆಂದು ಕೀರ್ತಿಸಲಾಗಿದೆ.

6. *ಅಂಬರೀಷ* - ಮನು ಚಕ್ರವರ್ತಿಯ ಮಗನಾದ ನಭಗನೆಂಬುವನಿಗೆ, ನಾಭಾಗನೆಂಬ ಮಗನಿದ್ದನು. ಈತನು ಬಹಳ ಕಾಲದವರೆಗೂ ಬ್ರಹ್ಮಚರ್ಯದಲ್ಲಿದ್ದು ವೇದವಿತ್ ಎನಿಸಿ, ರುದ್ರದೇವರಿಂದಲೇ ಅನುಗ್ರಹೀತನಾಗಿದ್ದನು. ಈತನ ಪುತ್ರನೇ ಅಂಬರೀಷನೆಂಬ ಭೂಪಾಲನು. ಈತನು ಸಪ್ತದ್ವೀಪಗಳಿಂದ ಕೂಡಿದ ಅಖಂಡ ಭೂಮಂಡಲಕೆ ಒಡೆಯನಾಗಿದ್ದನು.

7. *ಶಶಬಿಂದು* - ಶ್ರೀ ಕೃಷ್ಣ ಪರಮಾತ್ಮನು ಜನ್ಮವೆತ್ತಿದ್ದರಿಂದ ಯದು ವಂಶವು ಪರಮ ಪವಿತ್ರವಾದುದು. ಈ ವಂಶದಲ್ಲಿ, ದೇವೇಂದ್ರ ಪದವಿಯನ್ನು ತನ್ನ ಸಾಮರ್ಥ್ಯದಿಂದ ಹೊಂದಿದ್ದ ನಹುಷ ಚಕ್ರವರ್ತಿಯು ಅತ್ಯಂತ ಪ್ರಸಿದ್ಧನು. ಇಂತಹ ತೇಜಸ್ವಿಗಳು ಜನಿಸಿದ್ದ ಯದುವಂಶದಲ್ಲಿ ಚಿತ್ರರಥನೆಂಬವನು ಸಹ ತೇಜಸ್ವಿಯಾದ ಚಕ್ರವರ್ತಿಯೆನಿಸಿದನು. ಈತನ ಪುತ್ರನೇ ಶಶಬಿಂದು ಭೂಪಾಲನು. ಈತನು ಪರಮಯೋಗಿಯಂತೆ ಜೀವನವನ್ನು ನಡೆಸಿದನು.

8. *ಶಿಬಿ* - ಚಂದ್ರವಂಶದ ಉಶೀರವನೆಂಬ ರಾಜನ ಪುತ್ರ. ಯಯಾತಿ ರಾಜನ ಮಗಳಾದ ಮಾಧವಿಯೆಂಬುವಳು ಈತನ ಜನನಿ. ಅನೇಕ ಯಜ್ಞಗಳನ್ನು ಮಾಡಿ ಅಪ್ರತಿಮ ದಾನಿಯೆಂದು ಪ್ರಸಿದ್ಧನಾಗಿದ್ದನು.

9. *ಮಾಂಧಾತೃ* - ಇಕ್ಷ್ವಾಕು ವಂಶದ ಯವನಾಶ್ವನೆಂಬ ರಾಜನ ಪುತ್ರ. ಈತನ ಜನನ ವಿಸ್ಮಯಕರವಾಗಿ ಆಗಿ, ದೇವೇಂದ್ರನು ಮಗುವಿನ ಬಾಯಿಯಲ್ಲಿ ಬೆರಳಿಟ್ಟು "ಅಯಂ ಮಾಂ ಧಾಸ್ಯತಿ" ಎಂದು ಹೇಳಿದ್ದರಿಂದ, ಈ ಶಿಶುವಿಗೆ ಮಾಂಧಾತನೆಂಬ ಹೆಸರಾಯಿತು. ದೇವೇಂದ್ರನ ಅನುಗ್ರಹದಿಂದ ಈತನು ಸಕಲವೇದಗಳನ್ನೂ ತಿಳಿದವನಾಗಿ, ಅತ್ಯಂತ ತೇಜಸ್ವಿಯಾಗಿ ಇದ್ದು, ಇಂದ್ರನ ಸಿಂಹಾಸನದಲ್ಲಿ ಅರ್ಧ ಸಿಂಹಾಸನವನ್ನೂ ಪಡೆದನು.



shrinath.udupa@gmail.com

10. *ಮರುತ್ತ* - ಸೂರ್ಯವಂಶದಲ್ಲಿ ಪ್ರಸಿದ್ಧನಾಗಿದ್ದ ಅವಿಕ್ಷಿತ ಭೂಪಾಲನ ಮಗ. ಈತನು ಮಾಡಿದ ಯಜ್ಞಗಳು ಎಷ್ಟು ವೈಭವವಾಗಿತ್ತೆಂದರೆ, ಇದರ ವರ್ಣನೆಯು ಐತರೇಯ ಬ್ರಾಹ್ಮಣದಲ್ಲೂ ವಿವರಿಸಲ್ಪಟ್ಟಿದೆ. ಧರ್ಮ, ಜ್ಞಾನ, ವೈರಾಗ್ಯ ಮತ್ತು ಐಶ್ವರ್ಯ- ಈ ನಾಲ್ಕರಲ್ಲಿಯೂ ಶ್ರೇಷ್ಠನೆನಿಸಿದ ಈತನ ದಿವ್ಯ ಚರಿತ್ರೆಯು ಶ್ರುತ್ಯುಕ್ತವಾದದ್ದಾಗಿದೆ.

11. *ಭರತ* - ಭಾರತೀಯರಾದ ನಾವೆಲ್ಲರೂ ವಾಸಿಸುತ್ತಿರುವ ಈ ಭೂಪ್ರದೇಶವನ್ನು ಒಳಗೊಂಡಿದ್ದ ವಿಶಾಲ ಭಾರತವನ್ನು ಸ್ಥಾಪಿಸಿದವನು. ಈತನ ಹೆಸರೇ ಈ ದೇಶಕ್ಕೆ ಪ್ರಸಿದ್ಧವಾಯಿತು. ಭರತ ಚಕ್ರವರ್ತಿಯೆಂಬ ಹೆಸರಿನಿಂದ ಮೂರು ರಾಜರುಗಳ ಉಲ್ಲೇಖವಿದೆ.

(ಅ) ಋಷಭ ದೇವನ ಮಗನಾದ ಭರತ ಚಕ್ರವರ್ತಿ

(ಆ) ದುಷ್ಯಂತ - ಶಕುಂತಲೆಯರ ಪುತ್ರನಾದ ಭರತ ಚಕ್ರವರ್ತಿ

(ಇ) ಶ್ರೀರಾಮಚಂದ್ರ ಭೂಪಾಲನ ಸಹೋದರನಾದ ಭರತ

ಮಹಾಭಾರತದಲ್ಲಿ ಶ್ರೀಕೃಷ್ಣ ಪರಮಾತ್ಮನು ಷೋಡಶ ಭೂಪಾಲರ ಚರಿತ್ರೆಯನ್ನು ವಿವರಿಸುವಾಗ ದುಷ್ಯಂತ ಚಕ್ರವರ್ತಿಯ ಪುತ್ರ ಭರತನನ್ನೇ ಹೇಳಿರುತ್ತಾನೆ.

12. *ಯಯಾತಿ* - ಚಂದ್ರವಂಶದ ನಹುಷ ಚಕ್ರವರ್ತಿಯಿಂದ ವಿರಜೆಯೆಂಬುವಳಲ್ಲಿ ಜನಿಸಿದವನು. ಈತನ ಚರಿತ್ರೆಯು ಭಾರತದ ಆದಿ, ದ್ರೋಣ ಮತ್ತು ಶಾಂತಿ ಪರ್ವಗಳಲ್ಲಿದೆ. ಶ್ರೀಮದ್ಭಾಗವತದ ನವಮ ಸ್ಕಂಧದ 18ನೇ ಅಧ್ಯಾಯದಲ್ಲಿಯೂ ವಿವರಿಸಲ್ಪಟ್ಟಿದೆ.

13. *ಪೃಥು* - ಈ ಹೆಸರಿನಲ್ಲಿ ಮೂರು ರಾಜರುಗಳು ಪ್ರಖ್ಯಾತರಾಗಿದ್ದಾರೆ.

(ಅ) ಯದು ವಂಶದ ಅರಸು

(ಆ) ಸೂರ್ಯವಂಶದ ಅನೇಸನೆಂಬ ರಾಜನ ಮಗ

(ಇ) ವೇನನೆಂಬ ರಾಜನ ಮಗ

ಮಹಾಭಾರತದಲ್ಲಿ ಶ್ರೀಕೃಷ್ಣ ಪರಮಾತ್ಮನು ಷೋಡಶ ಭೂಪಾಲರ ಚರಿತ್ರೆಯನ್ನು ವಿವರಿಸುವಾಗ, ವೇನನ ಮಗ ಪೃಥು ಚಕ್ರವರ್ತಿಯನ್ನು ಉಲ್ಲೇಖಿಸಿದ್ದಾನೆ.

14. *ಭಗೀರಥ* - ಈತನ ದಿವ್ಯ ಚರಿತ್ರೆಯು ವಾಯು, ಹರಿವಂಶ, ಭಾಗವತ ಪುರಾಣಗಳಲ್ಲಿಯೂ, ಮಹಾಭಾರತದ ಅನೇಕ ಕಾಂಡಗಳಲ್ಲಿಯೂ ಮತ್ತು ವಾಲ್ಮೀಕಿ ರಾಮಾಯಣದಲ್ಲೂ ವಿವರವಾಗಿ ಉಕ್ತವಾಗಿದೆ. ಸೂರ್ಯವಂಶದ ಪ್ರಸಿದ್ಧರಾಜನಾದ ದಿಲೀಪ ಚಕ್ರವರ್ತಿಯ ಮಗ. ಸಗರ ಚಕ್ರವರ್ತಿಯ ಮಕ್ಕಳು ಕಪಿಲ ಮಹರ್ಷಿಗಳ

ಶಾಪದಿಂದ ಭಸ್ಮೀಭೂತರಾಗಿ ಹೋಗಿದ್ದರಿಂದ, ಇವರುಗಳಿಗೆ ಸದ್ಗತಿಯನ್ನು ಹೊಂದಿಸುವ ನೆಪದಿಂದ ಭೂಮಿಗೆ ಪವಿತ್ರ ಗಂಗೆಯನ್ನು ತಂದ ಮಹಾ ತೇಜಸ್ವಿ. ಈತನ ತಪಸ್ಸಿನ ಫಲವಾಗಿಯೇ ಇಂದು ಪರಮ ಪವಿತ್ರ ಗಂಗೆಯು ಭಾಗೀರಥಿ ಎಂಬ ಹೆಸರಿನಿಂದ ಭಾರತ ಭೂಮಿಯನ್ನು ಪವಿತ್ರಗೊಳಿಸುತ್ತಿರುವಳು.

**15.** ***ರಂತಿದೇವ*** - ಭರತಚಕ್ರವರ್ತಿವಂಶದಲ್ಲಿ ಜನಿಸಿದ ಅರಸು. ಸಂಕೃತಿ ಎಂಬ ರಾಜನ ಮಗ. ಈತನ ಯಶಸ್ಸನ್ನು ತ್ರಿಲೋಕಗಳಲ್ಲಿ ಈಗಲೂ ಗಾನ ಮಾಡಲಾಗುತ್ತಿದೆಯೆಂದು ಹೇಳಿದೆ. (ಭಾಗ; ನವಮ ಸ್ಕಂಧ 21 ಅಧ್ಯಾಯ)

**16.** ***ಸುಹೋತ್ರ*** - ಮಹಾಸಂಕಲ್ಪದಲ್ಲಿ ಸ್ಮರಿಸಿರುವ ಷೋಡಶ ಭೂಪಾಲರುಗಳಲ್ಲಿ ಕೊನೆಯವನು. ಚಂದ್ರವಂಶದ ಭರತ ಚಕ್ರವರ್ತಿಯ ಮಗನಾದ ಭುಮನ್ಯುವೆಂಬ ರಾಜನ ಮಗ. ಹಸ್ತಿನಾಪುರವನ್ನು ಸ್ಥಾಪಿಸಿದ ಹಸ್ತಿಯೆಂಬ ರಾಜನ ತಂದೆಯು. ಈತನ ಪತ್ನಿಯು ಇಕ್ಷ್ವಾಕುವಂಶದ ಸುವರ್ಣ ಎಂಬವಳು. ಅನೇಕ ಯಜ್ಞಗಳನ್ನು ಮಾಡಿ ಕೀರ್ತಿವಂತನಾಗಿದ್ದವನು. (ಭಾಗ; ಆದಿ 95, 101 ವನ 197)

ಈ ಹದಿನಾರು ಭೂಪಾಲರ ಚರಿತ್ರೆಗಳು ಬಹಳ ಪುಣ್ಯಕರವಾದುವು. ಇವರುಗಳು ಆಚರಿಸಿದ ಮಹಾಮಹಾ ಯಜ್ಞಗಳ ವೈಭವವು ಚರಿತ್ರಾರ್ಹವಾಗಿದ್ದವು. ಇಂಥವರಿಂದ ಪಾಲಿತವಾದ ಪವಿತ್ರಭೂಮಿಯನ್ನು ಇಲ್ಲಿ ಸ್ಮರಿಸಿದೆ. ಇವರುಗಳ ಬಗ್ಗೆ ಉಲ್ಲೇಖವು ಮಹಾಭಾರತವಲ್ಲದೇ ಮತ್ಸ್ಯ, ಭಾಗವತ, ಹರಿವಂಶ, ಪುರಾಣಗಳಲ್ಲಿಯೂ ಮತ್ತು ಶ್ರೀಮದ್ರಾಮಾಯಣದಲ್ಲೂ ನೋಡಬಹುದು.

### ೧೫. ಅಷ್ಟಾದಶ ದೇವೀಪೀಠಗಳು

ಮಹಾಸಂಕಲ್ಪದಲ್ಲಿ ಪೃಥ್ವಿಯನ್ನು "ಅಷ್ಟಾದಶ ದೇವೀಪೀಠ ಸಮಲಂಕೃತೇ" ಎಂದು ವರ್ಣಿಸಿದೆ. ಶ್ರೀ ದೇವೀ ಭಾಗವತ ಪುರಾಣದ ಪ್ರಕಾರ ಭೂಮಿಯ ಮೇಲೆ ನೂರೆಂಟು ಶಕ್ತಿ ಪೀಠಗಳಿವೆಯೆಂದೂ, ಸಾಧಕರ ಇಚ್ಛೆಗಳನ್ನು ನೆರವೇರಿಸಲು ಜಗದಂಬೆಯು ಈ ಪೀಠಗಳಲ್ಲಿ ನೆಲೆಸಿರುವಳೆಂದೂ ಉಕ್ತವಾಗಿದೆ. ದಕ್ಷಯಜ್ಞದಲ್ಲಿ ದಕ್ಷ ಪ್ರಜಾಪತಿಯು ಅಳಿಯನಾದ ಶಿವನ ಮೇಲಿನ ಕ್ರೋಧದಿಂದ, ಮಗಳಾದ ಸತೀದೇವಿಯ ಮನ ನೋಯುವಷ್ಟು ಶಿವನಿಂದೆ ಮಾಡಿದ್ದರಿಂದ, ಅದನ್ನು ತಡೆಯಲಾರದೆ ಆಕೆಯು ಯೋಗಾಗ್ನಿಯ ಮೂಲಕ ದೇಹತ್ಯಾಗ ಮಾಡಿದಳು. ಈ ಸಂದರ್ಭದಲ್ಲಿ ಶಿವನ ಶರೀರದಿಂದ ಉತ್ಪನ್ನವಾದ ಕೋಪವು, ವೀರಭದ್ರನೆಂಬ ರೂಪವನ್ನು ತಾಳಿ ದಕ್ಷನ ಶಿರವನ್ನು ಉರುಳಿಸಿತು. ಆದರೆ ಶಿವನು ಸತೀದೇವಿಯ ವಿಯೋಗವನ್ನು ತಡೆಯಲಾರದೆ ಆಕೆಯ ಕಲೇವರವನ್ನು ಹೊತ್ತುಕೊಂಡು ಭ್ರಮಿಷ್ಠನಂತೆ ದೇಶ ದೇಶಗಳಲ್ಲಿ ಸಂಚರಿಸಿದನು. ವಿಷ್ಣುವು ಪರಿಸ್ಥಿತಿಯನ್ನು ಸರಿಪಡಿಸಲು



shrinath.udupa@gmail.com

ತನ್ನ ಸುದರ್ಶನ ಚಕ್ರದಿಂದ ಆ ಶವವನ್ನು ಕತ್ತರಿಸಿದನೆಂದೂ, ಆಗ ಅದು 108 ಭಾಗಗಳಾಗಿ ಭೂಮಿಯ ಮೇಲೆ ಅನೇಕ ಭಾಗಗಳಲ್ಲಿ ಬಿದ್ದಿತೆಂದೂ, ಆ ಶವದ ಭಾಗಗಳು ಬಿದ್ದ ಸ್ಥಳದಲ್ಲಿ ಶಕ್ತಿ ದೇವತೆಯ ಅವಿರ್ಭಾವವಾಗಿ ಅವುಗಳು ಶಕ್ತಿ ಪೀಠಗಳೆಂದು ಕರೆಯಲ್ಪಟ್ಟವೆಂದೂ ಉಕ್ತವಾಗಿದೆ. (ದೇವೀ ಭಾಗವತ-ಸಪ್ತಮ ಸ್ಕಂಧ). ತಾರಕಾಸುರನೆಂಬ ರಾಕ್ಷಸನ ಉಪಟಳವನ್ನು ತಾಳಲಾರದೆ, ಜಗದಂಬೆಯನ್ನು ದೇವತೆಗಳು ಪ್ರಾರ್ಥಿಸಿದಾಗ ದೇವಿಯು ಪ್ರಕಟಗೊಂಡು, ಸತೀದೇವಿಯು ಪರ್ವತರಾಜನ ಪುತ್ರಿಯಾಗಿ ಜನಿಸಿ, ಶಿವನನ್ನು ವಿವಾಹವಾಗಿ ಪುತ್ರನನ್ನು ಪಡೆದು, ಅವನಿಂದ ರಾಕ್ಷಸನ ಸಂಹಾರವಾಗಿ ಶಾಂತಿ ನೆಲೆಸುವುದಾಗಿ ತಿಳಿಸಿದಳು. ಸಂತೋಷಗೊಂಡ ಪರ್ವತರಾಜನು ದೇವಿಯನ್ನು ಸ್ತುತಿಸಲು, ಜಗದಂಬೆಯು ಭೂಮಿಯ ಮೇಲಿರುವ 108 ಶಕ್ತಿ ಪೀಠಗಳ ಮಹಿಮೆಯನ್ನು ವಿವರಿಸಿ, ಆ ಸ್ಥಳಗಳಲ್ಲಿ ದೇವಿಯನ್ನು ಪೂಜಿಸಿ ತೇಜೋವಂತನಾಗುವಂತೆ ತಿಳಿಸಿದಳು.

ಮತ್ಸ್ಯಪುರಾಣದಂತೆ, ಸತೀ ದೇವಿಯು ತನ್ನ ದೇಹತ್ಯಾಗ ಮಾಡುವ ಮೊದಲು ದಕ್ಷ ಪ್ರಜಾಪತಿಯನ್ನು ಭೂಲೋಕದಲ್ಲಿ ಜನಿಸುವಂತೆ ಶಪಿಸಿದಳೆಂದೂ ಆಗ ಆತನು ತಾನು ಮಾಡಿದ ತಪ್ಪಿನ ಅರಿವಾಗಿ ಪ್ರಾರ್ಥಿಸಲು, ಶಾಪವನ್ನು ಹಿಂದಕ್ಕೆ ತೆಗೆದುಕೊಳ್ಳಲು ಸಾಧ್ಯವಾಗದಿದ್ದುದರಿಂದ, ಭೂಲೋಕದಲ್ಲಿರುವ 108 ದೇವೀ ಪೀಠಗಳನ್ನು ವಿವರಿಸಿ, ಅಲ್ಲಿ ಆತನು ಭಕ್ತಿಯಿಂದ ಜಗದಂಬೆಯನ್ನು ಪೂಜಿಸಿ, ಶಾಪ ವಿಮೋಚನೆಯನ್ನು ಹೊಂದಿ ಕೃತಾರ್ಥನಾಗಬೇಕೆಂದು ತಿಳಿಸಿದಳು. ಪ್ರಾಯಶಃ ವಿಶಾಲ ಆರ್ಯಭಾರತ ದೇಶದ ಗಡಿಗಳ ರೇಖೆಯನ್ನು ಚಿತ್ರಿಸುವ ಪ್ರಯತ್ನವೇ ಈ ಕಲ್ಪನೆಗೆ ಕಾರಣವಿರಬಹುದೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಇಂತಹ ಕಾರಣಗಳು ಏನೇ ಇದ್ದರೂ, ಭಾರತೀಯರಿಗೆ ಈ ಸ್ಥಳಗಳು ಅತ್ಯಂತ ಪವಿತ್ರ ಕ್ಷೇತ್ರಗಳಾಗಿವೆ. ಶಕ್ತಿ ದೇವತೆಯ ಆರಾಧನೆ ಮಾಡುವವರಿಗೆ ಅತ್ಯಂತ ಮುಖ್ಯ ಸ್ಥಾನಗಳೂ ಆಗಿವೆ. ಈ ಪೀಠಗಳಲ್ಲಿ ತಪಸ್ಸನ್ನಾಚರಿಸಿ ಅನೇಕ ವಿಧವಾದ ಸಿದ್ಧಿಗಳನ್ನು ಪಡೆದವರು ಅನೇಕರು ಇಂದಿಗೂ ಇರುತ್ತಾರೆ. ಇಂದಿನ ಭಾರತದ ಹೊರಗಿರುವ ಪ್ರದೇಶಗಳಲ್ಲಿಯೂ ಶಕ್ತಿ ಪೀಠಗಳ ಉಲ್ಲೇಖವಿರುವುದರಿಂದ, ಆರ್ಯಭಾರತದ ವಿಶಾಲತೆಯನ್ನು ಊಹಿಸಲು ಅವಕಾಶವಿದೆ. ಉದಾಹರಣೆಗೆ, ಶ್ರೀ ಹಿಂಗುಳಾದೇವೀ ಪೀಠವು ಇಂದಿನ ಬಲೂಚಿಸ್ಥಾನದಲ್ಲಿದೆ. ಮತ್ತು ಸಿಂಹಿಕಾದೇವೀ ಪೀಠವು ಸಿಂಹಳದಲ್ಲಿದೆ. ಕೆಲವು ಪುರಾಣಗಳಲ್ಲಿ ನೂರೆಂಟು ಪೀಠಗಳೆಂದೂ ಮತ್ತೆ ಕೆಲವು ಕಡೆಗಳಲ್ಲಿ 52 ಪೀಠಗಳೆಂದೂ ಉಕ್ತವಾಗಿದೆ. ಮಹಾಸಂಕಲ್ಪದಲ್ಲಿ ಬಹು ಮುಖ್ಯವಾದ ಹದಿನೆಂಟು ಶಕ್ತಿ ಪೀಠಗಳನ್ನು ಸ್ಮರಿಸಿದೆ.

**1.** **ವಿಶಾಲಾಕ್ಷೀ ದೇವೀ ಪೀಠ** - ಕಾಶೀ ವಿಶ್ವನಾಥ, ಕಾಶೀ ವಿಶಾಲಾಕ್ಷೀ- ಈ ಹೆಸರುಗಳನ್ನು ಕೇಳದಿರುವವರು ಬಹಳ ಕಡಿಮೆ. ಪವಿತ್ರ ಗಂಗಾನದಿಯ ತೀರದಲ್ಲಿರುವ ಅತ್ಯಂತ ಪ್ರಸಿದ್ಧವಾದ, ಮೋಕ್ಷಪುರಿಗಳಲ್ಲಿ ಮುಖ್ಯವಾದ ಕಾಶೀ ಕ್ಷೇತ್ರದಲ್ಲಿರುವ ಈ ದೇವೀ ಪೀಠವು ಬಹಳ ಮಹಿಮೆಯುಳ್ಳದ್ದಾಗಿರುವುದು. ವಾರುಣ ಮತ್ತು ಅಸೀ ನದಿಗಳ

ನಡುವೆ ಇರುವ ಪ್ರದೇಶವಾಗಿರುವುದರಿಂದ ಈ ಕ್ಷೇತ್ರಕ್ಕೆ ವಾರಣಾಸಿಯೆಂದೂ ಹೆಸರಿದೆ. ಈ ಕ್ಷೇತ್ರದಲ್ಲಿ ಕೆಲವರು ವಿಶಾಲಾಕ್ಷೀ ದೇವೀ ಸನ್ನಿಧಿಯನ್ನು , ಮತ್ತೂ ಕೆಲವರು ಅನ್ನಪೂರ್ಣಾದೇವಿಯ ಸನ್ನಿಧಿಯನ್ನು ಶಕ್ತಿಪೀಠಕ್ಕೆ ಅನ್ವಯಿಸುತ್ತಾರೆ. ಈಗಲೂ ಶ್ರೀ ಅನ್ನಪೂರ್ಣಾದೇವಿಯ ಸನ್ನಿಧಿಯಲ್ಲಿ ಸತತವಾಗಿ ಸಪ್ತಶತೀ ಪಾರಾಯಣವು ನಡೆಯುತ್ತಿರುತ್ತದೆ. ಸತೀದೇವಿಯ ಎಡದ ಹಸ್ತವು ಈ ಸ್ಥಳದಲ್ಲಿ ಬಿದ್ದಿತ್ತೆಂದು ಹೇಳಲ್ಪಟ್ಟಿದೆ.

2. ಮೀನಾಕ್ಷೀ ದೇವೀ ಪೀಠ - ಈ ಪೀಠವು ತಮಿಳುನಾಡಿನ ಮಧುರೈಯೆಂಬ ಕ್ಷೇತ್ರದಲ್ಲಿರುವ ಮೀನಾಕ್ಷಿಸುಂದರೇಶ್ವರ ದೇವಾಲಯದಲ್ಲಿದೆ. ಈ ಕ್ಷೇತ್ರಕ್ಕೆ 'ತಿರು ಆಲವಾಯ್' ಎಂಬ ಹಳೆಯ ಹೆಸರು ಪ್ರಸಿದ್ಧವು. ಇದು ಪಾಂಡ್ಯ ರಾಜರಿಂದ ಪೋಷಿತವಾಗಿದ್ದ ಕ್ಷೇತ್ರ.

3. ಕಾಮಾಕ್ಷೀದೇವೀ ಪೀಠ - ಭಾರತದಲ್ಲಿ ಈ ಪೀಠವನ್ನು ಎರಡು ಸ್ಥಳಗಳಲ್ಲಿ ಗುರುತಿಸಿದ್ದಾರೆ.
(ಅ) ಮದ್ರಾಸಿಗೆ 40 ಮೈಲು ಹತ್ತಿರದಲ್ಲಿರುವ ಪಲ್ಲವ ರಾಜರುಗಳ ರಾಜಧಾನಿಯಾಗಿದ್ದ ಮತ್ತು ಸಪ್ತ ಮೋಕ್ಷಪುರಿಗಳಲ್ಲಿ ದಕ್ಷಿಣ ಭಾರತದ ಏಕೈಕ ಪುಣ್ಯಪುರಿಯೆನಿಸಿರುವ ಕಾಂಚೀಪುರ ಎಂಬ ಕ್ಷೇತ್ರದಲ್ಲಿ, ಶ್ರೀ ಕಾಮಾಕ್ಷೀದೇವಿಯ ಮಂದಿರದಲ್ಲಿ ಪ್ರತಿಷ್ಠಿತವಾಗಿರುವ ಶಕ್ತಿಪೀಠವು. ಆಚಾರ್ಯ ಶಂಕರರಿಂದ ಪೂಜೆಗೊಂಡಿದ್ದ ಸ್ಥಳವು. (ನೋಡಿ - ಸಪ್ತ ಮೋಕ್ಷಪುರಿಗಳು).
(ಆ) ಇದೇ ಪೀಠವು ಅಸ್ಸಾಂ ರಾಜ್ಯದ ಗೌಹತಿಯೆಂಬ ಸ್ಥಳದಿಂದ ಕೇವಲ ಮೂರು ಮೈಲು ಹತ್ತಿರದಲ್ಲಿರುವ ಕಾಮಾಖ್ಯ ಮಂದಿರದಲ್ಲಿರುವ ದೇವಿಯ ಪೀಠವೆಂದೂ ಸಹ ಹೇಳಲ್ಪಟ್ಟಿದೆ. ಈ ಪೀಠವು ಕಾಳಿಕಾಪುರಾಣದಲ್ಲಿ ವರ್ಣಿಸಿರುವಂತೆ ಇದೆ. ಈ ಮಂದಿರವು ಇರುವ ಬೆಟ್ಟ ಪ್ರದೇಶಕ್ಕೆ ನೀಲಾಚಲ ಪರ್ವತವೆಂಬ ಹೆಸರು ರೂಢಿಯಲ್ಲಿದೆ. ಅಸ್ಸಾಂ ದೇಶವನ್ನು ಹಿಂದೆ ಕಾಮರೂಪವೆಂದು ಕರೆಯುತ್ತಿದ್ದರು. ಈ ದೇಶದ ಎಲ್ಲೆಯು ಯೋಗಿನೀ ತಂತ್ರದಲ್ಲಿ ವರ್ಣಿಸಿರುವಂತೆ ನೇಪಾಳದಲ್ಲಿರುವ ಕಾಂಚನ ಪರ್ವತದಿಂದ ಬ್ರಹ್ಮಪುತ್ರಾ ನದಿಗೆ ಲಕ್ಷಾನದೀ ಸೇರುವ ಸ್ಥಳದವರೆಗೂ ಉತ್ತರದಲ್ಲಿ ಕಂಜಗಿರಿ ಬೆಟ್ಟದಿಂದ, ದಕ್ಷಿಣದಲ್ಲಿ ಕರತೋಯಾ ನದಿಯವರೆಗೂ ಇರುವ ಪ್ರದೇಶವಾಗಿದೆ.

4. ಸಿಂಹಿಕಾದೇವೀ ಪೀಠ : ಈ ಪೀಠವು ಸಿಂಹಳ ದೇಶದಲ್ಲಿದೆಯೆಂದು ಹೇಳಲ್ಪಟ್ಟಿದೆ. ದೇವೀ ಭಾಗವತದಲ್ಲಿ ಕೃತಾಶೌಚವೆಂಬ ಸ್ಥಳದಲ್ಲಿದೆಯೆಂದು ಉಲ್ಲೇಖಿಸಲ್ಪಟ್ಟಿದೆ.

5. ಶಂಕರೀದೇವೀ ಪೀಠ - ಉಜ್ಜಯಿನಿಯಲ್ಲಿರುವ ಪ್ರಸಿದ್ಧ ಜ್ಯೋತಿರ್ಲಿಂಗೇಶ್ವರನಾದ ಮಹಾಕಾಲೇಶ್ವರ ಸ್ವಾಮಿ ದೇವಾಲಯದಲ್ಲಿರುವ ಮಹಾಕಾಲೇಶ್ವರೀ ದೇವೀ ಸನ್ನಿಧಿಯೇ ಈ ಪೀಠವೆಂದು ಹೇಳುತ್ತಾರೆ.

6. ಕುಬ್ಜಿಕಾದೇವೀ ಪೀಠ - ಉತ್ತರ ಪ್ರದೇಶ ರಾಜ್ಯದ ಫರೂಕಾಬಾದ್ ಜಿಲ್ಲೆಯಲ್ಲಿ



ಹರಿಯುತ್ತಿರುವ ಕಾಲೀನದೀ ತೀರದಲ್ಲಿರುವ ಕನೌಜ್ ಪಟ್ಟಣದಲ್ಲಿದೆ. ಹಿಂದೆ ಈ ಪ್ರದೇಶವು ಕಾನ್ಯಕುಬ್ಜವೆಂಬ ಹೆಸರಿನಿಂದ ಪ್ರಸಿದ್ಧವಾಗಿದ್ದಿತು. ಈ ಶಕ್ತಿ ಪೀಠದಲ್ಲಿ "ಗೌರೀ ದೇವೀ" ಎಂಬ ಹೆಸರಿನಿಂದ ಶಕ್ತಿ ದೇವತೆಯು ಭಕ್ತರನ್ನು ಅನುಗ್ರಹಿಸುತ್ತಿರುವಳು.. ಈ ಪೀಠವು ಗಂಗಾ ಮತ್ತು ಯಮುನಾ ನದಿಗಳ ನಡುವಿನ ಪ್ರದೇಶದಲ್ಲಿರುವುದರಿಂದ ಬಹಳ ಪವಿತ್ರವಾದ ಕ್ಷೇತ್ರವೆನಿಸಿದೆ. ಈ ಸ್ಥಳವನ್ನು ಮಹೋದಯ, ಗಾಧೀಪುರ ಎಂದೂ ಸಹ ಕರೆಯುತ್ತಾರೆ. ಹಿಂದೂ ಸಂಸ್ಕೃತಿಯು ಉಗಮವಾದ ಸ್ಥಳವೆಂದು ಹೇಳುತ್ತಾರೆ.

7. ಮಹಾಲಕ್ಷ್ಮೀ ಪೀಠ - ಈ ಪೀಠವು ಮಹಾರಾಷ್ಟ್ರ ರಾಜ್ಯದಲ್ಲಿನ ಕೊಲ್ಹಾಪುರವೆಂಬ ನಗರದಲ್ಲಿದೆ. ಇದನ್ನು ಪುರಾಣಕಾಲದಲ್ಲಿ ಕರವೀರಪುರವೆಂದು ಕರೆಯುತ್ತಿದ್ದರು. ಇದು ಪೂನಾ-ಬೆಂಗಳೂರು ಮಾರ್ಗದಲ್ಲಿ ಪೂನಾದಿಂದ 150 ಮೈಲು ದೂರದಲ್ಲಿದೆ. ರೈಲ್ವೆ ನಿಲ್ದಾಣವನ್ನು ಹೊಂದಿರುವ ಈ ಕ್ಷೇತ್ರಕ್ಕೆ ಅಸಂಖ್ಯಾತ ಭಕ್ತಾದಿಗಳು ಬರುತ್ತಾರೆ. ಸಿದ್ಧಪೀಠವೆಂದು ಪ್ರಸಿದ್ಧಿಯಾಗಿದೆ. ಇಲ್ಲಿ ಶಿವ, ಭದ್ರಾ, ಭೋಗವತೀ, ಕುಂಭಾ, ಸರಸ್ವತೀ ನದಿಗಳಿಂದ ಕೂಡಿದ ಪವಿತ್ರ ಪಂಚಗಂಗಾ ನದಿಯು ಹರಿಯುತ್ತಿದೆ. ಭೃಗು ಮಹರ್ಷಿಗಳ ಕಾರಣದಿಂದ ಕುಪಿತಳಾದ ಮಹಾಲಕ್ಷ್ಮಿಯು ವೈಕುಂಠವನ್ನು ತೊರೆದು ಇಲ್ಲಿ ನೆಲಸಿದಳೆಂದು ಪ್ರತೀತಿ.

8. ಮಹಾದೇವೀಪೀಠ - ಈ ಶಕ್ತಿ ಪೀಠವನ್ನು ಮೂರು ಸ್ಥಳಗಳಲ್ಲಿ ಗುರುತಿಸಿದ್ದಾರೆ.
(ಅ) ಜಾಲಂಧರ ಪೀಠ - ಇದು ಶುತುದ್ರುನದಿಯ (ಇಂದಿನ ಪಂಜಾಬ್ ರಾಜ್ಯದಲ್ಲಿರುವ ಸಟ್ಲೆಜ್ ನದಿ) ಪಶ್ಚಿಮ ದಂಡೆಯಲ್ಲಿ ಜಾಲಂಧರವೆಂಬ ಸ್ಥಳದಲ್ಲಿದೆ.
(ಆ) ಗುಜರಾತ್ ರಾಜ್ಯದ ಅರಾವಳೀ ಬೆಟ್ಟಗಳ ಶ್ರೇಣಿಯಲ್ಲಿ ಪ್ರಸಿದ್ಧವಾಗಿರುವ ಅರ್ಬುತವೆಂಬ ಪರ್ವತ, ಎಂದರೆ ಇಂದಿನ 'ಮೌಂಟ್ ಅಬೂ' ಎಂಬ ಪ್ರದೇಶದ ಬಳಿಯಿರುವ ಅರಸೂರು ಎಂಬ ಬೆಟ್ಟದ ಮೇಲೆ ವಿರಾಜಿಸುತ್ತಿರುವ ಅಂಬಿಕಾ ದೇವಿಯ ಆಲಯದಲ್ಲಿದೆ. ಸರಸ್ವತೀ ನದಿಯು ಉಗಮವಾಗುವ ಸ್ಥಳಕ್ಕೆ ಹತ್ತಿರದಲ್ಲಿರುವ ಕ್ಷೇತ್ರ. ಈ ಕ್ಷೇತ್ರದಲ್ಲಿಯ ವಿಶೇಷವೆಂದರೆ, ಯಾವುದೇ ಪ್ರತಿಮೆಯನ್ನು ಸ್ಥಾಪಿಸದೇ, ಶ್ರೀಯಂತ್ರವನ್ನು ಪ್ರತಿಷ್ಠಿಸಿರುತ್ತಾರೆ.
(ಇ) ಉತ್ತರ ಗುಜರಾತ್‌ನಲ್ಲಿರುವ ಚಂಪಕ್‌ವೇರ್ ಎಂಬ ಸ್ಥಳದ ಹತ್ತಿರ ಇರುವ ಕಾಳೀ ದೇವಾಲಯ.

9. ಮಹಾಕಾಳೀ ಪೀಠ - ಈ ಶಕ್ತಿ ಪೀಠವನ್ನು ಎರಡು ಸ್ಥಳಗಳಲ್ಲಿ ಗುರುತಿಸಿರುವರು.
(ಅ) ಕಲ್ಕತ್ತಾ ನಗರದಲ್ಲಿರುವ ಕಾಳೀಘಾಟ್‌ದೇವೀ ಮಂದಿರ. ಹಿಂದೆ ಇದನ್ನು "ಕಾಲೀಕರ್ತಾ" ಎಂದು ಕರೆಯುತ್ತಿದ್ದು, ಕಾಲಕ್ರಮದಲ್ಲಿ "ಕಲ್ಕತ್ತಾ" ಎಂದಾಯಿತೆಂದು ಹೇಳುವರು. ಹೌರಾ ರೈಲ್ವೆ ನಿಲ್ದಾಣದಿಂದ 5 ಮೈಲು ದೂರದಲ್ಲಿ ಗಂಗಾನದೀ ತೀರದಲ್ಲಿದೆ.

shrinath.udupa@gmail.com

(ಆ) ಬರೋಡ ನಗರದಿಂದ 29 ಮೈಲು ದೂರದಲ್ಲಿರುವ ಪಾವಗಡ್ ಎಂಬ ಸ್ಥಳ. ಇಲ್ಲಿರುವ ಪಾವಕಾಚಲವೆಂಬ ಬೆಟ್ಟದ ಮೇಲೆ ಮಹಾಕಾಳೀ ಮಂದಿರವಿದೆ. ಸ್ಕಾಂದ ಪುರಾಣದ ಪಾವಕಾಚಲ ಮಹಾತ್ಮ್ಯೆಯಲ್ಲಿ ಇದರ ವಿವರಣೆಯಿದೆ.

10. ಪಾರ್ವತೀ ಪೀಠ - ಇದು ಹಿಮಾಲಯದಲ್ಲಿರುವ ಶಿವಸನ್ನಿಧಾನವೆಂಬ ಸ್ಥಳದಲ್ಲಿರುವುದೆಂದು ದೇವೀ ಭಾಗವತದಲ್ಲಿ ಹೇಳಲ್ಪಟ್ಟಿದೆ. ಗೌರೀ ಕುಂಡದ ಬಳಿ ಇರುವ ದೇವಾಲಯವೆಂದು ಇನ್ನು ಕೆಲವರು ಗುರುತಿಸಿದ್ದಾರೆ. ಪೂನಾ ನಗರದಲ್ಲಿರುವ ಪಾರ್ವತೀ ಮಂದಿರವೆಂದು ಮಹಾರಾಷ್ಟ್ರ ರಾಜ್ಯದಲ್ಲಿರುವ ಅನೇಕ ಭಕ್ತಾದಿಗಳು ಮಾನ್ಯ ಮಾಡಿರುತ್ತಾರೆ.

11. ಸುಪ್ರಭಾದೇವೀ ಪೀಠ - ಸರಸ್ವತೀ ನದಿಯ ಏಳು ಶಾಖೆಗಳಲ್ಲೊಂದು ಸುಪ್ರಭಾ ಎಂದು ಪ್ರಸಿದ್ಧವು. ಈ ದೇವೀ ಪೀಠವು ಇದರ ಬಳಿಯಿದೆ. ಸರಸ್ವತೀ ನದಿಯು ಸುಪ್ರಭಾ, ಕಾಂಚನಾಕ್ಷೀ, ವಿಶಾಲಾ, ಮನೋರಮಾ, ಓಘವತೀ, ಸುರೇಣು ಮತ್ತು ವಿಮಲೋದಕಗಳೆಂಬ ಏಳು ಶಾಖೆಗಳಾಗಿ ಹರಿಯುವ ಸ್ಥಳಕ್ಕೆ ಸಪ್ತ ಸಾರಸ್ವತವೆಂಬ ಹೆಸರಿದೆ.

12. ಭ್ರಮರಾಂಬಿಕಾದೇವೀ ಪೀಠ - ಆಂಧ್ರ ಪ್ರದೇಶದ ಕರ್ನೂಲು ಜಿಲ್ಲೆಯ ಶ್ರೀಶೈಲ ಕ್ಷೇತ್ರದಲ್ಲಿ ಅಂದರೆ ಕೃಷ್ಣಾನದಿಯ ದಕ್ಷಿಣ ದಂಡೆಯಲ್ಲಿ ಇರುವ ಋಷಭಗಿರಿ ಎಂಬ ಬೆಟ್ಟದ ಮೇಲೆ ವಿರಾಜಿಸುತ್ತಿರುವ 'ಶ್ರೀ ಮಲ್ಲಿಕಾರ್ಜುನ' ಎಂಬ ಹೆಸರಿನ ಜ್ಯೋತಿರ್ಲಿಂಗವಿರುವ ಮಂದಿರದಲ್ಲಿ ಈ ಪೀಠವು ಇರುವುದು.

13. ವಿಂಧ್ಯವಾಸಿನೀ ಪೀಠ - ವಿಂಧ್ಯ ಪರ್ವತದಲ್ಲಿರುವ ಅತ್ಯಂತ ಪ್ರಸಿದ್ಧವಾದ ಪೀಠವು. ದೇವೀ ಮಹಾತ್ಮ್ಯೆಯಲ್ಲಿ ಸ್ತುತಿಸಿರುವ ಮಹಾಕಾಳೀ, ಮಹಾಲಕ್ಷ್ಮೀ ಮತ್ತು ಮಹಾಸರಸ್ವತೀ ಎಂಬ ಮೂವರು ದೇವಿಯರು ಇಲ್ಲಿಯೇ ಪ್ರತಿಷ್ಠಿತರಾಗಿ ಈ ಕ್ಷೇತ್ರದಲ್ಲಿ ವಿಂಧ್ಯವಾಸಿನೀ, ಮಹಾಕಾಳೀ ಮತ್ತು ಅಷ್ಟಭುಜೀ ಎಂಬ ಹೆಸರುಗಳಿಂದ ಪೂಜೆಗಳು ನಿರಂತರವಾಗಿ ನಡೆಯುತ್ತಿವೆ. ಉತ್ತರ ಪ್ರದೇಶ ರಾಜ್ಯದಲ್ಲಿ ವಾರಣಾಸಿಗೆ ಹತ್ತಿರದಲ್ಲಿರುವ ಮಿರ್ಜಾಪುರ್ ಎಂಬ ಸ್ಥಳದಿಂದ ನಾಲ್ಕು ಮೈಲು ದೂರದಲ್ಲಿ ವಿಂಧ್ಯಾಚಲವೆಂಬ ರೈಲುನಿಲ್ದಾಣವಿದೆ. ಈ ಮಂದಿರವು ಇಲ್ಲಿಯೇ ಇರುವುದು. ಈ ದೇವಿಯನ್ನು ಕೌಶಿಕೀ ದೇವೀಯೆಂದೂ, ಭಗವತೀಯೆಂದೂ ಕರೆಯುವರು.

14. ಯೋಗಿನೀ ಪೀಠ - 1) ಪಂಜಾಬ್ ರಾಜ್ಯದ, ಯೋಗಿನೀಪುರವೆಂಬ ಸ್ಥಳದಲ್ಲಿದೆ. 2) ಒರಿಸ್ಸಾ ರಾಜ್ಯದ ಭುವನೇಶ್ವರವೆಂಬ ಸ್ಥಳವು ಪುರಾಣ ಕಾಲದ ಏಕಾಮ್ರಕಾನನನೆಂಬ ಪವಿತ್ರ ಸ್ಥಳವೆಂದು ಹೇಳಲ್ಪಟ್ಟಿದೆ. ಇಲ್ಲಿ ದೇವೀಪಾದಹರವೆಂಬ ಹೆಸರಿನ ಪ್ರಸಿದ್ಧವಾದ ಸರೋವರವಿದ್ದು, ಅದರ ಸುತ್ತಲೂ 108 ಯೋಗಿನೀ ದೇವಿಯರ ಮಂದಿರಗಳಿವೆ. ಇದೂ ಯೋಗಿನೀ ಪೀಠವೆಂದೇ ಪ್ರಸಿದ್ಧವು.



15. ಹಿಮರೂಪಿಣೀ : ಹೈಮವತೀ ಎಂದೂ ಸಹಾ ಹೇಳುತ್ತಾರೆ. ಹಿಮಾಚಲ ಪ್ರಾಂತ್ಯದಲ್ಲಿ ಈ ಶಕ್ತಿ ಪೀಠವಿರುವುದು.

16. ಮಾಣಿಕ್ಯದೇವೀ ಪೀಠ - ಶ್ರೀ ಲಲಿತಾಸಹಸ್ರನಾಮದಲ್ಲಿ 'ಮಾಣಿಕ್ಯಮಕುಟಾಕಾರ' ಎಂಬ ಶಬ್ದವಿದೆ. ಮತ್ಸ್ಯ ಪುರಾಣದಲ್ಲಿ ದೇವೀಪೀಠಗಳನ್ನು ವರ್ಣಿಸುವಾಗ 'ಮರ್ಕೋಟೇ ಮಕುಟೇಶ್ವರೀ' (ಮರ್ಕೋಟದಲ್ಲಿರುವ ಮಕುಟೇಶ್ವರೀ) ಎಂಬುದಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಮಾಣಿಕ್ಯದೇವೀ ಪೀಠವೆಂಬುದು 'ಮರ್ಕೋಟ' ಎಂಬ ಪುಣ್ಯ ಸ್ಥಳದಲ್ಲಿದ್ದಿರಬಹುದು.

17. ಕಾದ್ರವೇಯೀ ಪೀಠ - ಪಾತಾಳ ಲೋಕದಲ್ಲಿ ಇರುವ ಪೀಠವೆಂದು ಹೇಳಲ್ಪಟ್ಟಿದೆ. ಮಾನಸ ದೇವೀ ಪೀಠವೂ ಇದೇ ಆಗಿದೆ ಎಂದು ಕೆಲವರು ಹೇಳುತ್ತಾರೆ.

18. ಪೂರ್ಣಿಕಾದೇವೀ ಪೀಠ - 1.ಅಲ್ಮೋರಾ ಜಿಲ್ಲೆಯಲ್ಲಿ ಟನಕ್‌ಪುರವೆಂಬ ಸ್ಥಳದಿಂದ 18 ಮೈಲು ದೂರದಲ್ಲಿರುವ ಶಾರದಾನದೀ ತೀರದಲ್ಲಿ ನೇಪಾಳ ದೇಶದ ಸರಹದ್ದಿನ ಬಳಿ ಹಿಮಾಲಯದ ತಪ್ಪಲಿನಲ್ಲಿ ಇದೆ. ಅತ್ಯಂತ ರಮಣೀಯವಾದ ಪ್ರಕೃತಿ ಸೌಂದರ್ಯದಿಂದ ಕೂಡಿದ ಪರ್ವತದ ಮೇಲಿದೆ. ಇಲ್ಲಿ ನವರಾತ್ರಿ ಉತ್ಸವವು ಅತ್ಯಂತ ವೈಭವದಿಂದ ನಡೆಯುವುದು. ಸ್ತ್ರೀಯರು ರಜಸ್ವಲೆಯರಾಗಿರುವಾಗ ಅಥವಾ ಪುರುಷರು ಆಶೌಚದಿಂದಿರುವಾಗ ಈ ತಪ್ಪಲಿಗೆ ಹೋಗಬಾರದೆಂದು ನಿಯಮವಿದೆ. ಇದನ್ನು ಪೂರ್ಣಗಿರಿ ಅಥವಾ ಪುಣ್ಯಗಿರಿ ಎಂಬ ಹೆಸರಿನಿಂದಲೂ ಕರೆಯುತ್ತಾರೆ.

2. ಜಾಲಂಧರದಿಂದ ಜ್ವಾಲಾಮುಖಿ ಕ್ಷೇತ್ರಕ್ಕೆ ಹೋಗುವ ದಾರಿಯಲ್ಲಿರುವ ಹೋಶಿಯಾರ್‌ಪುರದಿಂದ 30 ಮೈಲು ದೂರದಲ್ಲಿ ಚಿಂತಾಪೂರ್ಣಿಕಾ ದೇವೀ ಪೀಠವಿದೆ. ಈ ಪೀಠದ ಸುತ್ತಲಿನ ಪ್ರದೇಶದಲ್ಲಿ ಜ್ವಾಲಾಮುಖೀ ಮತ್ತು ನಗರ ಕೋಟೆಗಳೆಂಬ ಶಕ್ತಿ ಪೀಠಗಳೂ ಇದ್ದು, ಇವುಗಳು ಶಕ್ತಿ ತ್ರಿಕೋನ ಪೀಠಗಳೆಂದು ಕರೆಯಲ್ಪಟ್ಟಿವೆ.

## ೧೬-೧೭ ಅಷ್ಟಾಂಗಯೋಗನಿಷ್ಠಾಗರಿಷ್ಠ ಅನೇಕ ಮುನಿರಾಜವಿರಾಜಿತೇ

ಭಾರತ ದೇಶದಲ್ಲಿ ಮುನಿಗಳೆಂದರೆ ಸಾಮಾನ್ಯ ಸಮಾಜ ಸುಧಾರಕರಲ್ಲ. ಇವರು ತಮ್ಮ ಆಯುಷ್ಯವನ್ನು ಪೂರ್ತಿಯಾಗಿ ಪರಮಾತ್ಮನ ಚಿಂತೆಗಾಗಿಯೇ ಮೀಸಲಾಗಿಟ್ಟವರು. ಪ್ರಾಪಂಚಿಕ ವಿಷಯಗಳಿಂದ ದೂರವಾಗಿ, ಆಳುವ ಅರಸರು ಮತ್ತು ಸಾಮಾನ್ಯ ಪ್ರಜೆಗಳನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸುತ್ತಾ, ಮಿಕ್ಕ ವೇಳೆಯಲ್ಲಿ ಅಂತರ್ಮುಖರಾಗಿ ಆತ್ಮಚಿಂತನೆಯನ್ನು ಮಾಡುತ್ತಾ, ಸಕಲವನ್ನು ಪರಮಾತ್ಮನಲ್ಲಿ ಅರ್ಪಿಸಿ, ವಿರಕ್ತರಾಗಿ ಅಷ್ಟಾಂಗ ಯೋಗಗಳನ್ನು ಅಭ್ಯಾಸಮಾಡುತ್ತಾ, ಸಾತ್ವಿಕ ಗುಣಗಳಿಂದ ಅಲಂಕೃತರಾಗಿ ದೇವರ ಪ್ರತಿರೂಪವಾಗಿ ಇರುವವರು. ಮುನಿಗಳು ಗುರುವಿನ ರೂಪದಲ್ಲಿರುವ ಪರಮಾತ್ಮನೆಂದೇ ಭಾರತೀಯರ ನಂಬಿಕೆ. ಮಹಾ ಮಹಾ ಚಕ್ರವರ್ತಿಗಳು ಮುನಿಗಳನ್ನು ಗೌರವಿಸಿ, ಭಕ್ತಿಯಿಂದ ಅವರ ಆದೇಶಗಳನ್ನು

shrinath.udupa@gmail.com

ಶಿರಸಾ ವಹಿಸಿ ನಡೆಸುತ್ತಿದ್ದರೆಂಬುದು ಪುರಾಣಗಳ ಪ್ರಧಾನ ವಿಷಯವಾಗಿದೆ. ಮುನಿಗಳು ವಾಸಿಸುವ ಸ್ಥಳವೇ ಪುಣ್ಯತೀರ್ಥಸ್ಥಾನವೆಂದು ಹೇಳಲ್ಪಟ್ಟಿದೆ. ಮುನಿಗಳು ಪರಮಾತ್ಮನ ಶಕ್ತಿಯು ಸುಪ್ತವಾಗಿರುವ ಅನೇಕ ಸ್ಥಾನಗಳನ್ನು, ತಮ್ಮ ದಿವ್ಯ ಧ್ಯಾನದಿಂದ ಅರಿತು, ಅಂತಹ ಸ್ಥಳಗಳಲ್ಲಿ ತಪಸ್ಸನ್ನಾಚರಿಸಿ, ದಿವ್ಯಶಕ್ತಿಗಳನ್ನು ಆವಾಹಿಸಿ ಪೂಜಿಸುವುದರ ಮೂಲಕ ಪವಿತ್ರ ಕ್ಷೇತ್ರಗಳನ್ನಾಗಿ ಮಾಡಿ, ಜನರು ಅಲ್ಲಿಗೆ ಬಂದು ಪುಣ್ಯಕರ್ಮಗಳನ್ನು ಆಚರಿಸಿ, ಪವಿತ್ರರಾಗಲು ಅವಕಾಶಮಾಡಿಕೊಟ್ಟಿರುತ್ತಾರೆ. ಇಂದು ನಾವು ಭಕ್ತಿಯಿಂದ ಯಾತ್ರೆ ಮಾಡುವ ತೀರ್ಥಕ್ಷೇತ್ರಗಳು , ಅಂದು ಅನೇಕ ಮುನಿಗಳು ತಪಸ್ಸು ಮಾಡಿದ ಸ್ಥಳಗಳೇ ಆಗಿವೆ. ಭಾರತದಲ್ಲಿ ಇಂತಹ ನಂಬಿಕೆಯಿರುವುದರಿಂದಲೇ ಇಂದಿಗೂ ಅನೇಕ ಜನ ಸಾಧಕರೂ, ಸಂನ್ಯಾಸಿಗಳೂ, ಮುನಿಗಳೂ, ಸಾಧು ಸಂತರೂ ಪ್ರಾಪಂಚಿಕ ವಿಚಾರಗಳಿಗೆ ಮಹತ್ತ್ವ ಕೊಡದೇ, ಈ ಪುಣ್ಯ ಕ್ಷೇತ್ರವಾಸಿಗಳಾಗಿ ತಮ್ಮ ತಮ್ಮ ನಿಷ್ಠೆಯಲ್ಲಿ ಪ್ರವೃತ್ತರಾಗಿ ತಪಸ್ಸನ್ನು ಮಾಡುತ್ತಿರುವರು. ಒಂದು ದೇಶದ ಆಡಳಿತ ಪ್ರಭುಗಳು ಜನರ ಇಂದಿನ ಜೀವನ ಸಮಸ್ಯೆಗಳನ್ನು ಬಗೆಹರಿಸಲು ಪ್ರಯತ್ನಿಸಬಹುದು, ಆದರೆ ಮುನಿಗಳು ಜನರನ್ನು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡಿ, ಅವರಿಗೆ ಒದಗಬಹುದಾದ ಮುಂದಿನ ಜನ್ಮಗಳೂ ಸಹ ಪವಿತ್ರವಾಗಲು ಕಾರಣರಾಗುತ್ತಾರೆ. ಈ ರಹಸ್ಯವನ್ನು ಅರಿತೇ ಹಿಂದೆ ಈ ದೇಶದಲ್ಲಿ ಅರಸರುಗಳು ಋಷಿ ಮುನಿಗಳಿಗೆ, ಯಾವ ಚಿಂತೆಯೂ ಬರದಂತೆ ನೋಡಿ ಕೊಳ್ಳುತ್ತಿದ್ದು ಅವರು ಮಾಡುವ ಸಾತ್ವಿಕ ತಪಸ್ಸುಗಳಿಗೆ , ಯಾವ ಅಡಚಣೆಯೂ ಉಂಟಾಗದಂತೆ ಎಚ್ಚರ ವಹಿಸುತ್ತಿದ್ದರು. ಈ ಕಾರಣದಿಂದಲೇ ದೇಶವು ಅಂದು ಶಾಂತಿ ಸಂಪದ್ಭರಿತವಾಗಿತ್ತು. (ನೋಡಿ ಷೋಡಶ ಭೂಪಾಲರು). ಉದಾಹರಣೆಯಾಗಿ ವಸಿಷ್ಠ ಮಹರ್ಷಿಗಳು ಸೂರ್ಯವಂಶದ ದೊರೆಗಳಿಗೆ ಮಾರ್ಗದರ್ಶನ ಮಾಡುತ್ತಿದ್ದು, ದೊರೆಗಳು ತಮ್ಮ ಪದವಿಗಳನ್ನು ಮರೆತು, ಯಾವ ರೀತಿ ಮಹರ್ಷಿಗಳನ್ನು ಗೌರವಿಸುತ್ತಿದ್ದರೆಂಬುದಕ್ಕೆ ಪುರಾಣಗಳಲ್ಲಿ ಅನೇಕ ಪ್ರಕರಣಗಳು ಉಕ್ತವಾಗಿವೆ. ಪೂಜ್ಯ ಶ್ರೀ ವಿದ್ಯಾರಣ್ಯರ ಅನುಗ್ರಹ ಮತ್ತು ಮಾರ್ಗದರ್ಶನದಲ್ಲಿ ಸ್ಥಾಪಿತಗೊಂಡ ವಿಜಯನಗರ ಸಾಮ್ರಾಜ್ಯ ಇದಕ್ಕೊಂದು ನಿದರ್ಶನ. ಮಹಾ ಸಂಕಲ್ಪದಲ್ಲಿ ಇಂತಹ ಕೆಲವು ಮುನಿಗಳನ್ನು ಸ್ಮರಿಸಿ, ಈ ಸೃಷ್ಟಿಯು ಇಂತಹ ಮುನಿಗಳಿಂದ ವಿರಾಜಿತವಾಗಿದೆಯೆಂದು ವರ್ಣಿಸಿದೆ. ಅಸುರರ ಮನದಲ್ಲಿ ಭೀತಿ ಹುಟ್ಟಿಸುವಂತಹ, ರಾಜರ ಮನಸ್ಸಿನಲ್ಲಿ ದೈನ್ಯವನ್ನುಂಟು ಮಾಡುವ, ಪ್ರಜೆಗಳ ಮನಸ್ಸಿಗೆ ಸಾಂತ್ವನ ಕೊಡುವ ಮುನಿಗಳ ಮಹಿಮೆಯು ವಿವರಣೆಗೆ ಸಿಗುವುದಿಲ್ಲ. ಆದರೂ ಪುರಾಣೇತಿಹಾಸಗಳನ್ನು ಅಭ್ಯಾಸಮಾಡಿದಾಗ ಸ್ವಲ್ಪ ಮಟ್ಟಿಗೆ ತಿಳಿಯುವುದು ಸಾಧ್ಯ. ಮುನಿಗಳು ತಪಶ್ಶಕ್ತಿಯಿಂದ ಸರ್ವ ಸಿದ್ಧಿಗಳನ್ನು ಪಡೆದವರಾಗಿ ತ್ರಿಲೋಕಗಳಲ್ಲೂ ಸಂಚರಿಸುವ ಸಾಮರ್ಥ್ಯವನ್ನು ಹೊಂದಿದ್ದರೆಂದು ತಿಳಿದು ಬರುತ್ತದೆ. ದೇವತೆಗಳೂ ಸಹ ಮುನಿಗಳಲ್ಲಿ ವಿನೀತ ಭಾವವನ್ನು ಹೊಂದಿರುತ್ತಿದ್ದರು. ಈ ಪವಿತ್ರ ಜೀವಿಗಳ ಸ್ಮರಣೆಗೆ ಬೇಕಾಗುವಷ್ಟು ಮಾತ್ರ ವಿವರಣೆ ನೀಡಲು ಇಲ್ಲಿ ಪ್ರಯತ್ನಿಸಲಾಗಿದೆ. ಮಹಾಸಂಕಲ್ಪದಲ್ಲಿ ಈ ಮುನಿಗಳನ್ನು "ಅಷ್ಟಾಂಗ ಯೋಗನಿಷ್ಠಾಗರಿಷ್ಠ ಮುನಿರಾಜ" ರೆಂದು ಕರೆದಿದೆ. ಅಷ್ಟಾಂಗ ಯೋಗವೆಂದರೆ



shrinath.udupa@gmail.com

ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ನಿರೂಪಿಸಲ್ಪಟ್ಟ ಅಧ್ಯಾತ್ಮ ಯೋಗ ಮಾರ್ಗವು . ಪತಂಜಲಿ ಮಹರ್ಷಿಗಳು ಇದನ್ನು ವಿಶದವಾಗಿ ತಮ್ಮ ಪ್ರಮುಖವಾದ ಎಂಟು ಸೂತ್ರಗಳಲ್ಲಿ ವಿವರಿಸಿರುತ್ತಾರೆ. ಈ ಮಾರ್ಗವನ್ನು ಮುನಿಗಳು ಅನುಸರಿಸಿ, ಅನುಭವವನ್ನು ಹೊಂದಿರುದು ಅನೇಕ ಕಡೆ ವರ್ಣಿಸಲ್ಪಟ್ಟಿದೆ.

ಈ ಅಷ್ಟಾಂಗಗಳ ವಿವರಣೆಯು ದೇವೀ ಭಾಗವತದಲ್ಲಿ ಈ ರೀತಿ ನಿರೂಪಿಸಲ್ಪಟ್ಟಿದೆ.

1. **ಯಮ :** ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ದಯೆ, ಆರ್ಜವ, ಕ್ಷಮೆ, ಧೃತಿ, ಮಿತಾಹಾರ, ಶೌಚ ಎಂಬ ಹತ್ತು ಯಮಗಳು

2. **ನಿಯಮ :** ತಪಸ್ಸು , ಸಂತೋಷ, ಆಸ್ತಿಕ್ಯ, ದಾನ, ದೇವಪೂಜೆ, ಸಿದ್ಧಾಂತ ಶ್ರವಣ, ನಾಚಿಕೆ, ಬುದ್ಧಿ, ಜಪ, ಹೋಮ ಎಂಬ ಹತ್ತು ನಿಯಮಗಳು.

3. **ಆಸನ :** ಪದ್ಮಾಸನ, ಸಿದ್ಧಾಸನ, ಭದ್ರಾಸನ, ಸ್ವಸ್ತಿಕಾಸನ, ವಜ್ರಾಸನವೆಂಬ ತಪಸ್ಸಿಗೆ ಅನುಕೂಲಕರವಾದ ಆಸನಗಳು.

4. **ಪ್ರಾಣಾಯಾಮ :** ರೇಚಕ, ಪೂರಕ, ಕುಂಭಕಗಳಿಂದ, ನಿಯಮಪೂರ್ವಕವಾಗಿ ಉಸಿರಾಟವನ್ನು ನಿಯಂತ್ರಿಸುವುದು ಪ್ರಾಣಾಯಾಮವು.

5. **ಪ್ರತ್ಯಾಹಾರ :** ಶಬ್ದ ಸ್ಪರ್ಶಾದಿ ವಿಷಯಗಳಿಂದ ಸಂಬಂಧಪಟ್ಟ ಇಂದ್ರಿಯಗಳನ್ನು ಹಿಂತಿರುಗಿಸಿ, ಅವುಗಳು ಮೂಲಸ್ಥಾನದಲ್ಲಿ ಸ್ಥಿತವಾಗುವಂತೆ ಮಾಡುವುದು.

6. **ಧ್ಯಾನ :** ಸಗುಣ ಅಥವಾ ನಿರ್ಗುಣ ಬ್ರಹ್ಮವನ್ನು ನಿರಂತರವಾಗಿ ಚಿಂತಿಸುತ್ತಿರುವುದೇ ಧ್ಯಾನವು.

7. **ಧಾರಣ :** ಮೂಲಾಧಾರ ಚಕ್ರದಿಂದ ಮೊದಲಾಗಿ, ವಾಯು ಸಹಿತವಾಗಿ ಮನಸ್ಸನ್ನು ಆಯಾ ಪ್ರದೇಶಗಳಲ್ಲಿ (ಷಟ್ಚಕ್ರ ಸ್ಥಾನಗಳಲ್ಲಿ) ನಿಲ್ಲಿಸುವುದು ಧಾರಣವು.

8. **ಸಮಾಧಿ :** ಪರಬ್ರಹ್ಮತತ್ತ್ವದಲ್ಲಿ ನಂದಾದೀಪದಂತೆ ನಿಶ್ಚಲವಾಗಿರುವ ಚಿತ್ತ ವೃತ್ತಿಯೇ ಸಮಾಧಿ.

ಈ ಅಷ್ಟಾಂಗ ಯೋಗಗಳಲ್ಲಿ ಸರ್ವದಾ ನಿರತರಾಗಿದ್ದು, ಅದರಲ್ಲಿ ಪರಿಪೂರ್ಣತೆಯನ್ನು ಪಡೆದ ಮಹಾಮುನಿರಾಜರಿಂದ ಸೃಷ್ಟಿಯು ವಿರಾಜಿಸಲ್ಪಟ್ಟಿದೆಯೆಂದು ಇಲ್ಲಿ ಸ್ಮರಿಸಿದೆ. ಈ ಮುನಿರಾಜರುಗಳ (ಶ್ರೇಷ್ಠಮುನಿಗಳು) ಬಹಳ ಸೂಕ್ಷ್ಮ ವಿವರಣೆಯು ಈ ರೀತಿ ಇದೆ.

**1.** ವಸಿಷ್ಠ - ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮ ದೇವರಿಂದ ಉತ್ಪನ್ನರಾದ ನವಬ್ರಹ್ಮರೆಂಬ ಮಾನಸ ಪುತ್ರರಲ್ಲಿ ಒಬ್ಬರು. ಸೂರ್ಯವಂಶಕ್ಕೆ ಆಚಾರ್ಯರೆನಿಸಿ ಅನೇಕ ಭೂಪಾಲರುಗಳಿಗೆ ಮಾರ್ಗದರ್ಶನ ಮಾಡಿದರು. ಇವರು ಬ್ರಹ್ಮರ್ಷಿಗಳು.

**2.** ವಾಲಖಿಲ್ಯ - ಇವರು ನವಬ್ರಹ್ಮರೆಂಬ ಮಾನಸ ಪುತ್ರರಲ್ಲಿ ಒಬ್ಬರಾದ 'ಕ್ರತು'ವೆಂಬ

ಮಹರ್ಷಿಗಳಿಂದ ಕ್ರಿಯಾದೇವಿಯೆಂಬ ಪತ್ನಿಯಲ್ಲಿ ಜನಿಸಿದವರು. ಇವರು 60,000 ಜನರೆಂದು ಪ್ರಸಿದ್ಧವಾಗಿದೆ. ಬ್ರಹ್ಮತೇಜಸ್ಸಿನಿಂದ ಬೆಳಗುತ್ತಿರುವ ಇವರುಗಳು ರೂಪದಲ್ಲಿ ಬಹು ಚಿಕ್ಕವರಾಗಿ, ಹೆಬ್ಬೆಟ್ಟಿನ ಗಾತ್ರದವರಾಗಿ ಯಾವಾಗಲೂ ಸೂರ್ಯದೇವನ ಧ್ಯಾನಮಾಡುತ್ತಾ, ಸೂರ್ಯಮಂಡಲದಲ್ಲಿರುವವರು. ಪರಮದಾರುಣವೂ ರೌದ್ರವೂ ಆದ ಸಂಧ್ಯಾಕಾಲಗಳಲ್ಲಿ ಸೂರ್ಯನನ್ನು ನುಂಗಲು ಬರುವ ಮಂದೇಹರೆಂಬ ರಾಕ್ಷಸರನ್ನು ನಾಶಮಾಡಲು, ವಾಲಖಿಲ್ಯ ಮಹರ್ಷಿಗಳು ಓಂಕಾರಯುಕ್ತವಾದ ಗಾಯತ್ರೀಮಂತ್ರದಿಂದ ಅಭಿಮಂತ್ರಿಸಲ್ಪಟ್ಟ ಜಲದಿಂದ ಅರ್ಘ್ಯ ಕೊಡುವರು. ಅಭಿಮಂತ್ರಿಸಿದ ಈ ಜಲವು ವಜ್ರಾಯುಧವಾಗಿ ಆ ರಾಕ್ಷಸರನ್ನು ಪ್ರತಿನಿತ್ಯದಲ್ಲೂ ನಾಶಪಡಿಸುತ್ತದೆ. (ವಿಷ್ಣು ಪುರಾಣ-ದ್ವಿತೀಯಾಂಶ. ಅಧ್ಯಾಯ - 8 ಮತ್ತು ಯಜುರಾರಣ್ಯಕ ದ್ವಿತೀಯ ಪ್ರಶ್ನೆ.) ಪರಮತೇಜಸ್ವಿಗಳಾದ ವಾಲಖಿಲ್ಯರು ಮಾಡುವ ಈ ನಿತ್ಯಕರ್ಮದಲ್ಲಿ ಪೃಥಿವಿಯಲ್ಲಿರುವ ಬ್ರಾಹ್ಮಣ ಶ್ರೇಷ್ಠರೂ ಭಾಗವಹಿಸಿ ತಾವು ಮಾಡುವ ಸಂಧ್ಯಾವಂದನೆ ಕರ್ಮದಲ್ಲಿ ನಿತ್ಯವೂ ಪವಿತ್ರ ದೇವತೆಯನ್ನು ಕುರಿತು ಗಾಯತ್ರಿಯಿಂದ ಅಭಿಮಂತ್ರಿಸಿದ ಜಲದಿಂದ ಅರ್ಘ್ಯವನ್ನು ಕೊಡುತ್ತಾರೆ. ಇಂದಿಗೂ ನಡೆದು ಬರುತ್ತಿರುವ ಈ ಕರ್ಮದ ವಿಚಾರದಲ್ಲಿ ವಿಷ್ಣುಪುರಾಣವು

"ತಸ್ಮಾನ್ನೋಲ್ಲಙ್ಘನಂ ಕಾರ್ಯಂ ಸಂಧ್ಯೋಪಾಸನ ಕರ್ಮಣಃ |
ಸ ಹನ್ತಿ ಸೂರ್ಯಂ ಸಂಧ್ಯಾಯಾಂ ನೋಪಾಸ್ತಿಂ ಕುರುತೇ ತು ಯಃ ||

'(ಈ ಕಾರಣದಿಂದಲೇ ಸಂಧ್ಯೋಪಾಸನೆಯನ್ನು ಉಲ್ಲಂಘಿಸಬಾರದು. ಯಾವನು ಉಲ್ಲಂಘಿಸುತ್ತಾನೆಯೋ ಅವನು ಸೂರ್ಯನ ವಧೆ ಮಾಡಿದಂತೆ)' ಎಂಬುದಾಗಿ ಹೇಳುತ್ತದೆ.

**3.** ವಿಶ್ವಾಮಿತ್ರ - ಬ್ರಹ್ಮನ ಮಾನಸ ಪುತ್ರನಾದ ಕುಶನೆಂಬ ಮಹಾತ್ಮನಿದ್ದನು. ಆತನ ಮಗನಾದ ಕುಶನಾಭನ ಪುತ್ರನು ಗಾಧಿರಾಜನೆಂಬ ಹೆಸರಿನಿಂದ ಪ್ರಸಿದ್ಧನು. ವಿಶ್ವಾಮಿತ್ರ ಮಹರ್ಷಿಗಳು ಈತನ ಪುತ್ರರು. ಇವರು ಕುಶನ ವಂಶದವರಾಗಿದ್ದರಿಂದ ಇವರನ್ನು ಕೌಶಿಕ ಎಂದೂ ಕರೆಯುತ್ತಾರೆ. (ರಾಮಾ-ಬಾಲಕಾಂಡ-34). ಕ್ಷತ್ರಿಯ ವಂಶದಲ್ಲಿ ಜನಿಸಿ, ತಮ್ಮ ತಪೋಬಲದಿಂದ ಬ್ರಹ್ಮರ್ಷಿಯಾಗಬಹುದೆಂದು ಪ್ರಪಂಚಕ್ಕೆ ತೋರಿಸಿಕೊಟ್ಟ ಮಹಾಮಹಿಮರು. ಇವರು ಅರಸರಾಗಿದ್ದಾಗ ವಿಶ್ವರಥನೆಂಬ ಹೆಸರಿನಿಂದ ಕನ್ಯಾಕುಬ್ಜ ವನ್ನು ಆಳುತ್ತಿದ್ದರು. ವೈವಸ್ವತ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬರು ಮತ್ತು ಗೋತ್ರಪ್ರವರ್ತಕರೂ ಆಗಿರುತ್ತಾರೆ. ಪರಮ ಪವಿತ್ರವಾದ ಗಾಯತ್ರೀ ಮಂತ್ರವನ್ನು ಸಾಧನೆ ಮಾಡಿ, ಅದರ ಶಕ್ತಿಯನ್ನು ಪೃಥ್ವಿಯಲ್ಲಿ ಪ್ರತಿಷ್ಠಿಸಿ, ಜನಗಳು ಪವಿತ್ರರಾಗಲು ಅವಕಾಶಮಾಡಿಕೊಟ್ಟಿರುವ ಪರಮಜ್ಞಾನಿಗಳು. ಆಧ್ಯಾತ್ಮ ಸಾಧಕರಿಗೆ ಪವಿತ್ರತೆಯ ಮೊದಲ ಹಂತವನ್ನು ಏರಲು ಮಾರ್ಗದರ್ಶನ ಮಾಡಿರುವ ಆಚಾರ್ಯರು ಮತ್ತು ಮಂತ್ರದ್ರಷ್ಟಾರರು.



shrinath.udupa@gmail.com

**4.** ವಾಲ್ಮೀಕಿ : ಭೃಗುವಂಶದ ಪ್ರಚೇತಸನೆಂಬುವನ ಪುತ್ರರು. ಬೇಡರ ಸಹವಾಸದಿಂದ ದಾರಿಗಳ್ಳನಾಗಿ ಬೆಳೆದು, ಒಮ್ಮೆ ಸಪ್ತರ್ಷಿಗಳನ್ನು ಎದುರಿಸಿ, ಅವರಿಂದ 'ರಾಮ' ಮಂತ್ರೋಪದೇಶವನ್ನು ಹೊಂದಿ, ಪವಿತ್ರವಾದ ಈ 'ರಾಮ'ಮಂತ್ರದ ಜಪದಲ್ಲಿಯೇ ಮೈಮರೆತು, ಸುತ್ತಲೂ ಹುತ್ತ ಬೆಳೆದು, ಅದರಿಂದ ಆವೃತರಾಗಿ ತಪೋಮಗ್ನರಾಗಿದ್ದರು. ಆಗ ಮತ್ತೆ ಸಪ್ತರ್ಷಿಗಳು ಬಂದು, ಇವರನ್ನು ಎಚ್ಚರಿಸಿ, ವಾಲ್ಮೀಕಿಗಳೆಂದು ಹೆಸರಿಟ್ಟು ಕರೆದರು. ಅಂದಿನಿಂದ ಮಹರ್ಷಿಗಳೆಂದು ಕರೆಯಲ್ಪಟ್ಟರು. ಇವರಿಂದ ಇಂದಿಗೂ ಭಕ್ತರನ್ನು ಪಾವನಗೊಳಿಸುತ್ತಿರುವ "ಶ್ರೀಮದ್ರಾಮಾಯಣ"ವೆಂಬ ಅದ್ಭುತ ಕಾವ್ಯ ಸೃಷ್ಟಿಯಾಯಿತು.

**5.** ಜಮದಗ್ನಿ: ಭೃಗುವಂಶೀಯರಾದ ಋಚೀಕ ಮುನಿಗಳ ಪುತ್ರರು. ಇವರ ಮಾತೆಯು ವಿಶ್ವಾಮಿತ್ರ ಮಹರ್ಷಿಗಳ ಸಹೋದರಿಯಾದ ಸತ್ಯವತಿಯು. ಇವರು ತಮ್ಮ ಪತ್ನಿ ರೇಣುಕಾದೇವಿಯಿಂದ ಅವತಾರ ಪುರುಷ ಪರಶುರಾಮರನ್ನು ಪಡೆದರು. ಇವರು ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬರೆಂದು ಹೇಳಲ್ಪಟ್ಟಿದೆ. ಇವರು ಗೋತ್ರ ಪ್ರವರ್ತಕರು (ಭಾಗ 8-13)

**6.** ಚ್ಯವನ : ಮಹರ್ಷಿ ಚ್ಯವನರು ಭೃಗು ಮಹರ್ಷಿಗಳ ಪುತ್ರರು. ಗರ್ಭಿಣಿಯಾಗಿದ್ದಾಗ ಇವರ ತಾಯಿಯು ಒಬ್ಬ ರಾಕ್ಷಸನನ್ನು ನೋಡಿ ಹೆದರಿದ್ದರಿಂದ, ಗರ್ಭದಿಂದ ಶಿಶು ಜಾರಿದ್ದರಿಂದ, ಇವರನ್ನು ಚ್ಯವನರೆಂದು ಕರೆದರು. ಇವರ ಮಹಿಮೆ ಎಷ್ಟಿತ್ತೆಂದರೆ, ಶಿಶುವಾಗಿದ್ದಾಗಲೇ ಕೋಪದಿಂದ ಆ ರಾಕ್ಷಸನನ್ನು ನೋಡಿದ ಕ್ಷಣವೇ ಆತನು ಭಸ್ಮವಾಗಿ ಹೋದನು.

**7.** ದುರ್ವಾಸಸ್: ಅತ್ರಿ ಮಹರ್ಷಿಗಳಿಂದ ಅನಸೂಯಾದೇವಿಯಲ್ಲಿ ಶಿವ ದೇವರ ಅಂಶದಿಂದ ಜನಿಸಿದವರು. ದತ್ತಾತ್ತೇಯರೂ, ಚಂದ್ರನೂ ಈತನ ಒಡಹುಟ್ಟಿದವರು. ಇವರು ಕಾಲಾಗ್ನಿ ರುದ್ರರ ಅಂಶವೆಂದೂ ಸಹ ಹೇಳಲ್ಪಟ್ಟಿದೆ. ಅನಸೂಯಾದೇವಿಯಲ್ಲಿ ಬ್ರಹ್ಮ, ವಿಷ್ಣು, ರುದ್ರರೇ ತಮ್ಮ ಅಂಶಗಳಿಂದ ಈ ಮೂವರು ಪುತ್ರರಾಗಿ ಜನಿಸಿದರೆಂದು ಉಕ್ತವಾಗಿದೆ. ಇವರೂ ಸಹ ಮಹರ್ಷಿಗಳು.

**8.** ಕಪಿಲ : ಕರ್ದಮ ಮುನಿಯಿಂದ ಸ್ವಾಯಂಭುವ ಮನುವಿನ ಪುತ್ರಿಯಾದ ದೇವಹೂತಿಯಲ್ಲಿ ಜನಿಸಿದವರು. ಇವರು ವಿಷ್ಣುವಿನ ಅವತಾರವೆಂದು ಹೇಳಲ್ಪಟ್ಟಿದೆ. (ಭಾರ. ವನ 106). ಈ ಮಹರ್ಷಿಗಳು ಅಗ್ನಿದೇವತೆಯ ಅಧಿಕಾರವನ್ನು ಸಹ ಹೊಂದಿದವರು. ಸಾಂಖ್ಯತತ್ತ್ವ ಪ್ರವರ್ತಕರೂ ಆಗಿ, ತಾಯಿಗೂ ಸಹ ಸಾಂಖ್ಯ ತತ್ತ್ವವನ್ನು ಉಪದೇಶಿಸಿದ ಮಹಾಮಹಿಮರು.

**9.** ಮೌದ್ಗಲ್ಯ : ಮುದ್ಗಲ ಮಹರ್ಷಿಗಳ ಪುತ್ರರು. ತೈತ್ತಿರೀಯೋಪನಿಷತ್ತಿನ ಶೀಕ್ಷಾವಲ್ಲಿಯಲ್ಲಿನ 9ನೇ ಅನುವಾಕದಲ್ಲಿ ಸ್ವಾಧ್ಯಾಯ ಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ ಎಂದು ಹೇಳಲ್ಪಟ್ಟಿದೆ. ಈ ಮಂತ್ರಕ್ಕೆ ಭಾಷ್ಯ ಬರೆಯುವಾಗ ಆಚಾರ್ಯರು "ಸ್ವಾಧ್ಯಾಯ

ಪ್ರವಚನೇ ಏವ ಅನುಷ್ಠೇಯೇ ಇತಿ ನಾಕೋ ನಾಮತಃ ಮುದ್ಗಲಸ್ಯ ಅಪತ್ಯಂ ಮೌದ್ಗಲ್ಯಃ ಆಚಾರ್ಯೋ ಮನ್ಯತೇ " ಎಂದರೆ "ಸ್ವಾಧ್ಯಾಯ ಪ್ರವಚನ- ಇವೆರಡೇ ಮಾಡಲ್ಪಡತಕ್ಕವುಗಳು - ಎಂದು ನಾಕಾ ಎಂಬ ಹೆಸರಿನ ಮುದ್ಗಲನ ಪುತ್ರನಾದ ಮೌದ್ಗಲ್ಯರೆಂಬ ಆಚಾರ್ಯರು ಅಭಿಪ್ರಾಯಪಡುತ್ತಾರೆ" ಎಂಬುದಾಗಿ ಬರೆದಿರುತ್ತಾರೆ. ಈ ಮಹರ್ಷಿಗಳು ಸ್ವಾಧ್ಯಾಯ ಪ್ರವಚನಗಳ ಅವಶ್ಯಕತೆಯನ್ನು ಈ ಮೂಲಕ ಒತ್ತಿ ಹೇಳಿರುತ್ತಾರೆ.

**10. ಕೌಂಡಿನ್ಯ :** ವಸಿಷ್ಠ ಮುನಿಗಳ ವಂಶದಲ್ಲಿ ಬಂದ ಮಹರ್ಷಿಗಳು. ಇವರು ಗೋತ್ರಪ್ರವರ್ತಕರೂ ಹೌದು.

**11. ಕಾಶ್ಯಪ :** ನವಬ್ರಹ್ಮರಲ್ಲಿ ಒಬ್ಬರಾದ ಮರೀಚಿಯೆಂಬ ಬ್ರಹ್ಮಮಾನಸ ಪುತ್ರರಲ್ಲಿ ಜನಿಸಿದವರು. ಕರ್ದಮ ಪುತ್ರಿಯಾದ ಕಲೆಯೆಂಬುವಳು ಇವರ ಜನನಿ. ಸೃಷ್ಟಿ ಕಾರ್ಯದಲ್ಲಿ ಚತುರ್ಮುಖ ಬ್ರಹ್ಮನಿಗೆ ನೆರವಾದವರು. ಇವರ ಚರಿತ್ರೆ ದೀರ್ಘವಾಗಿ ಪುರಾಣಗಳಲ್ಲಿಚಿತ್ರಿತವಾಗಿದೆ. ಇವರು ಗೋತ್ರ ಪ್ರವರ್ತಕರಲ್ಲಿ ಮೊದಲನೆಯವರು. ಆದ್ದರಿಂದಲೇ ತಮ್ಮ ಗೋತ್ರ ತಿಳಿಯದಿದ್ದವರು, ಕಶ್ಯಪ ಗೋತ್ರದವರೆಂದು ಹೇಳಿಕೊಳ್ಳಬಹುದೆಂದು ಹೇಳಲ್ಪಟ್ಟಿದೆ.

**12. ಗಾರ್ಗ್ಯ :** ಆಂಗೀರಸ ವಂಶದಲ್ಲಿ ಬಂದವರು. ಇವರು ಕೇಕಯ ದೇಶಾಧಿಪತಿಯಾಗಿದ್ದರು. ಇವರ ತಂದೆ ವೇಣು ಹೋತ್ರರೆಂಬ ಋಷಿಗಳು. ಇವರು ಇಂದ್ರನಿಗೆ ಧರ್ಮ ರಹಸ್ಯಗಳನ್ನು ಹೇಳಿದರೆಂದು ಉಕ್ತವಾಗಿದೆ. (ರಾಮಾ.ವಾಯು ಪುರಾಣ. ಭಾರತ)

**13. ಗೌತಮ:** ಉಚಥ್ಯನ ಮಗನಾದ ದೀರ್ಘತಮ ಮುನಿಗಳೆಂಬವರ ಪುತ್ರ.. ಸಪ್ತರ್ಷಿಗಳಲ್ಲಿ ಒಬ್ಬರು ಮತ್ತು ಗೋತ್ರ ಪ್ರವರ್ತಕರು.

**14. ಅಂಗೀರಸ :** ಇವರು ಬ್ರಹ್ಮನ ಮಾನಸ ಪುತ್ರರಾದ ನವ ಬ್ರಹ್ಮರಲ್ಲೊಬ್ಬರು. ಗೌತಮ ಮಹರ್ಷಿಗಳ ಪಿತಾಮಹರಾದ ಉಚಥ್ಯರು ಇವರ ಪುತ್ರರು. ಅಂಗೀರಸರು ಗೋತ್ರ ಪ್ರವರ್ತಕರೂ ಆಗಿರುತ್ತಾರೆ.

**15. ದಕ್ಷ :** ದಕ್ಷರು ಇಬ್ಬರು. ಇವರನ್ನು ಪ್ರಜಾಪತಿ ಬ್ರಹ್ಮರೆಂದೇ ಕರೆಯಲಾಗಿದೆ. ಮೊದಲನೆಯವನು ಸ್ವಾಯಂಭುವ ಮನ್ವಂತರದಲ್ಲಿ ಚತುರ್ಮುಖ ಬ್ರಹ್ಮನ ಬಲಗೈ ಹೆಬ್ಬೆರಳಿನಿಂದ ಹುಟ್ಟಿದನೆಂದೂ, ಎರಡನೆಯವನು ಚಾಕ್ಷುಷ ಮನ್ವಂತರದಲ್ಲಿ ಹುಟ್ಟಿದವನೆಂದೂ ಉಲ್ಲೇಖವಿದೆ. ಇವರು ಸೃಷ್ಟಿ ಕಾರ್ಯದಲ್ಲಿ ಬ್ರಹ್ಮದೇವರಿಗೆ ಸಹಾಯಕರಾದವರು. (ಭಾಗವತ, ಹರಿವಂಶ) ಮನ್ವಂತರ ಭೇದದಿಂದ ಇವರ ಆವಿರ್ಭಾವ ಬೇರೆ ಬೇರೆ ರೀತಿ ಇರುತ್ತದೆ.

**16. ಪರಾಶರ :** ವಸಿಷ್ಠ ಮಹರ್ಷಿಗಳ ಪುತ್ರರಾದ ಶಕ್ತಿ ಮಹರ್ಷಿಗಳ ಪುತ್ರರು ಪರಾಶರ ಮಹರ್ಷಿಗಳು. ಇವರ ತಾಯಿಯ ಹೆಸರು ಅದೃಶ್ಯಂತೀ. ಇವರಿಂದಲೇ ಸತ್ಯವತಿಯಲ್ಲಿ ವ್ಯಾಸಮಹರ್ಷಿಗಳು ಜನಿಸಿ ಹದಿನೆಂಟು ಪುರಾಣಗಳನ್ನು ರಚಿಸಿದರು.



**17. ಜೈಮಿನಿ :** ಕುತ್ಸ ವಂಶದವರಾಗಿದ್ದರಿಂದ ಇವರನ್ನು ಕೌತ್ಸಮುನಿ ಎಂದೂ ಕರೆಯುತ್ತಾರೆ. ಜನಮೇಜಯರಾಜನ ಸರ್ಪಯಾಗದಲ್ಲಿ ಉದ್ಗಾತೃವಾಗಿದ್ದರು. ಇವರೂ ಸಹ ಒಂದು ಭಾರತ ಗ್ರಂಥರಚನಾಕಾರರಾಗಿದ್ದರು. ಅದು ಜೈಮಿನಿ ಭಾರತವೆಂದು ಪ್ರಸಿದ್ಧಿಯಾಗಿದೆ. ಇವರು ನಾಲ್ಕು ಜನ ವ್ಯಾಸರ ಶಿಷ್ಯರಲ್ಲಿ ಒಬ್ಬರು. ಇವರು ಕರ್ಮಕಾಂಡವನ್ನು ಪ್ರತಿಪಾದಿಸುವ ಪೂರ್ವಮೀಮಾಂಸಾ ಶಾಸ್ತ್ರವನ್ನೂ ರಚಿಸಿದರು.

**18. ಪತಂಜಲಿ :** ಪುರಾಣಗಳ ಪ್ರಕಾರ ಇವರು ಇಳಾವೃತ ವರ್ಷದಲ್ಲಿಜನಿಸಿದವರು. ಇವರ ಬಗ್ಗೆ ಪದ್ಮ ಪುರಾಣದಲ್ಲಿ ಉಲ್ಲೇಖವಿದೆ. ಅಂಗಿರಾ ಎಂಬುವವರ ಪತ್ನಿಯಾದ ಸತೀದೇವಿಗೆ ಜನಿಸಿದವರು. ಹುಟ್ಟುವಾಗಲೇ ಇವರಿಗೆ ಭೂತ ಭವಿಷ್ಯತ್ ವರ್ತಮಾನಗಳ ಜ್ಞಾನವಿತ್ತೆಂದು ಹೇಳಲಾಗಿದೆ. ಆಧುನಿಕ ಮತದಂತೆ ಇವರು ಭಾರತದಲ್ಲಿ ಗೋನಾರ್ಧ ಎಂಬ ಸ್ಥಳದಲ್ಲಿ ಜನಿಸಿದರು. ಅನಂತರ ಅವರು ಕಾಶ್ಮೀರದಲ್ಲಿ ವಾಸಿಸುತ್ತಿದ್ದರು. ಇವರ ಕಾಲವು ಸುಮಾರು ಕ್ರಿ. ಪೂ. 140. ಪಾಣಿನಿಯ ವ್ಯಾಕರಣ ಸೂತ್ರ (ಅಷ್ಟಾಧ್ಯಾಯೀ)ಗಳಿಗೆ ಮಹಾಭಾಷ್ಯವನ್ನು ಬರೆದವರು. ಅಂದಿನ ಕಾಲಕ್ಕೆ ಸಂಸ್ಕೃತ ಭಾಷೆಗೆ ಎರಡನೆಯವರಿಲ್ಲದಂತೆ ಪ್ರಖ್ಯಾತರಾಗಿದ್ದರು. ಬಹಳ ಪ್ರಸಿದ್ಧವಾದ ಯೋಗ ಸೂತ್ರಗಳ ರಚನಕಾರರು ಇವರೇ ಎಂದು ಕೆಲವರು, ಮತ್ತೆ ಕೆಲವರು ಆ ಪತಂಜಲಿಯೆಂಬವರು ಬೇರೆ ಎಂಬುದಾಗಿಯೂ ತಿಳಿದಿರುತ್ತಾರೆ.

**19. ಕಣ್ವ :** ಕಶ್ಯಪ ಗೋತ್ರೋದ್ಭವರಾದ ಋಷಿಗಳು. ಇವರ ತಂದೆ ಮೇಧಾತಿಥಿ ಎಂಬುವರು. ಇವರ ಸಾಕು ಮಗಳಾದ ಶಕುಂತಲೆಯ ಕಥೆ ಬಹಳ ಪ್ರಸಿದ್ಧವಾದುದು. ಇವರ ಆಶ್ರಮವು ಅಯೋಧ್ಯೆಯ ಪಶ್ಚಿಮದಲ್ಲಿರುವ ಲಕ್ನೋ ನಗರದ ಬಿಜನೂರು ಎಂಬ ಅರಣ್ಯ ಪ್ರದೇಶದಲ್ಲಿತ್ತು.

**20 ರಿಂದ 25 :** ವೇದ ಮಂತ್ರಗಳನ್ನು ವಿವಿಧ ಯಜ್ಞಗಳಲ್ಲಿ ಪ್ರಯೋಗಿಸುವ ಮತ್ತು ಯಜ್ಞಗಳನ್ನು ಅನುಷ್ಠಾನಮಾಡುವ ಕ್ರಮಗಳನ್ನು ಕಲ್ಪ ಸೂತ್ರಗಳು ಬೋಧಿಸುತ್ತವೆ. ಕಲ್ಪಸೂತ್ರಗಳು ಆರು ವೇದಾಂಗಗಳಲ್ಲಿ ಒಂದು. ಈ ಕಲ್ಪಸೂತ್ರಗಳು ಋಗ್ವೇದ , ಯಜುರ್ವೇದ ಮತ್ತು ಸಾಮವೇದಗಳೆಂಬ ಮೂರು ವೇದಗಳಿಗೆ ಬೇರೆ ಬೇರೆ ರೀತಿ ಇದೆ. ಈ ಸೂತ್ರಕಾರರುಗಳನ್ನು ಇಲ್ಲಿ ಸ್ಮರಿಸಲಾಗಿದೆ. ಆಧುನಿಕರು ಇವರುಗಳ ಕಾಲ ಕ್ರಿ. ಪೂ. 600 ಎಂಬುದಾಗಿ ಹೇಳುತ್ತಾರೆ.

**20 ಮತ್ತು 25 - ಬೋಧಾಯನ ಮತ್ತು ಆಪಸ್ತಂಬರು :** ಇವರುಗಳು ಕೃಷ್ಣ ಯಜುರ್ವೇದದ ಕಲ್ಪ ಸೂತ್ರಕಾರರು.

**21. ಆಶ್ವಲಾಯನ :** ಇವರು ಋಗ್ವೇದದ ಕಲ್ಪ ಸೂತ್ರಕಾರರು

**22. ಕಾತ್ಯಾಯನ :** ಇವರು ಶುಕ್ಲಯಜುರ್ವೇದದ ಕಲ್ಪ ಸೂತ್ರಕಾರರು.

**23. ದ್ರಾಹ್ಯಾಯಣ :** ಇವರು ಸಾಮವೇದದ ಕಲ್ಪಸೂತ್ರಕಾರರು.

**24. ವೈಶಂಪಾಯನ :** ಇವರು ಭಗವಾನ್ ವೇದವ್ಯಾಸರ ಶಿಷ್ಯರು. ಭಗವಾನರು ವೇದಗಳನ್ನು ನಾಲ್ಕು ಶಾಖೆಗಳಾಗಿ ಮಾಡಿ ಯಜುರ್ವೇದವನ್ನು ಇವರಿಗೆ ಬೋಧಿಸಿದರು.

shrinath.udupa@gmail.com

**26. ಜಾಬಾಲಿ :** ಇವರು ವಿಶ್ವಾಮಿತ್ರ ಮಹರ್ಷಿಗಳ ಪುತ್ರರು. ದಶರಥ ಚಕ್ರವರ್ತಿಯ ಎಂಟು ಮಂದಿ ಪ್ರಧಾನ ಋತ್ವಿಜರಲ್ಲಿ ಒಬ್ಬರಾಗಿದ್ದರು.

**27. ಮಾರ್ಕಂಡೇಯ :** ಬ್ರಹ್ಮ ಮಾನಸ ಪುತ್ರರಾದ ಭೃಗು ಮಹರ್ಷಿಗಳ ವಂಶೀಯರು. ಮೃಕಂಡು ಮುನಿಗಳ ಪುತ್ರರು. ಇವರು ಜನ್ಮತಃ ಅಲ್ಪಾಯುಷಿಗಳಾಗಿದ್ದರು. ತಮ್ಮ ತಪಸ್ಸಿನಿಂದ ಶಿವನನ್ನು ಮೆಚ್ಚಿಸಿ, ಮೃತ್ಯುವನ್ನು ಗೆದ್ದು ಚಿರಂಜೀವಿಗಳಾದರು. ಇವರ ಆಶ್ರಮವು ಗೋಮತಿ-ಸರಯೂ ನದಿಗಳ ಸಂಗಮ ಸ್ಥಳದಲ್ಲಿದೆ (ಭಾಗೇಶ್ವರ). ಪಾಂಡವರು ವನವಾಸದಲ್ಲಿದ್ದಾಗ ಅನೇಕ ಪುಣ್ಯ ಕಥೆಗಳನ್ನು ಹೇಳಿ ಅವರನ್ನು ಸಾಂತ್ವನಗೊಳಿಸಿದರು. ದಶರಥ ಚಕ್ರವರ್ತಿ ಮಾಡಿದ ಪುತ್ರಕಾಮೇಷ್ಟಿ ಯಾಗದಲ್ಲಿ ಋತ್ವಿಜರಾಗಿದ್ದರು.

**28. ಮಾಂಡವ್ಯ :** ಇವರನ್ನು ಆಣಿಮಾಂಡವ್ಯ ಮಹರ್ಷಿಗಳೆಂದೂ ಸಹ ಹೇಳುತ್ತಾರೆ. ಶ್ರೀರಾಮಚಂದ್ರನು ವನವಾಸದಲ್ಲಿದ್ದಾಗ ಇವರು ಅನೇಕ ಧರ್ಮ ರಹಸ್ಯಗಳನ್ನು ಅವನಿಗೆ ತಿಳಿಸಿದರು. ಕೆಲವು ಕಾಲ ಬ್ರಹ್ಮ ಪದವಿಯನ್ನು ಪಡೆದಿದ್ದರು. ಇವರು ಮಂತ್ರದ್ರಷ್ಟಾರರು (ಮತ್ಸ್ಯ ಪುರಾಣ)

**29. ಭರದ್ವಾಜ :** ಈ ಹೆಸರಿನಲ್ಲಿ ನಾಲ್ಕು ಜನರಿರುತ್ತಾರೆ. ಆದರೂ ಪ್ರಸಿದ್ಧವಾಗಿರುವ ಒಬ್ಬರು ದೇವಗುರುಗಳಾದ ಬೃಹಸ್ಪತ್ಯಾಚಾರ್ಯರಿಗೆ ಜನಿಸಿದವರು. ಮಹಾಭಾರತದಲ್ಲಿನ ದ್ರೋಣಾಚಾರ್ಯರು ಇವರ ಪುತ್ರರು. ಪ್ರಸಿದ್ಧರಾದ ಮತ್ತೊಬ್ಬ ಭರದ್ವಾಜ ಮಹರ್ಷಿಗಳು ವಾಲ್ಮೀಕಿ ಮಹರ್ಷಿಗಳ ಶಿಷ್ಯರು. ಇವರು ಪ್ರಯಾಗ ಕ್ಷೇತ್ರದಲ್ಲಿ ವಾಸಿಸುತ್ತಿದ್ದು, ಶ್ರೀರಾಮಚಂದ್ರನಿಗೆ ಅರಣ್ಯವಾಸ ಮಾಡುತ್ತಿದ್ದಾಗ ಆತಿಥ್ಯವನ್ನು ನೀಡಿದರು. ಇನ್ನೊಬ್ಬ ಭರದ್ವಾಜ ಮಹರ್ಷಿಗಳು 'ವಿಮಾನಶಾಸ್ತ್ರ'ವನ್ನು ರಚಿಸಿದರೆಂದು ವಿಖ್ಯಾತಿಯಿದೆ.

**30 ರಿಂದ 33 : ಸನಕಾದಿಗಳು :** ಇವರು ಸನಕ, ಸನಂದನ ಸನತ್ಕುಮಾರ ಮತ್ತು ಸನತ್ಸುಜಾತ ಎಂಬ ನಾಲ್ಕು ಜನ ಸೃಷ್ಟಿಯ ಆದಿಯಲ್ಲಿ ಆವಿರ್ಭವಿಸಿದ ಬ್ರಹ್ಮನ ಮಾನಸ ಪುತ್ರರು. ಇವರು ಯಾವಾಗಲೂ ಕೌಮಾರಾವಸ್ಥೆಯಲ್ಲಿಯೇ ಇರತಕ್ಕವರು. ಮಹಾತಪಸ್ವಿಗಳು ಮತ್ತು ಜ್ಞಾನ ಸಂಪನ್ನರು.

**34. ಅಗಸ್ತ್ಯ :** ಮೈತ್ರಾವರುಣ ಋಷಿಗಳಿಂದ ಉತ್ಪನ್ನರಾದವರು. ಅಗಸ್ತ್ಯ ಮಹರ್ಷಿಗಳ ಪತ್ನಿ ಲೋಪಾಮುದ್ರೆಯೆಂಬ ಸಾಧ್ವಿ. ಇವರು ವೈವಸ್ವತ ಮನ್ವಂತರದವರು.

**35. ಶೌನಕ :** ಇವರು ಭೃಗುವಂಶದ ಮಹರ್ಷಿಗಳು. ನೈಮಿಷಾರಣ್ಯದಲ್ಲಿ ವಾಸವಾಗಿದ್ದರು. ಸೂತಪುರಾಣಿಕರಿಂದ ಪುರಾಣಗಳನ್ನೂ ಇತಿಹಾಸಗಳನ್ನೂ ಶ್ರವಣ ಮಾಡಿದವರಲ್ಲಿ ಅತ್ಯಂತ ಪ್ರಮುಖರು. ಪುರಾಣಗಳ ಪ್ರಚಾರಕ್ಕಾಗಿ ಶ್ರಮಿಸಿದವರು.

ಈ ಮೂವತ್ತೈದು ಮುನಿರಾಜರಿಂದ ವಿರಾಜಿತವಾಗಿರುವ ಪೃಥ್ವೀಮಾತೆಯನ್ನೂ ಈ ಮಹಾನುಭಾವರುಗಳನ್ನೂ ಸ್ಮರಿಸಿ ಭಾರತವು ಎಂತಹ ಪುಣ್ಯ ಭೂಮಿಯೆಂದು ಮನನ ಮಾಡಿ ಕರ್ಮಿಗಳು ತಮ್ಮ ಶುಭ ಕರ್ಮಗಳಲ್ಲಿ ಉದ್ಯುಕ್ತರಾಗಬೇಕೆಂಬ ಆಶಯದಿಂದ ಈ ಮಹಾಸಂಕಲ್ಪದಲ್ಲಿ ಅವರನ್ನು ಸ್ಮರಿಸಿದೆ.



shrinath.udupa@gmail.com

## ೧೮. ಸಪ್ತಕುಲಾಚಲವಲಯಿತೇ

ಈ ಪವಿತ್ರ ಭಾರತ ಭೂಮಿಯು ಸಪ್ತಕುಲಾಚಲ (ಏಳು ಪವಿತ್ರ ಪರ್ವತಗಳು)ಗಳನ್ನು ವಲಯದಂತೆ ಹೊಂದಿರುವ ಪವಿತ್ರ ಸ್ಥಳವಾಗಿದೆ. ಭಾರತದಲ್ಲಿ ಹರಿಯುವ ಸಕಲ ಪುಣ್ಯನದಿಗಳೂ ಈ ಪರ್ವತ ಪ್ರದೇಶದಿಂದಲೇ ಉಗಮವಾಗಿ, ಅನೇಕ ತೀರ್ಥಸ್ಥಳಗಳಿಗೂ, ಮುನಿಗಳ ಆಶ್ರಮಗಳಿಗೂ, ಪುಣ್ಯಕ್ಷೇತ್ರಗಳಿಗೂ ಆಶ್ರಯಭೂತವಾಗಿದೆ. ಅನೇಕ ಪುರಾಣಗಳಲ್ಲಿಯೂ ಇವುಗಳ ಪ್ರಾಚೀನ ವಿವರಣೆಯಿದೆ.

**1. ಮಲಯಪರ್ವತ :** ಪಶ್ಚಿಮ ಘಟ್ಟಗಳಲ್ಲಿ ದಕ್ಷಿಣ ಭಾರತ ಕಡೆಗಿರುವ ಪರ್ವತಶ್ರೇಣಿ

**2. ಮಹೇಂದ್ರ ಪರ್ವತ :** ಇಂದಿನ ಒರಿಸ್ಸಾ ರಾಜ್ಯದಲ್ಲಿರುವ (ಈಶಾನ್ಯ ಭಾರತ) ಪರ್ವತಶ್ರೇಣಿ

**3. ಸಹ್ಯಾದ್ರಿ ಪರ್ವತ :** ಪಶ್ಚಿಮ ಘಟ್ಟಗಳಲ್ಲಿ ಉತ್ತರದ ಕಡೆಗಿರುವ ಪರ್ವತಶ್ರೇಣಿ

**4. ಶುಕ್ತಿಮತ್ ಪರ್ವತ :** ಪಶ್ಚಿಮ ಘಟ್ಟಗಳಲ್ಲಿರುವ ಪೂರ್ವಭಾಗದ ಪರ್ವತಶ್ರೇಣಿ

**5. ಋಕ್ಷ ಪರ್ವತ :** ಗೋಂಡವನ ಪ್ರದೇಶ, ವಿಂಧ್ಯ ಪರ್ವತದ ಭಾಗ (ಈಗಿನ ಗಿರಿನಾರ) ಅತ್ರಿ-ಅನಸೂಯರು ತಪಸ್ಸು ಮಾಡಿದ ಸ್ಥಳ.

**6. ವಿಂಧ್ಯ ಪರ್ವತ :** ಈಗಿನ ವಿಂಧ್ಯ ಪರ್ವತದ ಪೂರ್ವಭಾಗ ಪ್ರದೇಶ

**7. ಪಾರಿಯಾತ್ರ :** ಪೂರ್ಣ ವಿಂಧ್ಯ ಪರ್ವತ ಪ್ರದೇಶದ ಉತ್ತರ ಮತ್ತು ಪಶ್ಚಿಮ ಭಾಗಗಳು.

ಇಂದಿನ ಪೂರ್ಣ ವಿಂಧ್ಯಪ್ರದೇಶವು ಅಂದಿನ ಋಕ್ಷ, ವಿಂಧ್ಯ ಮತ್ತು ಪಾರಿಯಾತ್ರ ಪರ್ವತಗಳನ್ನೊಳಗೊಂಡಿದೆ. ಸಾತ್ಪುರ ಪರ್ವತ ಶ್ರೇಣಿಗಳನ್ನೇ ವಿಂಧ್ಯಪಥವೆಂದು ರೂಢಿಯಲ್ಲಿ ಕರೆಯುತ್ತಾರೆ. ಈ ಕುಲಪರ್ವತಗಳು ಸ್ವರ್ಗದಲ್ಲೂ ಇದ್ದು, ಅವುಗಳ ಪೃಥ್ವಿ ರೂಪವು ಮಾತ್ರ ಭೂಮಿಯಲ್ಲಿದೆಯೆಂದು ಪುರಾಣಗಳು ಹೇಳುತ್ತವೆ.

## ೧೯. ಮಹಾನಗಸಮಧಿಷ್ಠಿತೇ

ಪರ್ವತಗಳಿಗಿಂತ ಚಿಕ್ಕದಾದ ಪವಿತ್ರವಾದ ಬೆಟ್ಟಗಳನ್ನು ನಗಗಳೆಂದು ಹೇಳುವರು. ಋಷಿ ಮುನಿಗಳು ತಮ್ಮ ತಪಸ್ಸಿಗಾಗಿ ಆರಿಸಿಕೊಂಡಿದ್ದ ಐದು ಪುಣ್ಯನಗಗಳನ್ನು ಇಲ್ಲಿ ಸ್ಮರಿಸಿದೆ.

**1. ಋಷ್ಯಮೂಕ :** ಇದು ಬಳ್ಳಾರಿ ಜಿಲ್ಲೆಯಲ್ಲಿ ಆನೆಗೊಂದಿಯೆಂಬ ಸ್ಥಳದಿಂದ ಸುಮಾರು ಎಂಟು ಮೈಲು ದೂರದಲ್ಲಿ ತುಂಗಭದ್ರಾ ನದಿಯ ಬಳಿ ಇದೆ. ಇಲ್ಲಿ ಮತಂಗ ಮಹರ್ಷಿಗಳೆಂಬುವರು ತಪಸ್ಸನ್ನಾಚರಿಸುತ್ತಿದ್ದರು. ಕಪಿಶ್ರೇಷ್ಠ ವಾಲಿಯ ಭಯದಿಂದ, ಆತನ ತಮ್ಮ ಸುಗ್ರೀವನು ಆಶ್ರಯ ಪಡೆದ ಸ್ಥಳ.

**2. ಮತಂಗ :** ಹಂಪೆಯ ಬಳಿ ಇರುವ ಬೆಟ್ಟ. ಶಬರಿ ಆಶ್ರಮ ಇದ್ದ ಸ್ಥಳ. ಇಲ್ಲೂ ಸಹ ಮತಂಗ ಮಹರ್ಷಿಗಳು ತಪಸ್ಸನ್ನು ಆಚರಿಸಿದ್ದರು.

**3. ಕಿಷ್ಕಿಂಧಾ :** ಇದು ರಾಮಾಯಣದ ಕಾಲದಲ್ಲಿ ವಾಲಿ ಸುಗ್ರೀವರೆಂಬ ವಾನರ ರಾಜರುಗಳು

ಆಳುತ್ತಿದ್ದ ಸ್ಥಳ. ಇದು ಬೆಟ್ಟ, ಗುಡ್ಡ ಪ್ರದೇಶಗಳಿಂದ ಕೂಡಿದ್ದರಿಂದ ನಗಗಳ ಗುಂಪಿಗೆ ಸೇರಿದೆ. ಬಳ್ಳಾರಿ ಜಿಲ್ಲೆಯಲ್ಲಿ ತುಂಗಭದ್ರಾ ನದಿಯ ಉತ್ತರ ದಂಡೆಯಲ್ಲಿರುವ ಸ್ಥಳವನ್ನು ಕಿಷ್ಕಿಂಧೆಯೆಂದು ಗುರುತಿಸಿದ್ದಾರೆ. ಈಗ ಪ್ರಸಿದ್ಧವಾದ ಹಂಪೆಯೆಂಬ ಪ್ರೇಕ್ಷಣೀಯ ಸ್ಥಳವು ಇದರ ಬಳಿಯಲ್ಲಿದೆ.

**4. ಮಾಲ್ಯವದ್ಗಿರಣ್ಯ :** ಮಾಲ್ಯವಂತ ಪರ್ವತವೆಂದು ಕರೆಯುತ್ತಾರೆ. ಇದು ಆಂಧ್ರ ರಾಜ್ಯದ ಕಡಪ, ಕರ್ನೂಲು, ನೆಲ್ಲೂರು ಮತ್ತು ಗುಂಟೂರು ಜಿಲ್ಲೆಗಳಿಗೆ ಅಂಟಿದಂತಿರುವ ಪೂರ್ವ ಘಟ್ಟಗಳ ಉತ್ತರ ಭಾಗ. ಇದಕ್ಕೆ ಪ್ರಸ್ರವಣ ಪರ್ವತವೆಂದೂ ನಾಮಾಂತರವಿದೆ.

**5. ಶೃಂಗ :** ಮಹಾರಾಷ್ಟ್ರ ರಾಜ್ಯದಲ್ಲಿರುವ ನಾಸಿಕಜಿಲ್ಲೆಯಲ್ಲಿದೆ. ಸಹ್ಯಾದ್ರಿ ಪರ್ವತ ಶ್ರೇಣಿಯ ಭಾಗವಾಗಿರುವ ಪುಣ್ಯ ಕ್ಷೇತ್ರ. ಇದು ಸಪ್ತಶೃಂಗಿಯೆಂಬ ಹೆಸರಿನಿಂದ ಪ್ರಸಿದ್ಧವು. ಪವಿತ್ರ ಸಪ್ತಶೃಂಗಿ ದೇವೀ ಪೀಠವಿರುವುದು ಈ ಸ್ಥಳದಲ್ಲಿಯೇ. ಈ ದೇವಿಗೆ ತ್ರಿಕಾಲದಲ್ಲಿಯೂ ಬೇರೆ ಬೇರೆ ಅಲಂಕಾರವನ್ನು ಮಾಡುವುದು ವಿಶೇಷವು. ಈ ಪರ್ವತವು ಅನೇಕ ವಿಧವಾದ ಔಷಧೀಯ ವನಸ್ಪತಿಗಳಿಗೆ ಪ್ರಸಿದ್ಧವು.

### ೨೦. ಸಪ್ತ ಸಮುದ್ರ ಸಂವೃತೇ

ಒಂದು ಪ್ರಸಿದ್ಧ ಶ್ಲೋಕದಲ್ಲಿ ಪೃಥ್ವಿಯನ್ನು **"ಸಮುದ್ರವಸನೇ ದೇವಿ"** ಎಂಬುದಾಗಿ ಸ್ತುತಿಸಿದೆ. ಅಂದರೆ ಸಮುದ್ರವನ್ನೇ ಬಟ್ಟೆಯಂತೆ ಉಟ್ಟಿರುವವಳು ಎಂಬುದಾಗಿ ಭೂ ದೇವಿಯನ್ನು ಪ್ರಾರ್ಥನೆ ಮಾಡಿದೆ. ಇಲ್ಲಿ ಪೃಥ್ವಿಯು ಸಪ್ತ ಸಮುದ್ರಗಳಿಂದ ಸಂವೃತವಾಗಿದೆಯೆಂದು ಹೇಳಿದೆ.

ಈ ಭೂಮಿಯ ಮೇಲೆ ಸಪ್ತದ್ವೀಪಗಳಿವೆಯೆಂದೂ ಇವುಗಳನ್ನು ಆವರಿಸಿರುವ ಜಲಭಾಗವೇ ಸಪ್ತಸಮುದ್ರಗಳೆಂದು ವಿಷ್ಣು ಪುರಾಣದಲ್ಲಿ ಹೇಳಿದೆ. ಈ ಸಪ್ತ ಸಮುದ್ರಗಳ ಹೆಸರುಗಳು ಅವುಗಳ ವಾಸನಾ ಗುಣಧರ್ಮ ವಿಶೇಷಗಳಿಗನುಸಾರವಾಗಿ ಲವಣ, ಕಬ್ಬಿನ ರಸ, ಸುರೆ(ಹೆಂಡ), ತುಪ್ಪ, ಮೊಸರು ಹಾಲು ಮತ್ತು ಶುದ್ಧೋದಕವೆಂದು ಕರೆಯಲ್ಪಟ್ಟಿರಬಹುದೆಂದು ಅನೇಕರು ತಿಳಿಯುತ್ತಾರೆ. "ಈ ಸಮುದ್ರಗಳ ಮಧ್ಯೆ ಇರುವ ದ್ವೀಪ ಪ್ರದೇಶಗಳನ್ನು ಜಂಬೂ, ಪ್ಲಕ್ಷ, ಶಾಲ್ಮಲೀ, ಕುಶ, ಕ್ರೌಂಚ, ಶಾಕ ಮತ್ತು ಪುಷ್ಕರ" ಎಂಬ ಏಳು ಹೆಸರುಗಳಿಂದ ಕರೆಯುತ್ತಾರೆ. ಇಲ್ಲಿ ಕೊಟ್ಟಿರುವ ಸಪ್ತದ್ವೀಪಗಳಲ್ಲಿ ಭಾರತವು ಜಂಬೂದ್ವೀಪಕ್ಕೆ ಸೇರಿದೆ. **"ಸಪ್ತದ್ವೀಪಾ ವಸುಂಧರಾ"** ಎಂಬುದಾಗಿ ಭೂಮಿಯ ಸ್ತುತಿ ಶ್ಲೋಕದಲ್ಲಿದೆ. ಈಗ ಅನೇಕ ಮಹನೀಯರುಗಳು ಒಪ್ಪಿರುವಂತೆ, ಒಂದು ಕಾಲದಲ್ಲಿ ಭಾರತೀಯರಿಗೆ ಪೃಥ್ವಿಯ ಬಗ್ಗೆ ಇದ್ದ ಜ್ಞಾನವು ಅತ್ಯಂತ ಮೇಲ್ಮಟ್ಟದ್ದಾಗಿತ್ತು. ಮಹಾಭಾರತ ಕಾಲದ ನಂತರ ಆರ್ಯಜನಾಂಗವೇ ಪ್ರಪಂಚದ ಬೇರೆ ಬೇರೆ ದ್ವೀಪಗಳಲ್ಲಿ (ಅಂದರೆ ಇಂದಿನ ಖಂಡಗಳು) ಹೋಗಿ ನೆಲಸಿದರೆಂದೂ, ಆದ್ದರಿಂದಲೇ ಇಂದಿಗೂ ಸಕಲ ಸಂಸ್ಕೃತಿಗಳಲ್ಲೂ, ಹಿಂದೂ ಧರ್ಮದ ಅಪಭ್ರಂಶಗಳನ್ನು ಸುಲಭವಾಗಿ ಗುರುತಿಸಬಹುದೆಂದೂ, ಪ್ರಪಂಚದ ಚರಿತ್ರೆಯನ್ನು



shrinath.udupa@gmail.com

ಸಂಶೋಧಕರು ಪುನರ್ವಿಮರ್ಶಿಸಬೇಕೆಂದೂ ಒತ್ತಿ ಹೇಳಲಾಗುತ್ತಿದೆ. ಈ ವಿಚಾರದಲ್ಲಿ ಕಲ್ಪತರು ರಿಸರ್ಚ್ ಅಕಾಡೆಮಿ, ಶಂಕರಪುರಂ, ಬೆಂಗಳೂರು-4 ಇವರು ಆಂಗ್ಲಭಾಷೆಯಲ್ಲಿ ಪ್ರಕಟಿಸಿರುವ **"ಭಾರತೀಯ ಭೂತತ್ತ್ವ ರಹಸ್ಯಮ್"** ಎಂಬ ಗ್ರಂಥವನ್ನು ಪ್ರತಿಯೊಬ್ಬ ಭಾರತೀಯನೂ ಓದಲೇಬೇಕಾಗಿದೆ. ಇಂದಿನ ಅನೇಕ ಸಂಶೋಧಕರ ಅಭಿಪ್ರಾಯದಂತೆ (1) ಜಂಬೂ ದ್ವೀಪವು ಏಷ್ಯಾಖಂಡವೆಂದೂ,(2) ಪ್ಲಕ್ಷ-ದ್ವೀಪವೆಂಬುದು ದಕ್ಷಿಣ ಅಮೆರಿಕಾ ಖಂಡವೆಂದೂ (3) ಪುಷ್ಕರದ್ವೀಪವೇ ಉತ್ತರ ಅಮೆರಿಕಾವೆಂದೂ (4) ಕ್ರೌಂಚ ದ್ವೀಪವೇ ಆಫ್ರಿಕಾ ಖಂಡವೆಂದೂ (5) ಶಾಕ ದ್ವೀಪವು ಯುರೋಪ್ ಖಂಡವೆಂದೂ (6) ಶಾಲ್ಮಲೀ ದ್ವೀಪವು ಆಸ್ಟ್ರೇಲಿಯ ಮತ್ತು ಅಂಟಾರ್ಟಿಕಾ ಖಂಡವೆಂದೂ (7) ಕುಶ ದ್ವೀಪವು ಓಷನಿಯ (ಉತ್ತರ ಧ್ರುವ ಪ್ರದೇಶ)ವೆಂದೂ ಗುರುತಿಸಲ್ಪಟ್ಟಿದೆ.

### ೨೧. ಚತುಃಷಷ್ಟಿ ವಿದ್ಯಾ ನಿಷದ್ಯಾಯಮಾನ ನಿರವದ್ಯ ವಿದ್ವಜ್ಜನ ವಿದ್ಯೋತಿತೇ

ಸಕಲವಿದ್ಯಾಪಾರಂಗತನೆಂದರೆ, ಮುಖ್ಯವಾಗಿ 64 ವಿದ್ಯೆಗಳಲ್ಲಿ ಸಂಪೂರ್ಣ ಜ್ಞಾನವಿರತಕ್ಕವನೆಂದು ಹೇಳಲ್ಪಟ್ಟಿದೆ. ಭಾರತ ದೇಶವು ಇಂತಹ ವಿದ್ವಾಂಸರಿಂದ ಶೋಭಿಸುತ್ತಿರುವುದೆಂದು ಇಲ್ಲಿ ಸ್ತುತಿಸಲಾಗಿದೆ. ಇಂತಹ ಭಾರತ ದೇಶವು ತನ್ನ ಜನ್ಮಭೂಮಿಯೆಂದು ತಿಳಿಯಲು ಯಾವ ಭಾರತೀಯನಿಗೆ ತಾನೇ ಸಂತೋಷವಾಗುವುದಿಲ್ಲ? ಇಂದು ಎಲ್ಲರೂ ಕಲಿಯಬಹುದಾದ ವಿದ್ಯೆಯನ್ನು ಕಲೆ, ವಿಜ್ಞಾನ ಮತ್ತು ತಂತ್ರ ಜ್ಞಾನವೆಂಬ ಸ್ಥೂಲವಾದ ಮೂರು ಭಾಗಗಳನ್ನಾಗಿ ವಿಂಗಡಿಸಿದ್ದಾರೆ. ಬಹಳ ಹಿಂದೆಯೇ ಭಾರತ ದೇಶದಲ್ಲಿ ಕಲೆ ಮತ್ತು ಶಾಸ್ತ್ರಗಳೆಂಬ ಹೆಸರಿನಲ್ಲಿ ಸಕಲ ವಿದ್ಯೆಗಳನ್ನು ಅಳವಡಿಸಿ, ವಿಜ್ಞಾನ ಮತ್ತು ತಂತ್ರಜ್ಞಾನಗಳನ್ನು ಶಾಸ್ತ್ರಗಳೆಂಬ ಹೆಸರಿನಲ್ಲಿ ಕರೆಯುತ್ತಿದ್ದರು. ಮಹಾಸಂಕಲ್ಪದ ರಚನೆಯ ಕಾಲದಲ್ಲಿ 64 ವಿದ್ಯೆಗಳನ್ನು ಬಹುಮುಖ್ಯವಾದದ್ದೆಂದು ಪರಿಗಣಿಸಿದ್ದರು. ಇವುಗಳ ಹೆಸರಿನಿಂದಲೇ ಆಯಾ ವಿದ್ಯೆಯ ಸ್ಥೂಲ ಸ್ವರೂಪವು ತಿಳಿಯುವುದರಿಂದಲೂ, ಸ್ಥಳ ಬಾಹುಳ್ಯದಿಂದ ಇವುಗಳ ಪೂರ್ಣ ವಿವರಣೆ ಪ್ರಕೃತ ಅಸಾಧ್ಯವಾಗಿರುವುದರಿಂದಲೂ , ಇವುಗಳ ವಿವರಣೆಯನ್ನು ಸೂಕ್ಷ್ಮವಾಗಿ ತಿಳಿಸಲಾಗಿದೆ. ಮಹಾಜ್ಞಾನಿಗಳು ಮತ್ತು ಮಹಾಶಕ್ತರುಗಳು ಮಾತ್ರ ಪೂರ್ಣ ಜ್ಞಾನವನ್ನು ಪಡೆಯುತ್ತಿದ್ದ ಕೆಲವು ವಿದ್ಯೆಗಳನ್ನು ಈ ಗುಂಪಿನಲ್ಲಿ ಸೇರಿಸಿಲ್ಲದಿರುವುದು ಗಮನಿಸಬೇಕಾದ ವಿಷಯವಾಗಿದೆ. ಇವುಗಳ ಅಧ್ಯಯನವು ಎಲ್ಲರಿಗೂ ಸಾಧ್ಯವಾಗುತ್ತಿರಲಿಲ್ಲವಾದ್ದರಿಂದ ಬಹುಶಃ ಈ ದಂಡಕದಲ್ಲಿ ಸೇರಿಸಿಲ್ಲವೆಂದು ತೋರುತ್ತದೆ. ಉದಾಹರಣೆಗೆ ಧನುರ್ವಿದ್ಯಾ(ನೋಡಿ - ಷೋಡಶ ಭೂಪಾಲರು ಪು. 41), ವಾಸ್ತುಶಿಲ್ಪ, ವೈಮಾನಿಕಶಾಸ್ತ್ರ, ಜಲಶಿಲ್ಪ, ಭೂಕಂಪ, ಉದಕಾರಗಲ ಮುಂತಾದವು. ಭಾರತ ದೇಶದಲ್ಲಿ ಈ ಶಾಸ್ತ್ರಗಳ ಬಗ್ಗೆ ವಿಪುಲವಾದ ಸಾಹಿತ್ಯವಿದೆ. ಇವುಗಳ ಅಧ್ಯಯನ ಸಾಮಾನ್ಯರಿಗೆ ಕಷ್ಟಸಾಧ್ಯ. ಇವುಗಳನ್ನು ಸ್ವಲ್ಪಮಟ್ಟಿಗೆ 'ವೇದಾಂಗ'ಗಳ ಗುಂಪಿನಲ್ಲಿ ಸೇರಿಸಲಾಗಿದೆ. ಹೆಚ್ಚಿನ ವಿಚಾರಗಳನ್ನು ಕಲ್ಪತರು ಅಕಾಡಮಿಯವರು ಆಂಗ್ಲಭಾಷೆಯಲ್ಲಿ ಪ್ರಕಟಿಸಿರುವ ಭಾರತೀಯ ಭೂತತ್ತ್ವ ರಹಸ್ಯಂ ಎಂಬ ಗ್ರಂಥದಲ್ಲಿ ಸ್ವಲ್ಪ ಮಟ್ಟಿಗೆ ತಿಳಿಯಬಹುದಾಗಿದೆ.

**64 ವಿದ್ಯೆಗಳ ಸೂಕ್ಷ್ಮ ವಿವರಣೆ :**

"ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" ಎಂಬುದಾಗಿ ಶ್ರುತಿಯು ಹೇಳುತ್ತದೆ.

1. ವೇದ - ನಮ್ಮ ಸಂಸ್ಕೃತಿ, ನಾಗರಿಕತೆ, ಧರ್ಮ, ಆಚಾರ, ವ್ಯವಹಾರ, ವಿದ್ಯೆ, ಕಲೆ ಎಲ್ಲವೂ ವೇದಮೂಲವೇ ಆಗಿವೆ. ಸನಾತನವಾದ ನಮ್ಮ ಸಂಸ್ಕೃತಿಯ ಪ್ರಮಾಣಭೂತವಾದ ಈ ನಾಲ್ಕು ವೇದಗಳು ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವವೇದಗಳೆಂದು ಪ್ರಸಿದ್ಧವಾಗಿವೆ. ವೇದಗಳು ಪರಮಾತ್ಮನ ಉಸಿರೆಂದು ಹೇಳಲ್ಪಟ್ಟಿದೆ. ಇವು ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪರಮ ಪುರುಷಾರ್ಥಗಳಿಗೆ ದಾರಿತೋರುವ ದೀಪಗಳಾಗಿವೆ.

2. ವೇದಾಂಗ - ವೇದಗಳ ಅರ್ಥವನ್ನು ತಿಳಿಯಲು ಸಹಾಯಕವೆನಿಸಿರುವ ಶಾಸ್ತ್ರಗಳು. ಇವುಗಳೇ ಶಿಕ್ಷಾ, ವ್ಯಾಕರಣ, ಛಂದಸ್ಸು, ನಿರುಕ್ತ, ಜ್ಯೋತಿಷ್ಯ ಮತ್ತು ಕಲ್ಪ ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ.

(i) ಶಿಕ್ಷಾ - ಮಂತ್ರಗಳ ವರ್ಣ, ಸ್ವರ ಇತ್ಯಾದಿಗಳ ಉಚ್ಚಾರಣೆಯು ಹೇಗಿರಬೇಕು ಎಂಬುದನ್ನು ತಿಳಿಸುವ ಶಾಸ್ತ್ರ. ಋಷಿ ಪ್ರಣೀತವಾದ ಅನೇಕ ಶಿಕ್ಷಾಗಂಥಗಳಿದ್ದರೂ, ಪಾಣಿನೀಯ ಶಿಕ್ಷಾ ಮತ್ತು ನಾರದೀಯ ಶಿಕ್ಷಾ ಎಂಬುವು ಪ್ರಸಿದ್ಧವು. ಈ ಗ್ರಂಥಗಳಲ್ಲಿ ವೇದಗಳನ್ನು ಪಠಿಸುವ ಕ್ರಮ, ಉದಾತ್ತಾದಿ ಸ್ವರಗಳನ್ನು ಉಚ್ಚರಿಸುವ ವಿಧಾನ, ಸ್ವರ ವ್ಯಂಜನಾದಿ ಅಕ್ಷರಗಳ ಲಕ್ಷಣ, ಪೂರ್ವಾಹ್ನ, ಮಧ್ಯಾಹ್ನ ಮತ್ತು ಅಪರಾಹ್ನಗಳಲ್ಲಿ ಮಂತ್ರಗಳನ್ನು ಹೇಗೆ ಉಚ್ಚರಿಸಬೇಕು, ಯಜ್ಞಗಳಲ್ಲಿ ಸ್ವರ ಸೌಷ್ಠವದಿಂದ ಉಚ್ಚ, ನೀಚ, ಉಪಾಂಶು ಸ್ವರಗಳಿಂದ ಮಂತ್ರಗಳನ್ನು ಪಠಿಸುವ ಕ್ರಮ ಇತ್ಯಾದಿ ವಿಷಯಗಳ ವಿವರಣೆಯಿದೆ.

(ii) ವ್ಯಾಕರಣ - ಶಬ್ದಗಳ ನಿಷ್ಪತ್ತಿ, ಸ್ವರಗಳ ಸಂಚಾರ, ವೈದಿಕ ಶಬ್ದಗಳ ವಿಶೇಷ ನಿಷ್ಪತ್ತಿ ಇವುಗಳನ್ನು ವಿವರಿಸುವ ಶಾಸ್ತ್ರ. ಪ್ರಕೃತಿ, ಪ್ರತ್ಯಯ, ವಿಭಕ್ತಿ ಮೊದಲಾದ ಶಬ್ದ ವಿಭಾಗಗಳ ರೂಪಗಳನ್ನು ತೋರಿಸಿಕೊಟ್ಟು ಪದಸ್ವರೂಪ ಮತ್ತು ಅದರ ಅರ್ಥ ನಿಶ್ಚಯ ಮಾಡುವ ಸಂದರ್ಭಗಳನ್ನು ವಿವರಿಸುವ ಶಾಸ್ತ್ರ. ಈ ಶಾಸ್ತ್ರದಿಂದ ಆಗುವ ಪ್ರಯೋಜನವನ್ನು ವರರುಚಿ ಎಂಬುವವರು ತಮ್ಮ ವಾರ್ತಿಕ ಗ್ರಂಥದಲ್ಲಿ 'ರಕ್ಷೋಹಾಗಮಲಘ್ವಸಂದೇಹಾಃಪ್ರಯೋಜನ ಮಿತಿ' ಎಂದು ಹೇಳಿರುತ್ತಾರೆ ರಕ್ಷಾ, ಊಹ, ಆಗಮ, ಲಘು, ಅಸಂದೇಹಗಳೆಂಬುದಕ್ಕೆ ಪತಂಜಲಿ ಮಹರ್ಷಿಗಳು ತಮ್ಮ ಮಹಾಭಾಷ್ಯದಲ್ಲಿ ವಿವರಿಸಿದ್ದಾರೆ.

(iii) ಛಂದಸ್ಸು - ವೇದ ಮಂತ್ರಗಳ ದ್ರಷ್ಟಾರರಾದ ಋಷಿಗಳು, ಛಂದಸ್ಸು ಮತ್ತು ದೇವತೆಗಳನ್ನು ತಿಳಿಯದೇ ಮಂತ್ರಗಳನ್ನು ಉಪಯೋಗಿಸಿದರೆ ಯಾವ ರೀತಿಯ ಪ್ರಯೋಜನವೂ ಆಗುವುದಿಲ್ಲ. ಛಂದಸ್ಸಿನ ಅರಿವು ಬಹಳ ಮುಖ್ಯವು.



shrinath.udupa@gmail.com

'ಛಾದನಾತ್ ಛಂದಃ | ಅಂದರೆ ಅವಿದ್ಯಾದಿ ದುಃಖ ನಿವಾರಣೆ ಮಾಡುವುದರಿಂದಲೂ ಮತ್ತು ಸುಖದ ಆವರಣ ಉಂಟುಮಾಡುವುದರಿಂದಲೂ 'ಛಂದ' ಎಂಬ ಹೆಸರು ಬರುತ್ತದೆ. 'ಚದಿ-ಆಹ್ಲಾದೇ ದೀಪ್ತೌ ಚ' ಎಂಬ ಧಾತುವಿನಿಂದ 'ಛಂದ'ಶಬ್ದವು ನಿಷ್ಪನ್ನವಾಗುತ್ತದೆ. ವೇದಾಧ್ಯಯನದಿಂದ ಸಕಲ ವಿದ್ಯಾಪ್ರಾಪ್ತಿಯಾಗಿ ಮನುಷ್ಯನು ಆಹ್ಲಾದಿತನಾಗುತ್ತಾನೆ ಮತ್ತು ಸಕಲ ಅರ್ಥಗಳನ್ನು ತಿಳಿಯುತ್ತಾನೆ.

ಯಾವುದರ ಸಹಾಯವಿದ್ದರೆ ಸಾಧಕನು ಸಕಲ ವಿದ್ಯೆಗಳಿಂದ ಆವೃತನಾಗುತ್ತಾನೋ, ಅದಕ್ಕೆ 'ಛಂದ' ಎಂದು ಹೆಸರು.

ಛಂದಸ್ಸಿನಲ್ಲಿ ಲೌಕಿಕ ಮತ್ತು ವೈದಿಕಗಳೆಂದು ಎರಡು ವಿಧ

ಲೌಕಿಕ ಛಂದಸ್ಸು ಹ್ರಸ್ವ, ಧೀರ್ಘ, ಲಘು, ಗುರು ಎಂಬ ಮಾತ್ರೆಗಳಿಂದ ನಿರ್ಧರಿಸಲ್ಪಡುತ್ತದೆ.

ವೈದಿಕ ಛಂದಸ್ಸು ಸ್ವರಗಳ ಎಣಿಕೆಯಿಂದ ನಿರ್ಧರಿಸಲ್ಪಡುತ್ತದೆ.

ಲೌಕಿಕದಲ್ಲಿ ವೈದಿಕಗಳ ನಿಯಮವೂ ಅನ್ವಯವಾಗುತ್ತದೆ. ಆದರೆ ವೈದಿಕ ಛಂದಕ್ಕೆ ಲೌಕಿಕ ಛಂದಗಳ ನಿಯಮ ಅನ್ವಯವಾಗುವುದಿಲ್ಲ. ಆನಂತರದ ಭೇದದಿಂದ ಅನೇಕ ಛಂದಸ್ಸುಗಳಿದ್ದರೂ ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತಿ, ತ್ರಿಷ್ಟುಪ್ ಮತ್ತು ಜಗತೀ ಎಂಬ ಏಳು ಛಂದಸ್ಸುಗಳು ಮುಖ್ಯವಾದವು

(iv) ನಿರುಕ್ತ - ವೇದಗಳಲ್ಲಿ ಬರುವ ಕಠಿನ ಪದಗಳ ಅರ್ಥಗಳನ್ನು ತಿಳಿಸುವ ನಿಘಂಟು. ಇದು ಅತ್ಯಂತ ಪ್ರಾಚೀನ ಮತ್ತು ಬಹಳ ಮುಖ್ಯವಾದದ್ದು. ವೇದಗಳ ಮಂತ್ರಾರ್ಥ ಮಾಡುವಾಗ, ಈ ಶಾಸ್ರದ ಆವಶ್ಯಕತೆ ಬಹು ಮುಖ್ಯವು. ನಿಃ ಉಕ್ತಂ = ನಿರುಕ್ತಂ : ಎಂದರೆ ಆ ಪದದಿಂದ ಉಂಟಾಗುವ ಅರ್ಥವು ಬೇರೆ ಪದಗಳ ಸಹಾಯದಿಂದ ಆಗಬೇಕಾದುದಿಲ್ಲ ಎಂದರ್ಥವು. ನಿರುಕ್ತವೆಂದರೆ ಚೆನ್ನಾಗಿ ಅರ್ಥ ವಿವರಣೆ ಮಾಡಿರುವ ಶಬ್ದವು ಎಂದರ್ಥವು. ನೈಘಂಟುಕಾಂಡ, ನೈಗಮಕಾಂಡ ಮತ್ತು ದೈವತ ಕಾಂಡಗಳೆಂದು ಇವುಗಳಲ್ಲಿ ಮೂರು ಕಾಂಡಗಳಿವೆ. ಈ ಶಾಸ್ತ್ರವು ವ್ಯಾಕರಣ ಶಾಸ್ತ್ರದ ಸಾರಭೂತವಾಗಿದೆ. ವೇದ ಶಬ್ದಗಳ ಅರ್ಥಗಳನ್ನು ನಿರುಕ್ತದ ಸಹಾಯವಿಲ್ಲದೆ ಮಾಡುವಂತೆಯೇ ಇಲ್ಲ.

(v) ಜ್ಯೋತಿಷ - ವೇದವಿಹಿತವಾದ ಕರ್ಮಗಳನ್ನು ಸಮರ್ಪಕವಾಗಿ ಮಾಡಿ, ದೇವತೆಗಳಿಂದ ಅನುಗೃಹೀತರಾಗಬೇಕಾದರೆ, ಇವುಗಳನ್ನು ನಡೆಸುವ ಕಾಲವು ಬಹಳ ಮುಖ್ಯವಾದುದು. ಇದನ್ನು ತಿಳಿಸುವ ಶಾಸ್ತ್ರವೇ ಜ್ಯೋತಿಷ. ಮೊತ್ತ ಮೊದಲು ವೇದಾಂಗಜ್ಯೋತಿಷವೆಂಬ ಗ್ರಂಥವನ್ನು ಲಗಧ ಮುನಿಗಳು ರಚಿಸಿದರು. ಅನಂತರ ವರಾಹಮಿಹಿರ, ಭಾಸ್ಕರಾಚಾರ್ಯ, ಆರ್ಯಭಟ

ಮೊದಲಾದವರು ಈ ಶಾಸ್ತ್ರವನ್ನು ಬೆಳೆಸಿದರು. ಸಂವತ್ಸರಮೇತತ್ ವ್ರತಂ ಚರೇತ್| ( ತೈ ಆ 1.32.1)

ವಸಂತೇ ಬ್ರಾಹ್ಮಣೋಽಗ್ನಿ ಮಾದಧೀತ ಮುಂತಾದ ಶ್ರುತಿ ವ್ಯಾಕ್ಯಗಳೇ ಹೇಳುವಂತೆ ಜ್ಯೋತಿಷವನ್ನು ಆಧರಿಸಿದ ಕಾಲಗಣನೆಯ ಜ್ಞಾನವು ಅತ್ಯಾವಶ್ಯಕ.

**(vi) ಕಲ್ಪ** - ವೇದಗಳಲ್ಲಿ ಉಕ್ತವಾಗಿರುವ ಯಜ್ಞಗಳ ಅನುಷ್ಠಾನ ಕ್ರಮವನ್ನು ತಿಳಿಸುವ ಶಾಸ್ತ್ರ. ಯಜ್ಞ ಯಾಗಾದಿಗಳನ್ನು ಮಾಡುವ ವಿಧಾನಗಳನ್ನು, ವಿಧಿ ನಿಯಮಗಳನ್ನೂ, ಮಂತ್ರಗಳ ವಿನಿಯೋಗಗಳನ್ನು, ಯಜ್ಞಗಳನ್ನು ಆಚರಿಸುವ ಕ್ರಮಗಳನ್ನೂ ವಿವರಿಸುವ ಗ್ರಂಥಗಳು. ಇವು ಆಶ್ವಲಾಯನ, ಕಾತ್ಯಾಯನ, ಜೈಮಿನಿ, ಆಪಸ್ತಂಭ, ಬೋಧಾಯನ ಮೊದಲಾದ ಮಹರ್ಷಿಗಳಿಂದ ಸೂತ್ರ ರೂಪದಲ್ಲಿ ರಚಿಸಲ್ಪಟ್ಟಿವೆ. ಸೂತ್ರ ಗ್ರಂಥಗಳು ಕರ್ಮಾನುಸಾರವಾಗಿ ಅನೇಕವಿರುವುವು. ಶ್ರೌತ, ಗೃಹ್ಯ, ಧರ್ಮ, ಎಂಬ ಮೂರು ರೀತಿಯ ಸೂತ್ರಗಳಿವೆ. ಇವುಗಳಲ್ಲಿ ಶ್ರೌತ ಸೂತ್ರಗಳು ಬಹಳ ಮುಖ್ಯವು.

3. **ಇತಿಹಾಸ** - ಶ್ರೀ ವಾಲ್ಮೀಕಿ ವಿರಚಿತ ಶ್ರೀ ಮದ್ರಾಮಾಯಣವು ಮತ್ತು ಶ್ರೀ ವೇದವ್ಯಾಸ ವಿರಚಿತ ಶ್ರೀಮನ್ಮಾಹಾಭಾರತ ಇವುಗಳು ಬಹಳ ಪ್ರಸಿದ್ಧವಾದ ಇತಿಹಾಸ ಗ್ರಂಥಗಳು.

4. **ಆಗಮ** - ದೇವತೆಗಳನ್ನು ಪೂಜಿಸಿ ಅನುಗ್ರಹ ಹೊಂದುವ ಕ್ರಮ ಮತ್ತು ದೇವಾಲಯಗಳಲ್ಲಿ ಆಚರಿಸುವ ಸಕಲ ನಿಯಮಗಳನ್ನು ತಿಳಿಸುವ ಶಾಸ್ತ್ರಗಳು ಆಗಮಗಳೆನಿಸುತ್ತವೆ. ಇದರಲ್ಲಿ ಶೈವ, ವೈಷ್ಣವ, ಶಾಕ್ತೇಯವೇ ಮುಂತಾದ ಆಗಮಗಳು ಪ್ರಸಿದ್ಧವು.

5. **ನ್ಯಾಯ** - ಶಾಸ್ತ್ರಗಳಲ್ಲಿ ಹೇಳಿರುವ ಸತ್ಯಗಳನ್ನು ತರ್ಕಬದ್ಧವಾಗಿ ನಿರೂಪಿಸಲು ಸಹಾಯಕವಾದ ವಿದ್ಯೆಯು 'ನ್ಯಾಯ'ವೆಂದು ಕರೆಯಲ್ಪಟ್ಟಿದೆ. ಮುಖ್ಯವಾಗಿ ನ್ಯಾಯವೆಂಬುದು ಪರಮಾರ್ಥ ಸತ್ಯವನ್ನು ತರ್ಕಬದ್ಧವಾದ ವಾದಗಳ ಮೂಲಕ ತಿಳಿಯ ಹೇಳಲು ಪ್ರಯತ್ನಿಸುವ ದರ್ಶನ ಗ್ರಂಥವು.

6. **ಕಾವ್ಯ** - ದೃಶ್ಯ ಮತ್ತು ಶ್ರವ್ಯ ಎಂಬುದಾಗಿ ಎರಡು ವಿಧಗಳು. ಕಾಳಿದಾಸನ ಕವಿಯ ರಘುವಂಶ, ಕುಮಾರಸಂಭವ, ಮಾಘನ ಶಿಶುಪಾಲವಧ, ಭಾರವಿಯ ಕಿರಾತಾರ್ಜುನೀಯ ಮತ್ತು ಶ್ರೀಹರ್ಷನ ನೈಷಧವೆಂಬವು ಮುಖ್ಯ ಶ್ರವ್ಯ ಪದ್ಯ ಕಾವ್ಯಗಳು.

7. **ಅಲಂಕಾರ** - ಕಾವ್ಯ, ನಾಟ್ಯ, ಮತ್ತು ಸಂಗೀತ ಶಾಸ್ತ್ರವೇ ಮುಂತಾದ ಕೆಲವು ಶಾಸ್ತ್ರಗಳಲ್ಲಿ ಬೇರೆ ಬೇರೆ ವಿಧವಾದ ಅಲಂಕಾರಗಳು ವರ್ಣಿಸಲ್ಪಟ್ಟಿವೆ. ಉದಾ: ಕಾವ್ಯಗಳಲ್ಲಿ ಶಬ್ದ ಮತ್ತು ಅರ್ಥವೆಂದು ಎರಡು ಅಲಂಕಾರಗಳಿವೆ.

8. **ನಾಟಕ** - ಇತಿಹಾಸವನ್ನು ಪಾತ್ರಗಳ ಮೂಲಕ ಮನ ಮುಟ್ಟುವಂತೆ ನಿರೂಪಿಸುವ ಶಾಸ್ತ್ರ.

9. **ಗಾಯನ (ಗಾನ)** - ಮಹರ್ಷಿಗಳಿಂದ ಉತ್ಪನ್ನವಾದ ಸಂಗೀತ ಶಾಸ್ತ್ರ. ಅಗ್ನಿ, ಬ್ರಹ್ಮ, ಚಂದ್ರ, ವಿಷ್ಣು, ನಾರದ ಮತ್ತು ತುಂಬುರು - ಇವರನ್ನು ಗಾಯನಾಚಾರ್ಯರುಗಳೆಂದು ಹೇಳಲಾಗಿದೆ.



shrinath.udupa@gmail.com

10. **ಕವಿತ್ವ** - ಕಾವ್ಯಗಳನ್ನು ರಚಿಸುವ ಶಾಸ್ತ್ರೋಕ್ತ ನಿಯಮಗಳನ್ನು ತಿಳಿಸುವ ವಿದ್ಯೆ.

11. **ಕಾಮಶಾಸ್ತ್ರ** - ಗೀತ, ವಾದ್ಯ, ನೃತ್ಯ, ಸ್ಪರ್ಶಸುಖವೇ ಮೊದಲಾದ ಆರೋಗ್ಯ ಸಹಕಾರಿಗಳಾದ ಅನೇಕ ಮನೋರಂಜನೆಗಳಿಂದ ಕೂಡಿದ ಶಾಸ್ತ್ರ. ಇದು 64 ಕಲೆಗಳಿಂದ ಕೂಡಿದೆ. ವಾತ್ಸ್ಯಾಯನರಿಂದ ರಚಿತವಾದ ಅತ್ಯದ್ಭುತ ಶಾಸ್ತ್ರ.

12. **ದ್ಯೂತ ನೈಪುಣ್ಯ** - ಪಗಡೆ ಆಟವೇ ಮುಂತಾದ ಮನೋರಂಜನೆಯ ಆಟಗಳು. ಇದರಲ್ಲಿ ಕಪಟಕಲಾ ಪ್ರೌಢತ್ವವೂ ಸೇರಿದೆ.

13. **ದೇಶ ಭಾಷಾಜ್ಞಾನ** - ನಿಖಿಲ ದೇಶೀಯ ಭಾಷಾ ಪಾಂಡಿತ್ಯ

14. **ಲಿಪಿ ಕರ್ಮ** - ಲೇಖನ ಮತ್ತು ಅಕ್ಷರಗಳನ್ನು ಕೊರೆಯುವ ವಿದ್ಯೆ

15. **ವಾಚನ** - ಓದಿ ಹೇಳುವುದು ಮತ್ತು ಅರ್ಥ, ಗೂಡಾರ್ಥಗಳನ್ನು ತಿಳಿಸುವುದು.

16. **ಸಮಸ್ತಾವಧಾನ** - ವೇದ, ಪುರಾಣ, ಇತಿಹಾಸವೇ ಮುಂತಾದ ಸಕಲ ವಿಷಯಗಳ ಬಗ್ಗೆ ಕೇಳುವ ಯಾವ ಪ್ರಶ್ನೆಗಾಗರೂ ಒಂದೇ ಹೊತ್ತಿನಲ್ಲಿ ಉತ್ತರಿಸುವ ಶಕ್ತಿ.

17. **ಸ್ವರಶಾಸ್ತ್ರ** - ಉಚ್ಚಾರ ವಿಧಾನಗಳನ್ನು ತಿಳಿಸುವ ವಿದ್ಯೆ

18. **ಶಕುನ** - ಶುಭ ಮತ್ತು ಅಶುಭ ಶಕುನಗಳನ್ನು ತಿಳಿದು ಮುಂದಾಗುವುದರ ವಿಚಾರದಲ್ಲಿ ಎಚ್ಚರಿಸುವ ವಿದ್ಯೆ

19. **ಸಾಮುದ್ರಿಕ** - ಹಸ್ತ ಮತ್ತು ಅಂಗಗಳ ಮೇಲಿನ ರೇಖಾ ಲಕ್ಷಣಗಳನ್ನು ನೋಡಿ ಭವಿಷ್ಯದ ಬಗ್ಗೆ ಎಚ್ಚರಿಸುವ ವಿದ್ಯೆ

20. **ರತ್ನಪರೀಕ್ಷಾ** - ಅದ್ಭುತಗಳನ್ನು ಮಾಡಿ ತೋರಿಸಲು ಅಥವಾ ತನ್ನ ಅಭ್ಯುದಯಕ್ಕಾಗಿ ಧರಿಸುವ ರತ್ನಗಳ ವಿಚಾರಗಳನ್ನು ತಿಳಿಸುವ ವಿದ್ಯೆ

21. **ಸ್ವರ್ಣಪರೀಕ್ಷಾ** - ಚಿನ್ನದ ಶುದ್ಧ ಅಶುದ್ಧತೆಗಳ ಬಗ್ಗೆ ತಿಳಿಯುವ ವಿದ್ಯೆ

22. **ಅಶ್ವಲಕ್ಷಣ** - ಯುದ್ಧವೇ ಮುಂತಾದ ಕಾರ್ಯಗಳಿಗಾಗಿ ಯೋಗ್ಯ ಕುದುರೆಗಳನ್ನು ಆಯ್ಕೆಮಾಡುವ ವಿದ್ಯೆ.

23. **ಗಜಲಕ್ಷಣ** - ಇದೇ ಕಾರಣಕ್ಕಾಗಿ ಯೋಗ್ಯ ಆನೆಗಳನ್ನು ಆಯ್ಕೆಮಾಡುವ ವಿದ್ಯೆ

24. **ಮಲ್ಲವಿದ್ಯಾ** - ಕುಸ್ತಿಯೇ ಮುಂತಾದ ದೇಹಬಲ, ಕೌಶಲಗಳನ್ನು ಪ್ರದರ್ಶಿಸುವ ಶಾಸ್ತ್ರ

25. **ಪಾಕಕರ್ಮ** - ರುಚಿ ರುಚಿಯಾದ ಸ್ವಾದಗಳನ್ನು ತಯಾರಿಸುವ ವಿದ್ಯೆ. ಇಂದಿಗೂ ನಳಪಾಕ, ಭೀಮಪಾಕವೆಂಬ ನುಡಿಗಳು ಪ್ರಸಿದ್ಧವಾಗಿವೆ.

26. **ದೋಹಲ** - ದೋಹಲವೆಂದರೆ ಆರೋಗ್ಯಕರ, ನೆರಳುಕೊಡುವ ಮತ್ತು ಔಷಧಗಳಿಗೆ ಉಪಯೋಗವಾಗುವ ಮುಖ್ಯ ವೃಕ್ಷಗಳು. ಇವುಗಳು ಅಶೋಕ, ವಕುಳ, ಚೂತ, ಸುರಹೊನ್ನೆ, ತಿಲಕ, ಕುರುವಕ, ಕರ್ಣಿಕಾರ, ಸಿಂಧುವಾರ, ಪ್ರಿಯಾಳು ಮತ್ತು

ಚಂಪಕವೆಂಬ ದಶವೃಕ್ಷಗಳು. ಇವುಗಳನ್ನು ಸಮರ್ಪಕವಾಗಿ ಬೆಳೆಯುವಂತೆ ಮಾಡುವ ವಿದ್ಯೆಗೆ ದೋಹಲ ವಿದ್ಯೆಯೆಂದು ಹೆಸರು. (ಉದಾ- ಅಶೋಕ ವೃಕ್ಷ ಮೊಳಕೆಯಲ್ಲಿದ್ದಾಗ ಹೆಂಗೆಳೆಯರ ಪಾದ ಸ್ಪರ್ಶವಾದರೆ ಚೆನ್ನಾಗಿ ಚಿಗುರುತ್ತದೆ. ಸುರೆಯಿಂದ ಬಾಯಿಮುಕ್ಕಳಿಸಿ ವಕುಳವೃಕ್ಷದ ಮೇಲೆ ಸಿಂಪಡಿಸಿದರೆ, ಆ ವೃಕ್ಷವು ಚೆನ್ನಾಗಿ ಬೆಳೆಯುತ್ತವೆ ಎಂಬ ನಂಬಿಕೆಯಿದೆ.

27. ಗಂಧವಾದ - ಗಂಧಕವನ್ನು ಮಿಶ್ರಣ ಮಾಡುವುದು, ಭಸ್ಮವಾಗಿ ಇಳಿಸುವುದು. ಶುದ್ಧೀಕರಿಸುವುದು ಇತ್ಯಾದಿ.

28. ಧಾತುವಾದ - ಧಾತುಗಳ ಮಿಶ್ರಣ. ಭಸ್ಮವಾಗಿ ಪರಿವರ್ತಿಸುವುದು ಮತ್ತು ಮಿಶ್ರಧಾತುಗಳನ್ನು ಬೇರ್ಪಡಿಸುವುದು ಇತ್ಯಾದಿ.

29. ಖನಿವಾದ - ನಿಧಿ ನಿಕ್ಷೇಪವನ್ನು ಗುರುತು ಹಚ್ಚಿ, ಅದನ್ನು ಅಧೀನ ಮಾಡಿಕೊಳ್ಳುವುದು. ಖನಿಜಗಳು ವಿಪುಲವಾಗಿ ಸಿಕ್ಕುವ ಸ್ಥಳಗಳನ್ನು ಪತ್ತೆಮಾಡುವ ವಿಧಾನ - ಇತ್ಯಾದಿ.

30. ರಸವಾದ - ಪಾದರಸ ಮಿಶ್ರಣ ಇತ್ಯಾದಿ. ಅಥವಾ ಯಾವುದೇ ಲೋಹವನ್ನು ಸ್ವರ್ಣವನ್ನಾಗಿ ಮಾಡುವ ವಿದ್ಯೆ.

31. ಅಗ್ನಿಸ್ತಂಭನ - ಅಗ್ನಿಯ ಸುಡುವ ಗುಣಗಳನ್ನು ತಡೆಗೊಳಿಸಿ, ಯಾವ ಬಾಧೆಯೂ ಇಲ್ಲದೇ ನಡೆಯುವ ಅಥವಾ ಬೆಂಕಿಯನ್ನು ಕೈಯಲ್ಲಿ ಹಿಡಿಯುವ ಮಾಂತ್ರಿಕ ವಿದ್ಯೆ.

32. ಜಲಸ್ತಂಭನ - ಜಲಶಕ್ತಿಯನ್ನು ತಡೆಗೊಳಿಸುವ ವಿದ್ಯೆ. ನೀರಿನಲ್ಲಿಯೇ ಕುಳಿತಿದ್ದರೂ ಉಸಿರಿನ ತೊಂದರೆಯನ್ನು ಹೊಂದದಿರುವ ಶಕ್ತಿ. ಮಹಾಭಾರತದಲ್ಲಿ ಧುರ್ಯೋಧನನು ಇದನ್ನು ಪ್ರಯೋಗಿಸಿದ ಸಂದರ್ಭವಿದೆ.

33. ವಾಯುಸ್ತಂಭನ - ವಾಯು (ಗಾಳಿ)ವಿನಿಂದ ಆಗುವ ತೊಂದರೆಗಳಿಂದ ಪಾರಾಗುವ ವಿದ್ಯೆ.

34. ಖಡ್ಗಸ್ತಂಭನ - ಖಡ್ಗದ ಏಟುಗಳಿಂದ ತೊಂದರೆಯಾಗದಂತೆ, ದೇಹದ ಶಕ್ತಿಯನ್ನು ಮಾರ್ಪಡಿಸಿಕೊಳ್ಳುವ ವಿದ್ಯೆ.

35. ವಶ್ಯ - ಮರುಳುಗೊಳಿಸಿ, ಮಂಕುಮಾಡಿ ಪರರನ್ನು ವಶಪಡಿಸಿಕೊಳ್ಳುವ ವಿದ್ಯೆ.

36. ಆಕರ್ಷಣ - ಅನ್ಯವ್ಯಕ್ತಿಯನ್ನು ತನ್ನೆಡೆಗೆ ಬರಸೆಳೆದುಕೊಳ್ಳುವ ವಿದ್ಯೆ

37. ಮೋಹನ - ತನ್ನ ಚಾತುರ್ಯದಿಂದ ಯಾರನ್ನು ಬೇಕಾದರೂ ಮೋಹಗೊಳ್ಳುವಂತೆ ಮಾಡುವ ವಿದ್ಯೆ.

38. ವಿದ್ವೇಷಣ - ಒಬ್ಬನು ಇನ್ನೊಬ್ಬನನ್ನು ದ್ವೇಷಿಸುವಂತೆ ಮಾಡಲು ಸಹಕಾರಿಯಾಗುವ ವಿದ್ಯೆ. ಇದನ್ನು ಚಾಣಕ್ಯನೀತಿಯಲ್ಲಿ ಕಾಣಬಹುದು.

39. ಉಚ್ಚಾಟನ - ಭೂತ, ಪ್ರೇತ, ಪಿಶಾಚಿಗಳು ಅಥವಾ ಆ ರೀತಿಯಲ್ಲಿ ವರ್ತಿಸುವ ಮನುಷ್ಯ- ಇವರುಗಳನ್ನು ಗೃಹದಿಂದ ಹೊರಕ್ಕೆ ಓಡಿಸುವ ತಂತ್ರ.



40. ಮಾರಣ - ಅಭಿಚಾರ ವಿದ್ಯೆ. ಅಸುರೀ ಶಕ್ತಿಗಳ ಸಹಾಯದಿಂದ ಮತ್ತೊಬ್ಬರನ್ನು ಕೊಲ್ಲುವ ತಂತ್ರ.

41. ಕಾಲ ವಂಚನ - ಒಬ್ಬನು ತನ್ನ ಜೀವಿತವನ್ನು ಅಥವಾ ಕಾಲಧರ್ಮವನ್ನು ಮುಂದೂಡಿಸಿಕೊಳ್ಳಲು ಸಹಾಯಕವಾಗುವ ವಿದ್ಯೆ. ಅನುಕೂಲ ಪ್ರತಿಕೂಲಗಳ ಸಮಯವನ್ನು ಅರಿತು ಕೆಲಸಗಳನ್ನು ಪ್ರಾರಂಭಿಸುವುದು.

42. ವಾಣಿಜ್ಯ - ವ್ಯಾಪಾರ ಮತ್ತು ವ್ಯವಹಾರಗಳ ಜ್ಞಾನ.

43. ಪಾಶುಪಾಲ್ಯ - ಪ್ರಾಣಿಗಳನ್ನು ಪಾಲಿಸುವ ವಿದ್ಯೆ.

44. ಕೃಷಿ - ಗಿಡ, ಮರ ಮುಂತಾದ ವನಸ್ಪತಿಗಳನ್ನು ಸಮರ್ಪಕವಾಗಿ ಬೆಳೆಸಿ, ಪೋಷಿಸುವ ಶಾಸ್ತ್ರ.

45. ಅಶ್ವಕರ್ಮ - ಕುದುರೆಗಳನ್ನು ಸಾಕಿ, ಪೋಷಿಸುವ ಶಾಸ್ತ್ರ. ನಳ ಮಹಾರಾಜನು ಅಶ್ವಹೃದಯವನ್ನು ತಿಳಿದಿದ್ದನೆಂದೂ, ಆತನ ಸಾರಥ್ಯದಲ್ಲಿ ಋತುಪರ್ಣನು ತನ್ನ ರಾಜಧಾನಿಯಾದ ವಿದರ್ಭದಿಂದ ಅಯೋಧ್ಯೆಗೆ ಒಂದೇ ದಿನದಲ್ಲಿ ತಲಪಿದನೆಂದು ಮಹಾಭಾರತದಲ್ಲಿ ಉಕ್ತವಾಗಿದೆ.

46. ಲಾವುಕ - ತಿತ್ತಿರೀ ಪಕ್ಷಿ, ಹುಂಜ, ಟಗರು ಮುಂತಾದವುಗಳನ್ನು ಹೋರಾಡುವಂತೆ, ಅವುಗಳಿಗೆ ತರಬೇತಿ ನೀಡುವ ಕೌಶಲ.

47. ಯುದ್ಧ - (ಅ) ಮೇಲೆ ಹೇಳಿದ ಪ್ರಾಣಿಗಳನ್ನು ಹೋರಾಡುವಂತೆ ಮಾಡಿ, ಜನಗಳನ್ನು ಮನೋರಂಜನೆಗೊಳಿಸುವ ಚಾತುರ್ಯ.

(ಆ) ವ್ಯಾಪಕಾರ್ಥದಲ್ಲಿ ಯುದ್ಧವೆಂಬುದು ಕೇವಲ ಮನೋರಂಜನೆಯಲ್ಲ. ಮಹಾಭಾರತ ಯುದ್ಧದಲ್ಲಿ ಇದರ ಕುಶಲತೆಯನ್ನು ವಿವರವಾಗಿ ಕಾಣಬಹುದು. ಮಕರ, ಚಕ್ರ, ಪದ್ಮ ಮುಂತಾದ ಹೆಸರಿನ ವ್ಯೂಹ ರಚನೆಗಳು, ಸೈನ್ಯ ಸಂಯೋಜನೆ ಮಾಡುವಾಗ ಬಹಳ ಮುಖ್ಯವಾದ ಅಂಗವು. ಇದಲ್ಲದೇ ರಥಗಳನ್ನು ನಡೆಸುವ ಅಶ್ವವಿದ್ಯೆ, ದಿವ್ಯಾಸ್ತ್ರಗಳ ಪ್ರಯೋಗ, ಅವುಗಳ ಉಪಸಂಹಾರ, ಸಿದ್ಧಿ ಮುಂತಾದವುಗಳು ಯುದ್ಧದಲ್ಲಿ ಜಯಾಪಜಯಗಳನ್ನು ನಿರ್ಧರಿಸುವ ಅಂಶಗಳು (ನೋಡಿ - ಶೋಡಶ ಭೂಪಾಲರು)

48. ಮೃಗಯಾ - ಕಾಡು ಪ್ರಾಣಿಗಳ ಉಪಟಳದಿಂದ ಜನರನ್ನು ರಕ್ಷಿಸಲು, ಅವುಗಳನ್ನು ಬೇಟೆಯಾಡಲು ತರಬೇತಿ ನೀಡುವ ಶಾಸ್ತ್ರ.

49. ರತಿಕೌಶಲ - ಸ್ತ್ರೀಯರನ್ನು ಬಳಸಿಕೊಂಡು ರಾಜಕಾರ್ಯಗಳನ್ನು ಚತುರತೆಯಿಂದ ಸಾಧಿಸುವ ವಿದ್ಯೆ. (ನೋಡಿ - ಕಾಮ ಶಾಸ್ತ್ರ)

50. ಅದೃಶ್ಯಕರಣೀ - ಪರರ ಕಣ್ಣಿಗೆ ಕಾಣಿಸಿಕೊಳ್ಳದಂತೆ, ತಾನು ಅದೃಶ್ಯನಾದಂತೆ ತೋರಿಕೆ ಬರಿಸುವ ವಿದ್ಯೆ.



shrinath.udupa@gmail.com

51. ದ್ಯೂತಕರಣೀ - ವಿಧವಿಧವಾದ ಜೂಜಿನ ಆಟಗಳಲ್ಲಿ ಕೌಶಲ

52. ಚಿತ್ರಲೋಹ ಮೃದ್ದಾರು ಚರ್ಮಾಂಬರ ಕ್ರಿಯೆ - ಲೋಹ, ಮಣ್ಣು, ಮರ, ಚರ್ಮ, ಮುಂತಾದವುಗಳಿಂದ ಕವಚಗಳನ್ನು ತಯಾರಿಸುವ ವಿದ್ಯೆ.

53. ಚೌರ್ಯ - ರಾಜಕೀಯದಲ್ಲಿ ಸಮಯೋಚಿತವಾದ ಕಳ್ಳತನವನ್ನು ಮಾಡುವ ವಿದ್ಯೆ. ಇದು ವಸ್ತು ಅಥವಾ ವಾಕ್ ರೂಪದಲ್ಲೂ ಇರುವುದು.

54. ಔಷಧಿಸಿದ್ಧಿ - ವನಸ್ಪತಿ ಮತ್ತು ಮೂಲಿಕೆಗಳಿಂದ ಆರೋಗ್ಯ ಸಾಧನೆಗಾಗಿ ಮಾಡುವ ಔಷಧಗಳ ತಿಳುವಳಿಕೆ. ಅಂದರೆ ಆಯುರ್ವೇದ ಶಾಸ್ತ್ರ.

55. ಮಂತ್ರಸಿದ್ಧಿ - ಕಾರ್ಯಸಾಧನೆಗಳಿಗಾಗಿ ಉಪಯೋಗಿಸುವ ಮಂತ್ರಗಳನ್ನು ಅನುಷ್ಠಿಸಿ, ಸಿದ್ಧಿ ಹೊಂದುವ ವಿದ್ಯೆ.

56. ಸ್ವರವಂಚನ - ಸ್ವರವನ್ನು ವ್ಯತ್ಯಯಗೊಳಿಸಿ ಇತರರನ್ನು ವಂಚಿಸುವುದು. ತನ್ನ ಸ್ವರವನ್ನು ಬದಲಾಯಿಸಿ ಪರರಂತೆ ಮಾತನಾಡುವ ವಿದ್ಯೆ.

57. ದೃಷ್ಟಿವಂಚನ - ಮನುಷ್ಯನ ದೃಷ್ಟಿಯನ್ನು ವಂಚಿಸುವುದು. ಇಲ್ಲದಿರುವುದನ್ನು ಕಾಣುವಂತೆ ಮಾಡಿ ಮಂಕು ಬರಿಸುವುದು.

58. ಅಂಜನ - ಭೂತಾಂಜನ, ದ್ರವ್ಯಾಂಜನ ಮತ್ತು ಅದೃಶ್ಯಾಂಜನವೇ ಮೊದಲಾದ ಅಂಜನಗಳನ್ನು ತಯಾರಿಸುವುದರಲ್ಲಿ ನಿಪುಣತೆ. ಸಾಮಾನ್ಯ ದೃಷ್ಟಿಗೆ ಗೋಚರವಾಗದ್ದನ್ನು ಇದರ ಸಹಾಯದಿಂಧ ಸ್ಪಷ್ಟವಾಗಿ ಕಾಣಬಹುದು.

59. ಜಲಪ್ಲವನ - ಆತ್ಮರಕ್ಷಣೆ ಮುಂತಾದ ಸಂದರ್ಭದಲ್ಲಿ ನೀರಿನಲ್ಲಿ ಧುಮುಕಿ ತಪ್ಪಿಸಿಕೊಳ್ಳುವ ಚಾತುರ್ಯ.

60. ವಾಕ್ಸಿದ್ಧಿ - ಮಾತನಾಡುವ ಚತುರತೆಯಿಂದ ಸಕಲವನ್ನೂ ಸಿದ್ಧಿಸಿಕೊಳ್ಳುವ ವಿಧಾನ.

61. ಘುಟಿಕಾಸಿದ್ಧಿ - ಗುಳಿಗೆಗಳನ್ನು ತಯಾರಿಸಿ, ಅದರಿಂದ ಅದ್ಭುತ ಕಾರ್ಯಗಳನ್ನು ಮಾಡುವ ಸಿದ್ಧಿ.

62. ಪಾದುಕಾಸಿದ್ಧಿ - ಇಷ್ಟಬಂದೆಡೆಗೆ ತಕ್ಷಣವೇ ಸೇರಲು ಸಹಾಯಕವಾದ ವಿದ್ಯೆ.

63. ಇಂದ್ರಜಾಲ - ಪರರಿಗೆ ಭ್ರಮೆಯನ್ನು ಉಂಟುಮಾಡುವ ವಿದ್ಯೆ.

64. ಮಹೇಂದ್ರಜಾಲ - ಸಮೂಹಗಳಿಗೂ ಸಹ ಭ್ರಮೆಯನ್ನು ಉಂಟುಮಾಡುವ ವಿದ್ಯೆ.

### ೨೨. ಷಟ್ಪಂಚಾಶತ್ ದೇಶ - ಐವತ್ತಾರು ರಾಜ್ಯಗಳು

ಮಹಾಪರಾಕ್ರಮಶಾಲಿಗಳಾದ ಭೂಪಾಲರುಗಳಿಂದ ಆಳಲ್ಪಟ್ಟಿದ್ದ, ಕರ್ಮಭೂಮಿಯೆನಿಸಿಕೊಂಡು, ಸಕಲವಿಧವಾದ ಅಧ್ಯಾತ್ಮ ಸಾಧನೆಗಳಿಗೂ ಕ್ಷೇತ್ರವೆನಿಸಿ, ತಪೋಭೂಮಿಯಾಗಿಯೂ, ಅತ್ಯಂತ ಪುಣ್ಯಭೂಮಿಯಾಗಿಯೂ ಮೆರೆದು, ವಿಶ್ವಾತ್ಮಭಾವಯುಕ್ತರಾದ ತಪಸ್ವಿಗಳಿಂದ ಕೂಡಿದ್ದ, ಪ್ರಪಂಚದ ಮೂಲೆ ಮೂಲೆಗಳಿಂದ ಜನರನ್ನು ಆಕರ್ಷಿಸುತ್ತಿದ್ದ ಈ ವಿಶಾಲ ಭಾರತ ದೇಶವು ದ್ರೋಹಿಗಳ ಸಹಾಯದಿಂದ, ಕೊಬ್ಬಿದ



shrinath.udupa@gmail.com

ಪರಕೀಯರ ತುಳಿತಕ್ಕೆ ತುತ್ತಾಗಿ, ತನ್ನ ಸಂಸ್ಕೃತಿಯನ್ನು ಕಳೆದುಕೊಂಡು, ಇಂದು ರೆಕ್ಕೆಪುಕ್ಕಗಳನ್ನು ಕಳೆದುಕೊಂಡ ಪಕ್ಷಿಯಂತೆ, ಛಿದ್ರವಾಗಿ, ಕರ್ಮಭೂಮಿಯೋ ಅಥವಾ ಇದೂ ಸಹ ಭೋಗಭೂಮಿಯೋ ಎಂಬ ಜಿಜ್ಞಾಸೆಗೆ ಒಳಗಾಗಿ, ತನ್ನತನವನ್ನು ಕಳೆದುಕೊಳ್ಳುತ್ತಿರುವ ಮತ್ತು ಭಾರತೀಯ ಪವಿತ್ರ ಸಂಸ್ಕೃತಿಯನ್ನು ಹಾಳುಗೆಡಹುವವ ಶಕ್ತಿಗಳಿಂದ ತುಂಬಿ, ಅಧೋಗತಿಗೆ ಹೋಗುತ್ತಿರುವುದನ್ನು ನೋಡಿದರೆ ಪ್ರತಿಯೊಬ್ಬ ಭಾರತೀಯನೆನಿಸಿಕೊಂಡಿರುವವನೂ ತಲೆ ತಗ್ಗಿಸುವಂತಹ ಸ್ಥಿತಿಯು ಬಂದಿದೆಯೆಂದರೆ ಅತಿಶಯೋಕ್ತಿಯಾಗಲಾರದು. ವಿಶಾಲ ಭಾರತವನ್ನು ನಿರ್ದೇಶಿಸುವ ಷಟ್ಪಂಚಾಶತ್ ದೇಶಗಳ ವಿವರಣೆಯು ಪ್ರತಿಯೊಬ್ಬ ಭಾರತೀಯನೂ ತಿಳಿಯಲೇಬೇಕಾದ ಸಂಗತಿಯಾಗಿದೆ. ತನ್ನ ದೇಶದ ವ್ಯಾಪ್ತಿಯನ್ನೇ ತಿಳಿಯದೆ, ಕೇವಲ ಭಿನ್ನಾಭಿಪ್ರಾಯಗಳನ್ನು ಹೊಂದಿ, ಪರಸ್ಪರದೂಷಣೆಯಲ್ಲಿ ತೊಡಗಿ, ಭಾರತವನ್ನು ಮತ್ತೂ ಛಿದ್ರಮಾಡುತ್ತಿರುವ ಅಜ್ಞಾನವನ್ನೇ ಜ್ಞಾನವನ್ನಾಗಿ ತಿಳಿದು ನರಳುತ್ತಿರುವ ಈ ಕಾಲದಲ್ಲಿ ಪ್ರತಿಯೊಬ್ಬರೂ ಜಾಗೃತರಾಗಬೇಕಾದ ಅವಶ್ಯಕತೆ ಹಿಂದಿಗಿಂತಲೂ ಇಂದು ಹೆಚ್ಚಾಗಿದೆ. ಚಾರಿತ್ರಿಕ ದೃಷ್ಟಿಯಿಂದ ಭಾರತೀಯರಿಗೆ ಎಂದೂ ಆಕ್ರಮಣಾಕಾಂಕ್ಷೆ ಇಲ್ಲ. ಆದರೆ ಆಕ್ರಮಣಕ್ಕೆ ಒಳಗಾಗಿ ಹೇಡಿತನದಿಂದ ತ್ಯಾಗ ಮನೋಭಾವ ಪ್ರದರ್ಶಿಸುವುದೂ ಸಹ ಭಾರತದ ಚರಿತ್ರೆಯಲ್ಲಿಲ್ಲ. ಸಾತ್ವಿಕ ಭಾವನೆಗಳನ್ನು ಮತ್ತು ವಿಶ್ವಾತ್ಮಭಾವವನ್ನು ಪ್ರಪಂಚದ ಮೂಲೆ ಮೂಲೆಗೂ ತಲುಪಿಸಬೇಕೆಂಬ ಭಾವನೆಯು ಮಾತ್ರ ಇದೆ. "ಸರ್ವೇ ಜನಾಃ ಸುಖಿನೋ ಭವನ್ತು" ಎನ್ನುವ ಸೂತ್ರದಿಂದ ಭಾರತೀಯರ ಸೃಜನಶೀಲ ಗುಣ ಎಂದೆಂದೂ ಮೆಚ್ಚುಗೆಯನ್ನು ಪಡೆದೇ ಇದೆ. ಇಂದೂ ಕೂಡ ಆ ದಿಕ್ಕಿನಲ್ಲಿ ನಾವುಗಳು ಜ್ಞಾನ ಸಾಮ್ರಾಜ್ಯವನ್ನು ವಿಸ್ತರಿಸಬೇಕಾದ ಅಗತ್ಯವಿದೆ. ಇದರ ಪರಿಪೂರ್ಣತೆಯೇ ನಮ್ಮ ಗುರಿಯು. ಇದರ ಸಾಧನೆಗೆ ಸುಸಂಸ್ಕೃತಿಯ ಬೇರು ಈ ದೇಶದಲ್ಲಿ ಮೊದಲು ಭದ್ರವಾಗಬೇಕಾದುದು ಅತ್ಯಂತ ಅವಶ್ಯವು. ಈ ವಿವರಣೆಗಳ ಮೂಲಕ ಹಿಂದೆ ವೈಭವದಿಂದ ಮೆರೆದ ವಿಶಾಲ ಭಾರತದ ಪರಿಚಯವನ್ನು ತಿಳಿಸಲು ಕಿರು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಭಾರತ ದೇಶದಿಂದ ಹೊರಗೂ ಸಹ ನಮ್ಮ ಸಂಸ್ಕೃತಿಯು ಎಷ್ಟರ ಮಟ್ಟಿಗೆ ವ್ಯಾಪ್ತವಾಗಿತ್ತೆಂಬ ವಿಚಾರಗಳನ್ನು ವಿವರವಾಗಿ ತಿಳಿಸಿರುವ "An Intruduction to Hindu Culture - Published by Ramakrishna Mutt - Bangalore" ಎಂಬ ಗ್ರಂಥವನ್ನು ಹೆಚ್ಚಿನ ವಿಷಯಗಳಿಗಾಗಿ ನೋಡಬಹುದಾಗಿದೆ.

1. **ಅಂಗ :** ಅಂಗನೆಂಬ ರಾಜನು ಆಳುತ್ತಿದ್ದ ದೇಶ. ಗಂಗಾ ಸರಯೂ ನದಿಗಳ ನಡುವೆ ಇದೆ. ಈಗ ಈ ಸ್ಥಳವನ್ನು ಬಾಗಲಪುರವೆಂದು ಕರೆಯುತ್ತಾರೆ. ಇದರ ರಾಜಧಾನಿ ಚಂಪಾಪುರಿಯೆಂಬುದಾಗಿದ್ದಿತು. ಶಿವನ ಮೂರನೇ ಕಣ್ಣಿನಿಂದ ಹತನಾಗಿದ್ದ ಮನ್ಮಥನು ಪುನಃ ತನ್ನ ಅಂಗಗಳನ್ನು ಶಿವಾನುಗ್ರಹದಿಂದ ಈ ಸ್ಥಳದಲ್ಲಿ ಪಡೆದಿದ್ದರಿಂದ ಈ ಹೆಸರು ಬಂದಿತು. ತ್ರೇತಾಯುಗದಲ್ಲಿ ರೋಮಪಾದನೆಂಬವನು ಇಲ್ಲಿ ಆಳುತ್ತಿದ್ದನೆಂದು ಉಕ್ತವಾಗಿದೆ. ಪಾಂಡವರ ಕಾಲದಲ್ಲಿ ಕರ್ಣನಿಗೆ ದುರ್ಯೋಧನನು ಪಟ್ಟಕಟ್ಟಿ ದಯಪಾಲಿಸಿದ ರಾಜ್ಯವೂ ಇದೇ ಆಗಿತ್ತು.

**2. ವಂಗ :** ಇಂದಿನ ಬಂಗಾಳ ದೇಶ, ಪಾಂಡವರ ಕಾಲದಲ್ಲಿ ಸಮುದ್ರಸೇನ ಮತ್ತು ಚಂದ್ರಸೇನರೆಂಬ ರಾಜರು ಆಳಿದ ದೇಶ.

**3. ಕಳಿಂಗ :** ಚಂದ್ರವಂಶದ ಯಯಾತಿರಾಜನ ವಂಶದಲ್ಲಿ ಜನಿಸಿದ ಕಳಿಂಗನೆಂಬುವನು ಈ ರಾಜ್ಯವನ್ನು ಸ್ಥಾಪಿಸಿದ್ದರಿಂದ, ಈತನ ಹೆಸರಿನಿಂದಲೇ ಪ್ರಸಿದ್ಧವಾಯಿತು. ಇದು ಉತ್ಕಲದಲ್ಲಿ ವೈತರಣೀ ನದಿಯ ದಕ್ಷಿಣಕ್ಕೂ, ಕೃಷ್ಣಾನದಿಯ ಉತ್ತರಕ್ಕೂ ಇದೆ. ಈಗ ಈ ಸ್ಥಳವನ್ನು ಆಂಧ್ರ ರಾಜ್ಯದಲ್ಲಿರುವ ರಾಜಮಹೇಂದ್ರಿಯೆಂಬ ನಗರವೆಂದು ಗುರುತಿಸಲಾಗಿದೆ. ಪಾಂಡವರ ಕಾಲದಲ್ಲಿ ದುರ್ಯೋಧನನ ಸೋದರ ಮಾವನಾದ ಚಿತ್ರಾಂಗದನೆಂಬುವನು ಇಲ್ಲಿ ಆಳುತ್ತಿದ್ದ. ಅಂದಿನ ರಾಜಧಾನಿಯನ್ನು ರಾಜಪುರವೆಂದು ಕರೆಯುತ್ತಿದ್ದರು.

**4. ಕಾಶ್ಮೀರ :** ಇದು ಪ್ರಪಂಚದಲ್ಲೇ ಅತ್ಯಂತ ಪ್ರಖ್ಯಾತವಾಗಿರುವ ಸ್ಥಳ. ಭಾರತದ ಮೂರ್ಧನ್ಯವೆಂದೂ ವಿಖ್ಯಾತವಾದ ಕಾಶ್ಮೀರದ ಸ್ವಲ್ಪ ಭಾಗ ದುರದೃಷ್ಟಕರ ಪರಿಸ್ಥಿತಿಗಳಿಂದ ನೆರೆಯ ದೇಶವಾದ ಪಾಕಿಸ್ಥಾನಕ್ಕೂ ಹಂಚಿಹೋಗಿದೆ. ಶ್ರೀನಗರವೆಂಬುದು ಇದರ ರಾಜಧಾನಿ. ಚಾರಿತ್ರಿಕ ದೃಷ್ಟಿಯಿಂದ ಅತ್ಯಂತ ಪ್ರಾಚೀನ ಮತ್ತು ಭಾರತದೇಶದ ಪ್ರಮುಖ ಸ್ಥಳ. ಝೀಲಂ ನದಿಯ ಇಕ್ಕೆಲಗಳಲ್ಲಿಯೂ ಸುಂದರವಾಗಿ ರೂಪುಗೊಂಡಿರುವ ಪ್ರೇಕ್ಷಣೀಯ ನಗರವಾಗಿದೆ. ಶ್ರೀ ಶಂಕರಾಚಾರ್ಯರು ಈ ಸ್ಥಳದಲ್ಲಿ ಒಂದು ಸರ್ವಜ್ಞ ಪೀಠವನ್ನು ಸ್ಥಾಪಿಸಿದ್ದರು. ದಕ್ಷಯಜ್ಞದಲ್ಲಿ ತನ್ನ ದೇಹವನ್ನು ಯಜ್ಞದಲ್ಲಿ ಅರ್ಪಿಸಿದ ಸತೀದೇವಿಯು, ನಂತರ ಈ ಸ್ಥಳದಲ್ಲಿ ನೀರಿನ ರೂಪದಲ್ಲಿ ಆವಿರ್ಭವಿಸಿ ಪವಿತ್ರವಾದ ಸರೋವರವಾಯಿತೆಂದೂ, ಅಂದಿನಿಂದ ಈ ಸ್ಥಳಕ್ಕೆ ಸತೀಸರ್ ಅಥವಾ ಕಾ-ಸಮೀರ್ ಎಂಬ ಹೆಸರಾಯಿತೆಂದೂ, ಕಾಲಕ್ರಮದಲ್ಲಿ ಈ ಹೆಸರೇ ಕಾಶ್ಮೀರವೆಂದಾಯಿತೆಂದೂ ಹೇಳುವರು (ಸಂಸ್ಕೃತದಲ್ಲಿ "ಕ" ಎಂದರೆ ಜಲವೆಂದೂ, "ಸಂ-ಈರ್" ಎಂದರೆ ಜಲದಿಂದ ಆವೃತವಾದ ಭೂಮಿಯೆಂದೂ ಅರ್ಥೈಸಿದ್ದಾರೆ). ಪುರಾಣಗಳಲ್ಲಿ ಅಗಸ್ತ್ಯ ಮಹರ್ಷಿಗಳು ಇಲ್ಲಿದ್ದ ನೀರನ್ನೆಲ್ಲಾ ಬರಿದುಮಾಡಿ, ಸುಂದರ ದೇಶವನ್ನಾಗಿ ನಿರ್ಮಾಣ ಮಾಡಿದರೆಂದು ವರ್ಣಿಸಲ್ಪಟ್ಟಿದೆ. ಭೂಗೋಳ ತಜ್ಞರುಗಳೂ ಕೂಡ, ಈ ಸ್ಥಳವು ನೀರಿನಿಂದ ಆವೃತ್ತವಾಗಿತ್ತೆಂದು ಸಮರ್ಥನೆಯನ್ನು ನೀಡಿದ್ದಾರೆ (A Sketch - of the Geography & Geology of the Himalayan Mountain & Tibet by S. G. Burrard & H.H. Hayden - part III P. 169). ಈ ಕಾಲವನ್ನು 2666 ಕ್ರಿ. ಪೂ. ವೆಂದು ನಿರ್ಧಾರಮಾಡಿರುತ್ತಾರೆ. ಈ ಸ್ಥಳವನ್ನು ಮಹಾಭಾರತ ಯುದ್ಧಕ್ಕೆ 30 ವರ್ಷಗಳ ಮೊದಲು ಗೋನಂದನನೆಂಬ ರಾಜನು ಆಳಿದನೆಂದೂ ರಾಜತರಂಗಿಣಿಯಲ್ಲಿ ಉಲ್ಲೇಖವಾಗಿದೆ. ರಾಮಾಯಣದಲ್ಲೂ ಉಲ್ಲೇಖವಾಗಿರುವ ಈ ಸ್ಥಳ ಅತ್ಯಂತ ಪ್ರಾಚೀನವಾದುದು. ಈಚೆಗೆ ಮೌರ್ಯರ ಕಾಲದಲ್ಲಿ ಅಶೋಕ ರಾಜನಿಂದ ಆಳಲ್ಪಟ್ಟ, ಅಂದಿನ ರಾಜಧಾನಿಯು ಇಂದಿನ, ಶ್ರೀನಗರಕ್ಕೆ ಮೂರು ಮೈಲು ಹತ್ತಿರದಲ್ಲಿದೆ. ಕಾಲಕ್ರಮದಲ್ಲಿ ಹೂಣರಿಂದ ಆಕ್ರಮಿಸಲ್ಪಟ್ಟು, ಪ್ರಜೆಗಳ ರಕ್ತಪಾತದಿಂದ ದೇಶವು ಕ್ಷೋಭೆಗೊಂಡಾಗ, ಸುಮಾರು ಕ್ರಿ. ಶ. 5 ಅಥವಾ 6ರಲ್ಲಿ ಭಾರತದ ಪ್ರಸಿದ್ಧ ಕವಿ ಕಣ್ಮಣಿ ಕಾಳಿದಾಸರು ಜನಿಸಿದರೆಂದೂ, ಇಲ್ಲಿರಲು ಸಾಧ್ಯವಾಗದೇ ಆ



shrinath.udupa@gmail.com

ಸಂದರ್ಭದಲ್ಲಿ ಅವರು ಭಾರತ ದೇಶದ ಅನ್ಯ ಪ್ರಾಂತಗಳಲ್ಲಿ ಸಂಚರಿಸುತ್ತಿದ್ದರೆಂದೂ ಚರಿತ್ರಕಾರರ ಅಭಿಪ್ರಾಯವಾಗಿದೆ. ರಘುವಂಶ ಕಾವ್ಯದಲ್ಲೂ ಸಹ ಹೂಣರ ಉಲ್ಲೇಖವಿದೆ. ವಿಸ್ತಾರಭಯದಿಂದ ಈ ದೇಶದ ವಿವರಣೆಯನ್ನು ಇಲ್ಲಿ ಸ್ವಲ್ಪಮಟ್ಟಿಗೆ ಮಾತ್ರ ತಿಳಿಸಿದೆ. **ಇಂದು ಭಾರತದೇಶದ ಅವಿಭಾಜ್ಯ ಅಂಗವಾದ ಕಾಶ್ಮೀರ ರಾಜ್ಯದ ರಾಜಕೀಯ ಪರಿಸ್ಥಿತಿಯು ಅತ್ಯಂತ ಕ್ಲಿಷ್ಟವಾಗಿರುವುದರಿಂದ ಪ್ರತಿಯೊಬ್ಬ ಭಾರತೀಯನೂ ಸಂಪೂರ್ಣವಾಗಿ ತಿಳಿಯಬೇಕಾದ ಆವಶ್ಯಕತೆಯಿದೆ.** ಇದಕ್ಕೆ ಸಹಾಯವಾಗಿ ಇಂದು ಅನೇಕ ಗ್ರಂಥಗಳು ಲಭ್ಯವಿವೆ. ಇದರಲ್ಲಿ ಪ್ರಮುಖವಾದುದು ಕಲ್ಹಣನಿಂದ ರಚಿತವಾಗಿರುವ **"ರಾಜತರಂಗಿಣಿ"**ಯೆಂಬ ಸಂಸ್ಕೃತ ಗ್ರಂಥವಾಗಿದೆ. ಇದರ ಪ್ರಾಂತೀಯ ಭಾಷಾನುವಾದವೂ ಲಭ್ಯವಿದೆ..

**5. ಕಾಂಬೋಜ :** ನಿಷಧ ಪರ್ವತಕ್ಕೆ ದಕ್ಷಿಣದಲ್ಲಿದೆ. (ಭೀಷ್ಮ 9). ಅಶ್ವಗಳಿಗೆ ಉತ್ಪತ್ತಿ ಸ್ಥಾನವಾದ್ದರಿಂದ ಅಶ್ವಸ್ಥಾನವೆಂದೂ ಕರೆಯಲ್ಪಟ್ಟಿತ್ತು. ರಾಜಸೂಯ ಯಾಗದ ಸಂದರ್ಭದಲ್ಲಿ ಅರ್ಜುನನು ದಿಗ್ವಿಜಯಕ್ಕೆ ಹೊರಟಾಗ ಇಲ್ಲಿಗೂ ಹೋಗಿದ್ದನೆಂದು ಮಹಾಭಾರತದಲ್ಲಿ ಹೇಳಲ್ಪಟ್ಟಿದೆ. ಇದರ ಅರಸು ಸುದಕ್ಷಿಣನೆಂಬುವನನ್ನು ಭಾರತದ ಮಹಾಯುದ್ಧದಲ್ಲಿ ಅರ್ಜುನನು ಸಂಹರಿಸಿದ. (ದ್ರೋಣ 92) ಒಂದು ಕಾಲದಲ್ಲಿ ಭಾರತೀಯರ ಆಡಳಿತಕ್ಕೆ ಒಳಪಟ್ಟಿದ್ದ ಈ ದೇಶವು ಈಗ ' ಕಾಂಬೋಡಿಯಾ' ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ. ಭಾರತ ದೇಶಕ್ಕೆ ಆಗ್ನೇಯ ದಿಕ್ಕಿನಲ್ಲಿರುವ ಈ ದೇಶವನ್ನು ಅಶ್ವತ್ಥಾಮನ ಶಿಷ್ಯನಾದ ಕೌಂಡಿನ್ಯನೆಂಬುವನು ಸ್ಥಾಪಿಸಿದ್ದನು. ಈತನು ನಾಗಾ- ರಾಜಕುಮಾರಿಯೊಬ್ಬಳನ್ನು ವಿವಾಹವಾಗಿ ಭಾವಪುರವೆಂಬ ರಾಜಧಾನಿಯನ್ನು ಸ್ಥಾಪಿಸಿ, ಸೋಮವಂಶದ ರಾಜರುಗಳ ಆಧಿಪತ್ಯವನ್ನು ಪ್ರಾರಂಭಿಸಿದ್ದನೆಂದು ಹೇಳುತ್ತಾರೆ. ಅಗಸ್ತ್ಯ ಮಹರ್ಷಿಗಳು ಹಿಂದೂ ಧರ್ಮವನ್ನು ಆಗ್ನೇಯ ದೇಶಗಳಲ್ಲಿ ಬಹುವಾಗಿ ಪ್ರಚಾರಕ್ಕೆ ತಂದರೆಂದೂ, ಈಗಲೂ ಸಹ ಇವರನ್ನು ಕಾಂಬೋಡಿಯದಲ್ಲಿ ಅತ್ಯಂತ ಗೌರವದಿಂದ ಸ್ಮರಿಸುವುದು ಪ್ರಸಿದ್ಧ ವಿಷಯವಾಗಿದೆ. ಸಂಸ್ಕೃತ ಭಾಷೆಯ ಅನೇಕ ಶಾಸನಗಳನ್ನು ಅಲ್ಲಿ ಈಗಲೂ ಕಾಣಬಹುದಾಗಿದೆ. ಹಲವಾರು ಹಿಂದೂ ದೇವಾಲಯಗಳನ್ನು ಹೊಂದಿರುವ ಈ ದೇಶದಲ್ಲಿ ಕ್ರಿ.ಶ. 1112-1152 ರಲ್ಲಿ ಸೂರ್ಯವರ್ಮನೆಂಬುವನಿಂದ ಕಟ್ಟಿಸಲ್ಪಟ್ಟಿದ್ದ ' ಅಂಕೋರ್ ವಾಟ್' ಎಂಬ ದೇವಾಲಯವು ಈಗಲೂ ಅತ್ಯಂತ ಪ್ರಸಿದ್ಧವಾಗಿದೆ.

**6. ಕಾಮರೂಪ :** ಇಂದಿನ ಅಸ್ಸಾಂ ರಾಜ್ಯವು ಪುರಾಣ ಮತ್ತು ತಾಂತ್ರಿಕ ಕಾಲದಲ್ಲಿ ಕಾಮರೂಪವೆಂದು ಪ್ರಸಿದ್ಧಿಗೊಂಡಿದ್ದಿತು. ಶಕ್ತಿ ಪೀಠಗಳಲ್ಲಿ ಅತಿ ಪ್ರಮುಖವಾದ ಕಾಮಾಖ್ಯವೆಂಬ ದೇವೀ ಪೀಠವು ಇಲ್ಲಿಯೇ ಇರುವುದು. (ನೋಡಿ - ಶಕ್ತಿ ಪೀಠಗಳು) ಈ ದೇಶದ ರಾಜಧಾನಿಯು ಪ್ರಾಗ್ಜ್ಯೋತಿಷಪುರವೆಂದು ಪ್ರಸಿದ್ಧಿಯಾಗಿದ್ದಿತು. 'ಪ್ರಾಕ್' ಎಂದರೆ ಸೃಷ್ಟಿಯು, ಮತ್ತು 'ಜ್ಯೋತಿಷ' ಎಂದರೆ ಗ್ರಹನಕ್ಷತ್ರಾದಿಗಳೆಂಬ ಅರ್ಥದಲ್ಲಿ, ಬ್ರಹ್ಮದೇವರು ಈ ಸ್ಥಳದಿಂದಲೇ ಗ್ರಹನಕ್ಷತ್ರಾದಿಗಳನ್ನು ಸೃಷ್ಟಿಸಿದ್ದರಿಂದ ಈ ಸ್ಥಳಕ್ಕೆ ಈ ಹೆಸರು ಬಂದಿತೆಂದು ಕಾಳಿಕಾಪುರಾಣದಲ್ಲಿ ಉಲ್ಲೇಖವಿದೆ. ಇಂದಿಗೂ ಸಹ ಅನೇಕ ದೇವೀ ಆರಾಧಕರ, ತಮ್ಮ

ಆಧ್ಯಾತ್ಮಿಕ ಸಾಧನೆಗಾಗಿ ಇಲ್ಲಿರುವ ಕಾಮಾಖ್ಯ ಪೀಠವನ್ನು ಆರಿಸಿಕೊಳ್ಳುತ್ತಾರೆ.

**7. ಸೌವೀರಾ :** ಪುರಾಣ ಪ್ರಸಿದ್ಧ ದೇಶ. (ಭಾರ. ಭೀ. 9). ಸಿಂಧು ಮತ್ತು ಝೀಲಂ (ಇಂದಿನ ಶ್ರೀನಗರ) ನದಿಗಳ ನಡುವೆ ಇದ್ದ ದೇಶವೆಂದು ಗುರುತಿಸಲ್ಪಟ್ಟಿದೆ.

**8. ಸೌರಾಷ್ಟ್ರ :** ಇಂದಿನ ಗುಜರಾತ್ ಪ್ರಾಂತ್ಯವು. ಶ್ರೀಕೃಷ್ಣ ಬಲರಾಮರು ಆಳಿದ ದ್ವಾರಕಾನಗರ ಮತ್ತು ದ್ವಾದಶಜ್ಯೋತಿರ್ಲಿಂಗಗಳಲ್ಲಿ ಒಂದಾದ ಸೋಮನಾಥ, ಪ್ರಭಾಸ ಮುಂತಾದ ಪವಿತ್ರ ಕ್ಷೇತ್ರಗಳನ್ನು ಹೊಂದಿರುವ ಪ್ರದೇಶ. ಇಂದಿನ ಸೂರತ್ ನಗರವೇ ಅಂದಿನ ಸೌರಾಷ್ಟ್ರವೆಂದೂ ಹೇಳುತ್ತಾರೆ. ಇದರ ಉಲ್ಲೇಖವು ಭಾರತದ ಸಭಾಪರ್ವದಲ್ಲಿದೆ.

**9. ಮಹಾರಾಷ್ಟ್ರ :** ಇಂದು ಮುಂಬಯಿ ರಾಜಧಾನಿಯನ್ನು ಹೊಂದಿರುವ ರಾಜ್ಯ. ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಪ್ರಸಿದ್ಧವಾದ ಭೀಮೇಶ್ವರ (ಪೂಣೆಯ ಬಳಿ), ತ್ರ್ಯಂಬಕೇಶ್ವರ (ನಾಸಿಕ ಕ್ಷೇತ್ರ) ಘೃಣೇಶ್ವರ (ಘುಷ್ಮೇಶ) (ಎಲ್ಲೋರ ಗುಹಾಂತರ ದೇವಾಲಯದ ಬಳಿ), ನಾಗೇಶ್ವರ (ಫರ್‌ಬನಿ ರೇಲ್ವೆ ನಿಲ್ದಾಣದಿಂದ 28ಮೈಲು ದೂರದಲ್ಲಿ) ಮತ್ತು ವೈದ್ಯನಾಥೇಶ್ವರ (ಫರ್‌ಬನಿ ರೇಲ್ವೆ ನಿಲ್ದಾಣದಿಂದ 40ಮೈಲು ದೂರದಲ್ಲಿ) ಎಂಬ ಐದು ಜ್ಯೋತಿರ್ಲಿಂಗಗಳನ್ನು ಹೊಂದಿರುವ ಸ್ಥಳ.

**10. ಬಂಗಾಳ :** ವಿಶಾಲ ಭಾರತದಲ್ಲಿ ಈಶಾನ್ಯಕ್ಕಿದ್ದ ಪ್ರಾಂತ್ಯವು. ಇದರ ಕೆಲವು ಭಾಗಗಳು ಇಂದು ಪರದೇಶವಾದ ಬಾಂಗ್ಲಾದೇಶಕ್ಕೂ ಸೇರಿಹೋಗಿವೆ. ಇಂದು ಇದಕ್ಕೆ ಪಶ್ಚಿಮ ಬಂಗಾಳ ಎಂಬ ಹೆಸರಿದ್ದು ಇದರ ರಾಜಧಾನಿ ಕೊಲ್ಕತ್ತಾ ನಗರವಾಗಿದೆ. ಕಾಳೀಘಾಟ್ ಎಂಬ ಶಕ್ತಿದೇವತೆಯ ಪೀಠವೂ ಇಲ್ಲಿಯೆ ಇದೆ. ಈ ಗ್ರಾಮದಲ್ಲಿ ಉತ್ಪತ್ತಿಯಾಗುತ್ತಿದ್ದ ಆದಾಯವನ್ನು ಕಾಳಿಕಾದೇವಿಯ ಪೂಜೆಗಾಗಿಯೇ ವಿನಿಯೋಗಿಸುತ್ತಿದ್ದುದರಿಂದ ಈ ಸ್ಥಳವನ್ನು "ಕಾಳೀಕರ್ತಾ" ಎಂದು ಕರೆಯುತ್ತಿದ್ದು, ಕಾಲಕ್ರಮದಲ್ಲಿ ಕೊಲ್ಕತ್ತಾ ಆಗಿರಬಹುದು. ಮಹನೀಯರಾದ ರಾಮಕೃಷ್ಣ ಪರಮಹಂಸ, ಸ್ವಾಮಿವಿವೇಕಾನಂದ, ಅರವಿಂದಘೋಷ್, ನೇತಾಜಿ ಸುಭಾಷ್‌ಚಂದ್ರ ಬೋಸ್ ಮುಂತಾದವರು ಜನಿಸಿದ ಸ್ಥಳ.

**11. ನೇಪಾಳ :** ಹಿಮಾಲಯ ಪರ್ವತಶ್ರೇಣಿಯ ಬಹು ಮುಖ್ಯ ಶಿಖರಗಳನ್ನೊಳಗೊಂಡಿರುವ ಪ್ರದೇಶ. ಅನ್ನಪೂರ್ಣ, ಧವಳಗಿರಿ, ಮುಕ್ತಿನಾಥ, ಎವರೆಸ್ಟ್ ಮುಂತಾದ ಅತಿ ಎತ್ತರವಾದ ಶಿಖರಗಳು ಈ ಪ್ರದೇಶದಲ್ಲೇ ತಲೆ ಎತ್ತಿ ನಿಂತಿವೆ. ಇಲ್ಲಿ ದೊರಕಿರುವ ಅತ್ಯಂತ ಹಳೆ ಗುರುತುಗಳು ಮೌರ್ಯರ ಕಾಲಕ್ಕೆ ಸೇರಿದುವೆಂದು ಹೇಳಲ್ಪಟ್ಟಿವೆ. (ಕ್ರಿ. ಪೂ. 3-4) ಕ್ರಿ. ಶ. 5ನೇ ಶತಮಾನದಲ್ಲಿ ಲಿಚ್ಛವೀ ದೊರೆಗಳು ವೈಷ್ಣವ ಪಂಥವನ್ನು ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿ ಪ್ರಚಾರ ಮಾಡಿದ್ದರು. 9ನೇ ಶತಮಾನದಲ್ಲಿ ಶೈವರ ಪ್ರಾಬಲ್ಯವು ಹೆಚ್ಚಾಗಿದ್ದಿತು. ಅಶೋಕನಿಂದ ನಿರ್ಮಿಸಲ್ಪಟ್ಟ ಸ್ತೂಪವು ಇಲ್ಲಿ ಪ್ರಸಿದ್ಧವಾಗಿದೆ. ಪ್ರವಾಸಿಗಳ ಆಕರ್ಷಕ ಕೇಂದ್ರವೆನಿಸಿರುವ ಖಟ್ಮಂಡು ಇಲ್ಲಿಯೇ ಇರುವುದು. ಅನೇಕ ಹಿಂದೂ ದೇವಾಲಯಗಳಿಂದ ಕೂಡಿದ ಸ್ಥಳ. ಪಶುಪತಿನಾಥ, ದೇವಿಪೀಠ, ಗುಹ್ಯೇಶ್ವರಿ ಮತ್ತು ಅನೇಕ



shrinath.udupa@gmail.com

ವಿಷ್ಣುಕ್ಷೇತ್ರಗಳು ಇಲ್ಲಿ ಅತ್ಯಂತ ಪ್ರಮುಖ ಕ್ಷೇತ್ರಗಳೆನಿಸಿವೆ.

**12. ಮಲಯಾಳ :** ಪಶ್ಚಿಮ ಸಮುದ್ರ ತೀರದಲ್ಲಿರುವ ಪ್ರಾಂತ್ಯ. ಇಂದಿನ ಕೇರಳ ಪ್ರಾಂತದ ಭಾಗವಿರಬಹುದು. ಇಲ್ಲಿ ಪ್ರಮೀಳಾ ಎಂಬ ಸ್ತ್ರೀರಾಜ್ಯವಿತ್ತೆಂದೂ ಇಲ್ಲಿ ಆಳುತ್ತಿದ್ದ ಪ್ರಮೀಳಾಯೆಂಬವಳು, ಧರ್ಮರಾಜನ ಅಶ್ವಮೇಧಯಾಗ ಸಂದರ್ಭದಲ್ಲಿ, ಅರ್ಜುನನ ಯಾಗ ಕುದುರೆಯನ್ನು ಕಟ್ಟಿ, ನಂತರ ಯುದ್ಧಮಾಡಿ, ಅರ್ಜುನನನ್ನೇ ವಿವಾಹವಾದಳೆಂದೂ ಹೇಳಲ್ಪಟ್ಟಿದೆ. (ಜೈಮಿನಿ ಭಾರತ)

**13. ಕೇರಳ :** ಭಾರತದ ಪಶ್ಚಿಮ ಘಟ್ಟಗಳ ಇಳಿಜಾರಿನಲ್ಲಿ, ಸಮುದ್ರತೀರಕ್ಕೆ ಹೊಂದಿಕೊಂಡಿರುವ ಪ್ರದೇಶ. ಪಾಂಡವರ ರಾಜಸೂಯ ಯಾಗದ ಸಮಯದಲ್ಲಿ ಈ ದೇಶವು ಚಂದ್ರಹಾಸನ ತಂದೆಯಾದ ಸುಧರ್ಮನೆಂಬುವನ ಆಳ್ವಿಕೆಗೆ ಒಳಪಟ್ಟಿತ್ತು. (ಭಾರತ - ಸಭಾ. 32). ತಿರುವನಂತಪುರವೆಂಬುದು ಇಂದಿನ ರಾಜಧಾನಿ.

**14. ಸಿಂಹಳ :** ವಿಶಾಲಭಾರತದ ಆಡಳಿತಕ್ಕೆ ಒಳಪಟ್ಟಿದ್ದ ದೇಶ. ಭಾರತ ದೇಶದ ದಕ್ಷಿಣತುದಿಯಿಂದ ಕೇವಲ 35 ಕಿ. ಮೀ. ಹತ್ತಿರದಲ್ಲಿರುವ ಒಂದು ದ್ವೀಪ. ಈಗ ಶ್ರೀಲಂಕಾ ಎಂದು ಪ್ರಸಿದ್ಧವಾಗಿದೆ. ಕುಬೇರ ದೇವತೆಯ ಆಡಳಿತದಲ್ಲಿದ್ದು, ನಂತರ ರಾಮಾಯಣದ ಕಾಲದಲ್ಲಿ ರಾವಣಾಸುರನಿಂದ ಆಳಲ್ಪಟ್ಟ ದೇಶ. ಭೌಗೋಳಿಕ ದೃಷ್ಟಿಯಿಂದ ಭಾರತಕ್ಕೆ ಸೇರಿದ್ದ ದೇಶವೇ ಆದರೂ, ಸುಮಾರು ಹತ್ತು ಸಾವಿರ ವರ್ಷಗಳ ಹಿಂದೆ ಸಮುದ್ರದ ನೀರಿನಿಂದ ಬೇರ್ಪಟ್ಟು ಒಂದು ದ್ವೀಪವಾಯಿತೆಂದು ಕೆಲವು ಭೂಗರ್ಭ ಶಾಸ್ತ್ರಜ್ಞರು ಹೇಳುತ್ತಾರೆ. ರಾಮಾಯಣದಲ್ಲಿ ಈ ದ್ವೀಪವು 800ಮೈಲು ಉದ್ದವಿತ್ತೆಂದು ಹೇಳಲ್ಪಟ್ಟಿದೆ.

ಸಿಂಹಳದ ಅನೇಕ ಭಾಗಗಳು ಸಮುದ್ರದಲ್ಲಿ ಮುಳುಗಿಹೋಗಿವೆಯೆಂದು ಹೇಳಲ್ಪಟ್ಟಿದೆ. (ಗಾರ್ಗ್ಯ ಸಂ.) ಇಂದಿನ 'ಶ್ರೀಲಂಕಾ' ಎಂಬುದು ಇದರ ಒಂದು ಭಾಗವು.

**15. ಪಾಂಚಾಲ :** ಇಂದಿನ ದೆಹಲಿಯಲ್ಲಿರುವ 'ಕುತುಬ್‌ಮಿನಾರ್' ಎಂಬ ಸ್ಥಳದಲ್ಲಿ ಪಾಂಡವರ ಇಂದ್ರಪ್ರಸ್ಥವೆಂಬ ಪ್ರಸಿದ್ಧ ಸ್ಥಳವಿದ್ದಿತು. ಇದಕ್ಕೆ ಪೂರ್ವ ದಿಕ್ಕಿನಲ್ಲಿದ್ದ ಒಂದು ದೇಶಕ್ಕೆ ಪಾಂಚಾಲವೆಂಬ ಹೆಸರಿತ್ತು. ದ್ರುಪದರಾಜನು ಆಳಿದ ರಾಜ್ಯ. ಈ ಭಾಗವನ್ನು ಈಗ ರೋಹಿಲ್‌ಖಂಡವೆಂದು ಕರೆಯುತ್ತಾರೆ.

**16. ಚೋಳ :** ದಕ್ಷಿಣ ಭಾರತದ ಒಂದು ಪ್ರಸಿದ್ಧ ದೇಶ. ಇಂದಿನ ತಮಿಳುನಾಡು ರಾಜ್ಯಕ್ಕೆ ಸೇರಿದುದು. ಚೋಳರು ನಿರ್ಮಿಸಿರುವ ಬೃಹದಾಕಾರದ ದೇವಾಲಯಗಳು ಇಂದಿಗೂ ವಿಸ್ಮಯಕಾರಿಯಾಗಿವೆ.

**17. ಕೋಸಲ :** ಶ್ರೀರಾಮಚಂದ್ರನು ಆಳಿದ ದೇಶ. ಇದರ ರಾಜಧಾನಿಯೇ ಅಯೋಧ್ಯಾಕ್ಷೇತ್ರ. ಸೂರ್ಯವಂಶದ ರಾಜರುಗಳು ಬಹಳ ಪುರಾತನ ಕಾಲದಿಂದಲೂ ಆಳಿದ ಕ್ಷೇತ್ರ. ಪವಿತ್ರ ಸರಯೂ ನದಿ ಇಲ್ಲಿಯೇ ಹರಿಯುತ್ತಿರುವುದು.

**18. ಕುಂತಲ :** ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಒಂದು ಭಾಗ. ಪಾಂಡವರ

ಕಾಲದಲ್ಲಿ ಇದು ಬಹಳ ಪ್ರಸಿದ್ಧವಾದ ದೇಶವೆನಿಸಿತ್ತು. ಈಗ ಇದನ್ನು "ಕುರುಗೋಡು" ಎಂಬುದಾಗಿ ಕರೆಯುತ್ತಾರೆ. ಇದು ಚಂದ್ರಹಾಸನ ಆಳ್ವಿಕೆಗೆ ಒಳಪಟ್ಟಿತ್ತು. ಪ್ರಾಚೀನ ಕಾಲದಲ್ಲಿ ಇದನ್ನು "ಸೌರಾಷ್ಟ್ರದೇಶ"ವೆಂದು ಕರೆಯುತ್ತಿದ್ದರು. ಅಂದಿನ ಈ ವಿಶಾಲ ಕುಂತಲ ದೇಶಕ್ಕೆ ನಂಜನಗೂಡಿನ ನಂಜುಂಡೇಶ್ವರ, ನಾಸಿಕದ ತ್ರ್ಯಂಬಕೇಶ್ವರ, ಶ್ರೀಶೈಲದ ಮಲ್ಲಿಕಾರ್ಜುನ, ಧರ್ಮಸ್ಥಳದ ಶ್ರೀ ಮಂಜುನಾಥೇಶ್ವರ ದೇವರುಗಳು ಗಡಿ ದೇವತೆಗಳಾಗಿದ್ದವೆಂದು ಹೇಳಲ್ಪಟ್ಟಿದೆ. (ಉತ್ತರ ಕರ್ನಾಟಕ ದರ್ಶನ - ಕನ್ನಡ ಸಾಹಿತ್ಯ ಪರಿಷತ್)

**19.** ಜ್ವಾಲಾ : ಇದು ಒಂದು ಒಳದೇಶವಿರಬಹುದು.

**20.** ಸಾಲ್ವ : (i) ಮಹಾಭಾರತ ಕಾಲದಲ್ಲಿ ಸಾಲ್ವನೆಂಬುವನು ಆಳಿದ್ದರಿಂದ ಸಾಲ್ವದೇಶವೆಂದಾಯಿತು. (ii) ವಿಶಾಲ ಭಾರತದ ಅವಿಭಾಜ್ಯ ಅಂಗವಾಗಿದ್ದ ಈ ಭಾಗವು ಇಂದು ಪರದೇಶಕ್ಕೆ ಸೇರಿಹೋಗಿರುವುದೆಂದು ಹೇಳುತ್ತಾರೆ. (iii) ಸಾವಿತ್ರೀ-ಸತ್ಯವಾನರ ಕಥೆಯಲ್ಲಿ ಬರುವ ಸತ್ಯವಾನನ ತಂದೆ ದ್ಯುಮತ್ಸೇನನು ಆಳಿದ ದೇಶ.

**21.** ಮಗಧ : ಇದು ಪುರಾಣಕಾಲದಿಂದಲೂ ಪ್ರಸಿದ್ಧವಾಗಿರುವ ದೇಶ. ಇಂದಿನ ಬಿಹಾರ ರಾಜ್ಯ ಈ ದೇಶದ ಭಾಗವೆನಿಸಿತ್ತೆಂದು ಗುರುತಿಸಿದ್ದಾರೆ. ರಾಜಗಿರಿ ಎಂಬುದು ಪುರಾತನಕಾಲದ ರಾಜಧಾನಿ. ರಾಮಾಯಣದ ಕಾಲದಲ್ಲಿ ದಶರಥ ಮಹಾರಾಜನ ಸೊಸೆ ಸುಮಿತ್ರೆಯ ತಂದೆಯಾದ ಶೂರಸೇನನೆಂಬುವನು ಆಳಿದ ಸ್ಥಳ. ಪಾಂಡವರ ಕಾಲದಲ್ಲಿ ಜರಾಸಂಧನು ಆಳುತ್ತಿದ್ದ. ಚಾರಿತ್ರಿಕ ದೃಷ್ಟಿಯಿಂದ ಭಾರತ ದೇಶಕ್ಕೆ ಬಹುಮುಖ್ಯವಾದ ದೇಶ. ವಿಶಾಲ ಭಾರತದ ಮೇಲ್ಮೆಗಾಗಿ ಬಹುಮುಖ್ಯ ನಿರ್ಣಯಗಳನ್ನು ಸಾಧಿಸಿದ ದೇಶ. ಇಡೀ ಭಾರತವನ್ನು ಒಂದು ರಾಜಕೀಯ ಅಧಿಕಾರಕ್ಕೆ ಒಳಪಡಿಸಲು ಮಹಾಭಾರತ ಕಾಲದಲ್ಲಿ ಪ್ರಯತ್ನ ನಡೆದು, ಅದನ್ನು ಪಾಂಡವರ ನಿರ್ಣಾಯಕ ಗೆಲುವಿನಿಂದ ಸಾಧಿಸಲಾಯಿತು. ಅವರ ನಂತರದ ದಿನಗಳಲ್ಲಿ ಪುನಃ ರಾಜಕೀಯ ದೃಷ್ಟಿಯಿಂದ ಭಾರತದಲ್ಲಿ ಹಲವಾರು ರಾಜ್ಯಗಳು ನಿರ್ಮಾಣವಾದುವು. ಭಾರತದ ಏಕತೆಗೆ ಒಂದು ಬೃಹತ್ ಪ್ರಯತ್ನವನ್ನು ನಡೆಯಿಸಿದ ಮಗಧ ರಾಜ್ಯ ಸ್ಥಾಪನೆಯು ಇಂದಿನ ಸ್ಥಿತಿಯಲ್ಲಿ ಯೋಚಿಸಲೇಬೇಕಾದ ವಿಷಯವಾಗಿದೆ. ಅಲೆಕ್ಸಾಂಡರನು ಭಾರತದ ಮೇಲೆ ದಂಡಯಾತ್ರೆಯನ್ನು ನಡೆಸುತ್ತಿದ್ದಾಗ, ಕದನಗಳಿಂದ ಬಹಳವಾಗಿ ಬಳಲಿ ಸೈನ್ಯ ಸಮೇತವಾಗಿ ಹಿಂತಿರುಗಬೇಕಾದ ಪ್ರಸಂಗವೊದಗಿ ಕ್ರಿ. ಪೂ. 326ರಲ್ಲಿ ಛಿದ್ರ ಭಾರತವನ್ನು ಬಿಟ್ಟು ತೆರಳಿದನು. ನಂತರ ಮೌರ್ಯವಂಶದ ಚಂದ್ರಗುಪ್ತನೆಂಬುವನು, ವಿಷ್ಣುಗುಪ್ತನೆಂಬ ಓರ್ವ ಬ್ರಾಹ್ಮಣೋತ್ತಮನ ಸಹಾಯದಿಂದ ಕ್ರಿ. ಪೂ. 322ರಲ್ಲಿ ಮಗಧ ರಾಜ್ಯವನ್ನು ಸ್ಥಾಪಿಸಿದನು.

ಈ ವಿಷ್ಣುಗುಪ್ತನ ವಿಚಾರವು ತಿಳಿಯಬೇಕಾದ ವಿಚಾರವಾಗಿದೆ. ಇವನು ಕೌಟಿಲ್ಯನೆಂದೂ, ಚಾಣಕ್ಯನೆಂದೂ ಪ್ರಸಿದ್ಧ. ಇವನ ಬಗ್ಗೆ ಉಲ್ಲೇಖವು ಪುರಾಣಗಳಲ್ಲೂ ಸಹ ಬಂದಿದೆ. (ಉದಾ. : ವಿಷ್ಣು - ಭವಿಷ್ಯ ಪುರಾಣ). ಇವನು ಶುಕ್ರಾಚಾರ್ಯರಿಂದ ಪ್ರಣೀತವಾದ ದಂಡನೀತಿಯೆಂಬ ಶಾಸ್ತ್ರವನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿದ್ದನು. ತಾನು ಶುಕ್ರಾಚಾರ್ಯರ ಧರ್ಮಪುತ್ರನೆಂದೇ ಭಾವಿಸಿದ್ದನು. ಇವನು ಅರ್ಥಶಾಸ್ತ್ರವೆಂಬ ರಾಜನೀತಿ



shrinath.udupa@gmail.com

ಗ್ರಂಥವನ್ನು ರಚಿಸಿದ್ದು, ಇದು ಪ್ರಪಂಚದಲ್ಲೇ ಇಂದಿಗೂ ಅತ್ಯಂತ ಪ್ರಖ್ಯಾತವಾಗಿರುವ ಗ್ರಂಥವಾಗಿದೆ. ಇಂತಹ ಮಹಾನ್ ವ್ಯಕ್ತಿಯ ವಿಚಾರದಲ್ಲಿ ನೀತಿಸಾರವೆಂಬ ಗ್ರಂಥವು ಈ ರೀತಿ ಹೇಳುತ್ತದೆ.

"ಶಕ್ತ್ಯಾಯುಧ ಸಮೇತನಾದ ಸ್ಕಂದನನ್ನು ಹೋಲುವ ಯಾವನು ತಾನೊಬ್ಬನೇ ಮಂತ್ರಿತ್ವ ಶಕ್ತಿಯಿಂದ ಮಾನವರ ಮಧ್ಯೆ ಚಂದ್ರನಂತಿದ್ದ ಚಂದ್ರಗುಪ್ತನಿಗೆ ಪೃಥ್ವಿರಾಜ್ಯವನ್ನು ತಂದು ಕೊಟ್ಟನೋ, ಬುದ್ಧಿಶಾಲಿಯಾದ ಯಾವನು ಅರ್ಥಶಾಸ್ತ್ರವೆಂಬ ಮಹಾಸಾಗರದಿಂದ ರಾಜನೀತಿ ಶಾಸ್ತ್ರವೆಂಬ ಅಮೃತವನ್ನು ಕಡೆದು ತೆಗೆದನೋ, ಬ್ರಹ್ಮನಂತಹ ಆ ವಿಷ್ಣುಗುಪ್ತನಿಗೆ ನಮಸ್ಕಾರವು. ವಿದ್ಯಾಪಾರಂಗತನಾದ, ಸುದೃಷ್ಟಿಯುಳ್ಳ ಆತನ ಕೃತಿಯಿಂದಲೇ ರಾಜನೀತಿಜ್ಞರಿಗೆ ಯಾವುದು ಒಪ್ಪಿಗೆಯಾಗುವುದೋ, ಅದನ್ನು ಉಪದೇಶಿಸುವೆವು" (ಅನುವಾದ - ಶ್ರೀ ಎಂ. ಎಲ್. ಗೋಪಾಲರಾಯರು)

ಮೌರ್ಯವಂಶದ ಚಂದ್ರಗುಪ್ತನೆಂಬುವನನ್ನು ಮುಂದಿಟ್ಟುಕೊಂಡು ಕ್ರಿ. ಪೂ. 322 ರಲ್ಲಿ ಇವನು ಮಗಧ ರಾಜ್ಯ ಸ್ಥಾಪನೆಗೆ ಕಾರಣಕರ್ತನಾದನು. ವಿಷ್ಣು ಪುರಾಣದಲ್ಲಿ ಹೇಳಿರುವಂತೆ

"ಕೌಟಿಲ್ಯ ಏವ ಚಂದ್ರಗುಪ್ತಂ ರಾಜ್ಯ ಅಭಿಷೇಕ್ಷ್ಯತಿ|
ತಸ್ಯಾಪಿ ಪುತ್ರೋ ಬಿಂದುಸಾರೋ ಭವಿಷ್ಯತಿ| ತಸ್ಯಾಪ್ಯಶೋಕವರ್ಧನಃ ||

"ಕೌಟಿಲ್ಯನೇ ಚಂದ್ರಗುಪ್ತನಿಗೆ (ಸಕಲ ಮಾರ್ಗದರ್ಶನಗಳನ್ನೂ ನೀಡಿ) ರಾಜ್ಯಾಭಿಷೇಕವನ್ನು ಮಾಡಿದನು. ಈ ಚಂದ್ರಗುಪ್ತನೆಂಬುವನಿಗೆ ಬಿಂದುಸಾರನೆಂಬುವನು ಪುತ್ರನಾಗುವನು. ಈತನ ಪುತ್ರನು ಪ್ರಸಿದ್ಧನಾದ ಅಶೋಕವರ್ಧನನು" (ವಿ. ಪು)

ಚಂದ್ರಗುಪ್ತನ ರಾಜ್ಯಾಭಿಷೇಕದ ನಂತರ ಕೌಟಿಲ್ಯನು ನಿರ್ಲಿಪ್ತನಾಗಿ ತಪೋವನಕ್ಕೆ ತೆರಳಿದನು. ಇವನು ಅಧಿಕಾರದಲ್ಲಿದ್ದಾಗಲೂ ಸಹ ಒಂದು ಆಶ್ರಮದಲ್ಲಿ ವಾಸಿಸುತ್ತಿದ್ದನು. ಆ ಆಶ್ರಮದ ವಿವರಣೆಯೂ ಸಹ ಈ ರೀತಿ ಹೇಳಲ್ಪಟ್ಟಿದೆ. "ಆಶ್ರಮದ ಹಳೆಯ ಗೋಡೆ ಆಗಲೇ ಬಿರುಕು ಬಿಟ್ಟು ಕುಸಿಯುತ್ತಿತ್ತು. ಸಮಿತ್ತುಗಳನ್ನು ಹೇರಿ ಛಾವಣಿಯು ಬಗ್ಗಿ ಹೋಗಿತ್ತು. ಆಶ್ರಮದಲ್ಲಿ ಒಂದು ಕಡೆ ದರ್ಭೆಗಳ ಹೊರೆ; ಮತ್ತೊಂದು ಕಡೆ ಬೆರಣಿಯ ರಾಶಿ". ಪ್ರಧಾನ ಮಂತ್ರಿಗಳೊಬ್ಬರು ವಾಸಿಸುವ ಸ್ಥಳ ಈ ರೀತಿ ಇರುವುದೂ ನಿಜಕ್ಕೂ ಆಶ್ಚರ್ಯಕರವು.

ಪ್ರಪಂಚ ಪ್ರಖ್ಯಾತನಾದ ಅಶೋಕರಾಜನ ಕಾಲಕ್ಕೆ ಪುನಃ ಭಾರತದೇಶಕ್ಕೆ ಒಂದು ಪೂರ್ಣರೂಪವು ಪ್ರಾಪ್ತವಾಯಿತು. ಈತನು ಕೌಟಿಲ್ಯನ ವಿಚಾರಧಾರೆಯಲ್ಲೇ ಬೆಳೆದು ವಿಶಾಲ ಭಾರತವನ್ನು ಕಟ್ಟಿದನು.

ಈತನ ಕಾಲದಲ್ಲಿ ಮಗಧ ರಾಜ್ಯವೆಂದರೆ ಪಾಕಿಸ್ಥಾನ, ಅಫ್ಘಾನಿಸ್ಥಾನ ಮತ್ತು

ಬಾಂಗ್ಲಾದೇಶವನ್ನು ಒಳಗೊಂಡಿದ್ದ ವಿಶಾಲ ಭಾರತ. ಒಂದೇ ಭಾಷೆ ಮತ್ತು ಒಂದೇ ಲಿಪಿಯ ಆಚ್ಚೆಸಿಂಧೂ ನದಿಯಿಂದ ಕರ್ನಾಟಕದವರೆಗೂ ಪ್ರಚಲಿತದಲ್ಲಿದ್ದಿತು. ಅಂದಿನಿಂದ ಅದರಂತಹ ಪ್ರಕ್ರಿಯೆಯನ್ನು ಕಾಣಲು ಸಾಧ್ಯವಾಗಲಿಲ್ಲ. ಆಧುನಿಕ ಭಾರತದಲ್ಲಿಯೂ ಸಹ ಅದೊಂದು ಆದರ್ಶ ಸಂಕೇತ ಮಾತ್ರವಾಗಿದೆ. (ಇಂಡಿಯಾ ಗೆಜೆಟಿಯರ್‌ನಿಂದ) ಅಶೋಕನು ಕ್ರಿ. ಪೂ. 252 ಸುಮಾರಿಗೆ ನಿಧನ ಹೊಂದಿದನು. ಅವನೊಂದಿಗೆ ಮಗಧ ಸಾಮ್ರಾಜ್ಯವು, ಅಂದರೆ ಒಂದು ರೀತಿಯಲ್ಲಿ ವಿಶಾಲ ಭಾರತವೂ ಕಣ್ಮರೆಯಾಯಿತು. ಅಶೋಕನ ಶಿಲಾಸ್ತಂಭವೊಂದರ ಸಿಂಹಲಾಂಛನದ ಬೋದಿಗೆಯನ್ನು ಇಂದಿನ ಸ್ವತಂತ್ರ ಭಾರತವು ರಾಷ್ಟ್ರೀಯ ಲಾಂಛನವನ್ನಾಗಿ ಸ್ವೀಕರಿಸಿದೆ. ಭಾರತೀಯರು ಪ್ರಾಚೀನ ಸ್ಫೂರ್ತಿಯನ್ನು ಇನ್ನು ಮುಂದೆ ಮತ್ತೆ ಮೈದುಂಬಿಸಿಗೊಳ್ಳಬೇಕಾಗಿದೆ.

**22. ಮಾಗಧ :** ಶ್ರೀಕೃಷ್ಣನ ಚಾತುರ್ಯದಿಂದ ಅಸುರೀ ವೃತ್ತಿಯ ಜರಾಸಂಧರಾಜನು ಮರಣಹೊಂದಿದ ಮೇಲೆ, ಆತನ ಪುತ್ರ ಮಾಗಧನೆಂಬುವನಿಗೆ ಪಟ್ಟವಾಯಿತು. ಈತನ ಕಾಲದಲ್ಲಿ ಮಗಧರಾಜ್ಯವು ಮಾಗಧವೆಂಬ ಹೆಸರಿನಿಂದ ಪ್ರಸಿದ್ಧವಾಯಿತು.

**23. ಮಾಳವ :** ಇದರ ಹಿಂದಿನ ಹೆಸರು ಅನೂಪದೇಶವೆಂದು. ಆಗ ಇದನ್ನು ಕಾರ್ತವೀರ್ಯಾರ್ಜುನನು ಪಾಲಿಸುತ್ತಿದ್ದನು. ಮಾಹಿಷ್ಮತಿಯೆಂಬುದು ಅಂದಿನ ರಾಜಧಾನಿ. ನಂತರದಲ್ಲಿ ಇದು ಮಾಳವದೇಶವೆಂದಾಯಿತು. ಆಗ ಇದರ ರಾಜಧಾನಿ ಉಜ್ಜಯಿನಿಯಾಗಿದ್ದಿತು. ಭೋಜರಾಜನು ಈ ದೇಶವನ್ನು ಆಳುತ್ತಿದ್ದಾಗ ಧಾರಾ ನಗರವು ಇದರ ರಾಜಧಾನಿಯಾಗಿದ್ದಿತು. ಇಂದು ಈ ನಗರವು ಮಧ್ಯ ಪ್ರದೇಶ ಜಿಲ್ಲೆಯ ಧಾರ್ ಎಂಬ ನಗರವಾಗಿದೆ. ಇದು ಅವನ್ತಿಯೆಂದೂ ಸಹ ಕರೆಯಲ್ಪಡುತ್ತಿತ್ತು.

**24. ಮತ್ಸ್ಯ :** ಇಂದಿನ ರಾಜಸ್ಥಾನ ರಾಜ್ಯದ ಜಯಪುರ ಜಿಲ್ಲೆಯ ಸುತ್ತಲಿನ ಪ್ರದೇಶ ಮತ್ತು ಆಳ್ವಾರ್ ಜಿಲ್ಲೆಯನ್ನೂ ಸೇರಿಸಿದ ಪ್ರದೇಶವು ಅಂದು ಮತ್ಸ್ಯ ದೇಶವೆಂದು ಕರೆಯಲ್ಪಟ್ಟಿತ್ತು. ಪಾಂಡವರ ಕಾಲದಲ್ಲಿ ಈ ದೇಶವನ್ನು ವಿರಾಟನೆಂಬ ರಾಜನು ಆಳುತ್ತಿದ್ದನು. ಪಾಂಡವರು ತಮ್ಮ ಅಜ್ಞಾತವಾಸವನ್ನು ಪೂರ್ಣಗೊಳಿಸಿದ್ದು ಇಲ್ಲಿಯೇ.

**25. ವತ್ಸ :** ವಾತ್ಸ ಎಂದೂ ಹೇಳುತ್ತಾರೆ. ಗಂಗಾ ಮತ್ತು ಯಮುನಾ ನದಿಗಳ ಮಧ್ಯದಲ್ಲಿ ವತ್ಸನೆಂಬ ರಾಜನು ಸ್ಥಾಪಿಸಿದ ದೇಶ. ಅನೇಕ ಮುನಿಗಳು ವಾಸಿಸುತ್ತಿದ್ದ ದೇಶ.

**26. ಮದ್ರ :** ಈ ದೇಶವು ಇಂದಿನ ಪಂಜಾಬ್ ಜಿಲ್ಲೆಯ ರಾವಿ ಮತ್ತು ಚೀನಾಬ್ ನದಿಗಳ ನಡುವಿನ ಪ್ರದೇಶವೆಂದು ಗುರುತಿಸಲ್ಪಟ್ಟಿದೆ. ಇದರ ರಾಜಧಾನಿ ಶಾಕಲವೆಂಬ ಪಟ್ಟಣವಾಗಿದ್ದಿತು. ಪಾಂಡವರ ಕಾಲದಲ್ಲಿ ಶಲ್ಯನೆಂಬ ರಾಜನು ಆಳುತ್ತಿದ್ದನು. ಇಂದಿನ ಇರಾನ್ ದೇಶವೇ ಮದ್ರ ದೇಶವಾಗಿದ್ದಿತೆಂದು ಕೆಲವರು ಹೇಳುತ್ತಾರೆ.

**27. ಮೈಂದ :** ರಾಮಾಯಣ ಕಾಲದಲ್ಲಿದ್ದ ವಾನರ ರಾಜ್ಯವಾದ ಕಿಷ್ಕಿಂಧೆಯಲ್ಲಿ ಇದ್ದ ರಾಜ್ಯವು. ಸುಗ್ರೀವನ ವಾನರ ಪಡೆಯ ನಾಯಕನಾದ ಮೈಂದನೆಂಬವನು ಇದ್ದ ಸ್ಥಳ.



**28. ಸಿಂಧು :** ಸೌವೀರ ದೇಶಕ್ಕೆ ದಕ್ಷಿಣದಲ್ಲಿದ್ದ ದೇಶವು. ಅಂದರೆ ಇದೂ ಸಹ ಸಿಂಧು ಮತ್ತು ಜೀಲಂ ನದಿಗಳ ನಡುವಿನ ಪ್ರದೇಶವು. ಪಾಂಡವರ ಕಾಲದಲ್ಲಿ ವೃದ್ಧಕ್ಷತ್ರ ಮತ್ತು ಅವನ ಮಗ ಜಯದ್ರಥರು ಇಲ್ಲಿ ಅರಸರಾಗಿದ್ದರು. (ಭಾರತ ಭೀ. 9)

**29. ಸೈಂಧವ :** ಇದೂ ಸಿಂಧೂ ದೇಶವೆಂದೇ ಮಹಾಭಾರತದಲ್ಲಿ ವರ್ಣಿತವಾಗಿದೆ. ಜಯದ್ರಥನನ್ನು ಸೈಂಧವ ಎಂಬುದಾಗಿಯೂ ಕರೆಯುತ್ತಿದ್ದರು.

**30. ಆಂಧ್ರ :** ಕೃಷ್ಣಾ ಮತ್ತು ಗೋದಾವರೀ ನದಿಗಳ ನಡುವಿನ ಪ್ರದೇಶ. ಇಂದಿನ ಭಾರತ ದೇಶದ ಆಂಧ್ರ ಮತ್ತು ಸುತ್ತಲಿನ ಪ್ರದೇಶ. ಈ ದೇಶದಲ್ಲಿ ಕ್ರಿ. ಪೂ. 25 ರಿಂದ ಕ್ರಿ. ಶ. 320ರವರೆಗೂ ಸಾತವಾಹನರೆಂಬುವರು ಆಳುತ್ತಿದ್ದು, ಅಂದು ಅಮರಾವತಿ ಯೆಂಬುದು ರಾಜಧಾನಿಯಾಗಿತ್ತು. ಇಂದಿನ ರಾಜಧಾನಿ ಹೈದರಾಬಾದ್ ಎಂದಾಗಿದೆ. ಪುರಾಣ ಪ್ರಸಿದ್ಧವಾದ ವೆಂಕಟಾಚಲವು ತಿರುಪತಿಯೆಂಬ ಕ್ಷೇತ್ರದಿಂದ ಕೂಡಿ, ಪ್ರಪಂಚದಾದ್ಯಂತ ಭಕ್ತಾದಿಗಳನ್ನು ಆಕರ್ಷಿಸಿ, ಸಕಲರನ್ನು ಅನುಗ್ರಹಿಸುತ್ತಾ ಇರುವ ವೆಂಕಟೇಶ್ವರ ಸ್ವಾಮಿಯು ನೆಲೆಸಿರುವುದು ಈ ರಾಜ್ಯದಲ್ಲಿಯೇ.

**31. ಗಾಂಧಾರ :** ಸಿಂಧು ಮತ್ತು ಕುನಾರ್ ನದಿಗಳ ನಡುವಿನ ಪ್ರದೇಶ. ಇಂದು ಇದನ್ನು ನೆರೆ ದೇಶವಾದ ಅಫ್ಘಾನಿಸ್ಥಾನದಲ್ಲಿರುವ ಕಾಬೂಲ್ ನಗರ ಪ್ರದೇಶವೆಂದು ಗುರುತಿಸಿದ್ದಾರೆ. ಹಿಂದೆ ಇದರ ರಾಜಧಾನಿ ಪುರುಷಪುರವೆಂದಾಗಿದ್ದಿತು. ಈಗ ಅದೇ ನಗರವು ಪೇಶಾವರ್ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಉತ್ಖನನದಲ್ಲಿ ಗಣೇಶನೇ ಮೊದಲಾದ ಅನೇಕ ಹಿಂದೂ ವಿಗ್ರಹಗಳು ದೊರೆತಿರುವ ಸ್ಥಳ. ಈ ದೇಶವನ್ನು ಶ್ರೀರಾಮಚಂದ್ರನ ಸಹೋದರನಾದ ಭರತನ ಮಕ್ಕಳಾದ ತಕ್ಷ ಮತ್ತು ಪುಷ್ಕರರೆಂಬುವರು ಆಳಿದರು. ಇವರುಗಳು ತಕ್ಷಶಿಲಾ ಮತ್ತು ಪುಷ್ಕರಾವತಿಯೆಂಬ ರಾಜ್ಯಗಳನ್ನು ಸ್ಥಾಪಿಸಿದರು. ಪಾಂಡವರ ಕಾಲದಲ್ಲಿ ಧೃತರಾಷ್ಟ್ರ ರಾಜನ ಮಾವನು ಆಳಿದ ಸ್ಥಳ. ಕಾಲಕ್ರಮದಲ್ಲಿ ವಿಶಾಲಭಾರತದ ಅವಿಭಾಜ್ಯ ಅಂಗವಾಗಿದ್ದ ಈ ದೇಶ ನೆರೆ ರಾಷ್ಟ್ರಕ್ಕೆ ಸೇರಿಹೋಯಿತು.

**32. ಲಾಟ :** ಮಾಳವ ದೇಶದ ಮತ್ತು ಗುಜರಾತ್ ರಾಜ್ಯದ ಕೆಲವು ಭಾಗಗಳು ಸೇರಿದ ಪ್ರದೇಶ ಲಾಟವೆಂದು ಕರೆಯಲ್ಪಡುತ್ತಿತ್ತು. ಇಲ್ಲಿನ ಜನರನ್ನೂ ಲಾಟರೆಂದೇ ಕರೆಯುತ್ತಿದ್ದರು. ಕರ್ನಾಟಕದ ಪುಲಕೇಶಿಯು ಕ್ರಿ.ಶ. 535 ಸುಮಾರಿನಲ್ಲಿ ಇಲ್ಲಿ ತನ್ನ ಆಧಿಪತ್ಯವನ್ನು ಸ್ಥಾಪಿಸಿದ್ದನು.

**33. ವರಾಟ :** ವಾರಾಟಕವೆಂದೂ ಹೇಳುತ್ತಾರೆ. ಕ್ರಿ. ಶ. 300ರ ವೇಳೆಗೆ ಸಾತವಾಹನರ ದಖ್ಖನದಲ್ಲಿ ಅನೇಕ ರಾಜ್ಯಗಳು ಉದಯವಾಗಿ ಅವುಗಳಲ್ಲಿ ಅತ್ಯಂತ ಬಲಶಾಲಿಯಾದುದು ವಿಂಧ್ಯಶಕ್ತಿಯಿಂದ ಸ್ಥಾಪಿತವಾದ ವಾರಾಟಕ ರಾಜ್ಯ. ಇಲ್ಲಿದ್ದ ರಾಜನು ಉತ್ತರದಲ್ಲಿ ಬುಂದೇಲಖಂಡದಿಂದ ದಕ್ಷಿಣದಲ್ಲಿ ಹೈದರಾಬಾದಿನ ವರೆಗೆ ಇದ್ದ ಪ್ರದೇಶದಲ್ಲಿ ಆಳುತ್ತಿದ್ದು, ಸಮ್ರಾಟನೆನಿಸಿ ಅನೇಕ ಅಶ್ವಮೇಧ ಯಾಗಗಳನ್ನು ಮಾಡಿದನು. ಕ್ರಿ. ಶ. 535ರ ಸುಮಾರಿನಲ್ಲಿ ಇಲ್ಲಿ ತನ್ನ ಆಧಿಪತ್ಯವನ್ನು ಸ್ಥಾಪಿಸಿದ್ದನು. (ಭಾ.ಗೆಜೆಟಿಯರ್-2)



shrinath.udupa@gmail.com

**34. ಕರ್ನಾಟಕ :** ಇಂದಿನ ಕರ್ನಾಟಕ ರಾಜ್ಯ, ತಮಿಳುನಾಡು, ಆಂಧ್ರಪ್ರದೇಶ, ಮಹಾರಾಷ್ಟ್ರ, ಕೇರಳ ರಾಜ್ಯಗಳ ಕೆಲವು ಪ್ರದೇಶಗಳು ಸೇರಿದ್ದ ಭಾಗವು ಕರ್ನಾಟಕವೆಂದು ಕರೆಯಲ್ಪಡುತ್ತಿತ್ತು. ಕಾವೇರೀ ಮತ್ತು ಗೋದಾವರೀ ನದಿಗಳ ನಡುವಿನ ಪ್ರದೇಶವೆಂದು ಹೇಳಲ್ಪಟ್ಟಿದೆ. ಈ ರಾಜ್ಯ ಮಹಾಭಾರತದಲ್ಲೂ ಉಕ್ತವಾಗಿದೆ. (ಭಾರತ, ಸಭಾ 79, ಭೀ9) ಇಲ್ಲಿನ ನಾಗರಿಕತೆಯು ಸುಮಾರು ಕ್ರಿ. ಪೂ. 3000ಗಳಷ್ಟು ಹಳೆಯದೆಂದು ಸಂಶೋಧಕರಿಂದ ಹೇಳಲ್ಪಟ್ಟಿದೆ. ಸಿಂಧೂ ಬಯಲಿನ ನಾಗರಿಕತೆಯ ಸಮಯದಲ್ಲಿಯೇ ಇಲ್ಲಿಯೂ ಸಹ ಭವ್ಯ ನಾಗರಿಕತೆಯೊಂದು ಇದ್ದಿತ್ತೆಂದು ಹೇಳುತ್ತಾರೆ. ಕರ್ನಾಟಕ ಮತ್ತು ಮೊಹೆಂಜುದಾರೋ ಎಂಬ ಸಂಶೋಧನ ಲೇಖನದಲ್ಲಿ (ಕನ್ನಡದ ನೆಲೆ - ಶಂಬಾ ಜೋಷಿ) ಕರ್ನಾಟಕದ ಮೂಲಿಗರು ಸಿಂಧೂನದಿ ತೀರದಲ್ಲಿದ್ದರೆಂದು ಹೇಳಲ್ಪಟ್ಟಿದೆ. ಈ ಪ್ರದೇಶದ ಉತ್ಖನನದಲ್ಲಿ ಸಿಕ್ಕಿರುವ ಬಂಗಾರದ ಅಲಂಕಾರಿಕ ವಸ್ತುಗಳು. ಕರ್ನಾಟಕದ ಹಟ್ಟಿ ಗಣಿಯಿಂದ ಬಂದ ಬಂಗಾರದಿಂದ ಮಾಡಿದವುಗಳೆಂದು, ಸರ್ ಜಾನ್ ಮಾರ್ಷಲ್ ಎಂಬುವರು ತಮ್ಮ ಗ್ರಂಥದಲ್ಲಿ ತಿಳಿಸಿದ್ದಾರೆ. ಹರಪ್ಪ ಮಹೆಂಜುದಾರೋ ಪ್ರದೇಶದಲ್ಲಿ ಕನ್ನಡವಿತ್ತೆಂದು ಕೆಳಗಿನ ಕಾರಣಗಳಿಂದಲೂ ತಿಳಿದು ಬರುತ್ತದೆ. ಈಜಿಪ್ಟ್‌ನಲ್ಲಿ ದೊರೆತ ಗ್ರೀಕ್ ನಾಟಕಗಳಲ್ಲಿ ಕನ್ನಡ ಶಬ್ದಗಳಿವೆ. ಚಂದ್ರವಳ್ಳಿಯ ಅಗೆತದಲ್ಲಿ ಆರ್. ನರಸಿಂಹಾಚಾರ್ಯರಿಗೆ ದೊರೆತಿರುವ ರೋಮನ್ ನಾಣ್ಯಗಳು - ಗ್ರೀಕ್ ಮತ್ತು ಕರ್ನಾಟಕದ ವ್ಯಾಪಾರ ವ್ಯವಹಾರಗಳಿಗೆ ಸಾಕ್ಷಿಯಾಗಿದೆ. (ನೋಡಿ - ಲೇಖನ "ದಕ್ಷಿಣ ಭಾರತದ ಅತಿ ಪ್ರಾಚೀನ ಭಾಷೆ - ಕನ್ನಡ" ಪ್ರಜಾವಾಣಿ 23-4-2000)

ಮಹಾತಪಸ್ವಿ ಶ್ರೀ ವಿದ್ಯಾರಣ್ಯ ಮುನಿಗಳ ಮಾರ್ಗದರ್ಶನದಲ್ಲಿ ಕರ್ನಾಟಕ ರಾಜ್ಯವು ಅತ್ಯಂತ ವಿಶಾಲವಾಗಿ ಬೆಳೆದಿತ್ತು.

ಮಗಧ ರಾಜ್ಯದಂತೆಯೇ ಕರ್ನಾಟಕ ರಾಜ್ಯವು ಪುರಾಣಕಾಲದಿಂದಲೂ ಪ್ರಸಿದ್ಧವಾದ ದೇಶ. ಚಾರಿತ್ರಿಕ ದೃಷ್ಟಿಯಿಂದಲೂ ವಿಶಾಲ ಭಾರತವನ್ನು ಆಧ್ಯಾತ್ಮಿಕ ತಳಹದಿಯ ಮೇಲೆ ಸ್ಥಾಪಿಸಲು ಪ್ರಯತ್ನಪಟ್ಟ ರಾಜ್ಯವೆಂದು ಹೇಳಬಹುದು. ಕರ್ನಾಟಕ ವಿಜಯನಗರ ಸಿಂಹಾಸನಾಧೀಶ್ವರರಾದ ಶ್ರೀ ಕೃಷ್ಣದೇವರಾಯರ ಕಾಲಕ್ಕೆ ಕರ್ನಾಟಕ ದೇಶವೆಂಬುದು ಭಾರತದ ಕೆಲವು ಪಶ್ಚಿಮ ಭಾಗಗಳಿಂದ (ಇಂದಿನ ಒರಿಸ್ಸಾ ರಾಜ್ಯ) ಕೂಡಿದ ಇಡೀ ದಕ್ಷಿಣ ಭಾರತವು ಆಗಿದ್ದಿತು (ನಮ್ಮ ಕರ್ನಾಟಕ - ಕನ್ನಡ ಸಾಹಿತ್ಯ ಪರಿಷತ್). ವಿಜಯನಗರದ ದೀರ್ಘಕಾಲದ ಚರಿತ್ರೆಯಲ್ಲೆಲ್ಲಾ ಆ ರಾಜರು ತಮ್ಮ ಪ್ರಖ್ಯಾತ ರಾಜಧಾನಿಯಾದ ವಿಜಯನಗರದಿಂದಲೇ (ಹಂಪೆ) ಆಳುತ್ತಿರಲಿ ಅಥವಾ ಈಚಿನ ರಾಜಧಾನಿಗಳಾದ ಪೆನುಕೊಂಡ. ಚಂದ್ರಗಿರಿ, ವೆಲ್ಲೂರುಗಳಿಂದಲೇ ಆಳುತ್ತಿರಲಿ, ಯಾವಾಗಲೂ ಅವರನ್ನು ಕರ್ನಾಟಕ ರಾಜರೆಂದೇ ಕರೆಯುತ್ತಿದ್ದರು. ಇದರಿಂದ ದಕ್ಷಿಣ ಮತ್ತು ಪಶ್ಚಿಮ ಭಾರತದ ಮುಂದಾಳುತನ, ಕನಿಷ್ಠ ಪಕ್ಷ ಹಿಂದುಗಳ ವಿಷಯದಲ್ಲಾದರೂ ಕರ್ನಾಟಕದ್ದೆಂಬುದು ನಿರ್ವಿವಾದವಾಗಿ ಸಿದ್ಧವಾಗುತ್ತದೆ. ಮುಖ್ಯವಾಗಿ ತೆಲಗು ಮೂಲವುಳ್ಳ ವಿಜಯನಗರದ ರಾಜಸಂತತಿ ಎಂದರೆ ಅರವೀಟಿ ಸಂತತಿ ಅಧಿಕಾರಕ್ಕೆ ಬಂದಮೇಲೂ ಜನರು ವಿಜಯನಗರದ ರಾಜರನ್ನು ಕರ್ನಾಟಕ



shrinath.udupa@gmail.com

ರಾಜರೆಂದೇ ಕರೆಯುತ್ತಿದ್ದುದು ಇನ್ನೂ ಹೆಚ್ಚು ಗಮನಾರ್ಹವಾಗಿದೆ.(ಕನ್ನಡ ನಾಡಿನ ಚರಿತ್ರೆ - ಸಂ 1 (1964) ಪು 64-65)

ಇನ್ನು ಪೌರಾಣಿಕ ಹಿನ್ನೆಲೆ ನೋಡುವುದಾದರೆ - ಶ್ರೀ ಮದ್ರಾಮಾಯಣದಲ್ಲಿ ಬಂದಿರುವ ದಂಡಕಾರಣ್ಯ, ಗೋದಾವರಿ, ಮಹಾನದಿ, ಕಾವೇರಿ, ತಾಮ್ರಪರ್ಣಿ ಈ ಹೆಸರಿನ ಉಲ್ಲೇಖಗಳು ಕರ್ನಾಟಕ್ಕೆ ಸಂಬಂಧಿಸಿದುದಾಗಿದೆ. ಶ್ರೀ ರಾಮಚಂದ್ರನು ಸೀತಾನ್ವೇಷಣ ಕಾಲದಲ್ಲಿ ಸುಳಿದಾಡಿದ್ದು ಇಲ್ಲಿಯೇ. ಕರ್ನಾಟಕಸ್ಥರಾದ ವಾನರ ಧ್ವಜರೇ ವಾನರರು. ಬಳ್ಳಾರಿ ಜಿಲ್ಲೆಯ ಹಂಪಿಯ ಹತ್ತಿರದ ಪಂಪಾಸರೋವರದ ಬಳಿಯಲ್ಲಿಯೇ ರಾಮನಿಗೆ ಹನುಮಂತನ ಸ್ನೇಹ ಸಂಘಟಿಸಿತು. ಸುಗ್ರೀವನು ಕಾರವಾರ ಜಿಲ್ಲೆಯ ಹೊನ್ನಾವರದಲ್ಲಿ ವಾಲಿಯ ಕೈಕೆಳಗೆ ಆಳುತ್ತಿದ್ದ ಚಿಕ್ಕ ಅರಸು. ವಾನರ ರಾಜಧಾನಿ ಕಿಷ್ಕಿಂಧೆಯು ಇಂದಿನ ಆನೆಗೊಂದಿ. ರಾವಣನೊಂದಿಗೆ ಜಟಾಯು ಕಾದಿ ಮಡಿದ ಸ್ಥಳ ಚಿತ್ರದುರ್ಗ ಜಿಲ್ಲೆಯ ಈಗಿನ ಜಟಿಂಗ ರಾಮೇಶ್ವರಗಿರಿ. ರಾವಣ ವಧೆಯ ನಂತರ ಅಯೋಧ್ಯೆಯ ಕಡೆಗೆ ಹಿಂತಿರುಗುವಾಗ, ಕೋಲಾರ ಜಿಲ್ಲೆಯ ಆವನಿಯೆಂಬ ಗ್ರಾಮದಲ್ಲಿ ಇಳಿದುಕೊಂಡಿರುವುದು ಸಾಧ್ಯ. ಅನಂತರ ನಂದಿದುರ್ಗ ಮತ್ತು ಮುಳುಕುಂಟೆ ಮಾರ್ಗವಾಗಿ (ತುಮಕೂರು ಜಿಲ್ಲೆ) ಅಯೋಧ್ಯೆಗೆ ಮರಳಿರಬಹುದು. ರಾಮಾವತಾರದ ಕಾಲದಲ್ಲಿ ಚಂದ್ರಗುತ್ತಿಯಲ್ಲಿ ಜಮದಗ್ನಿ, ಗಾಲವ ಮತ್ತು ಮತಂಗರು; ನೆಲಮಂಗಲದ ಹತ್ತಿರದ ತಮ್ಮಸಂದ್ರದಲ್ಲಿ ಅಗಸ್ತ್ಯ, ಇಧ್ಮವಾಹನ, ಶರಭಂಗ ಮತ್ತು ಸುತೀಕ್ಷ್ಣರು; ಕೋಲಾರ ಜಿಲ್ಲೆಯ ಆವನಿ ಹಳ್ಳಿಯ ನೆರೆಯ ಗುಡ್ಡದ ಮೇಲೆ ವಾಲ್ಮೀಕಿ; ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿಯಲ್ಲಿ ವಿಭಾಂಡಕ ಮತ್ತು ಋಷ್ಯಶೃಂಗರು ವಾಸಿಸುತ್ತಿದ್ದರು. ಇದೇ ಅಲ್ಲದೆ ಬನವಾಸಿ, ಬಿಜಾಪುರದ ಸೀತಿಮನಿ, ಮುದ್ದೇಬಿಹಾಳದ ಹತ್ತಿರದ ಛಾಯಾ ಭಗವತಿ, ಬಾಗಲಕೋಟೆ ತಾಲ್ಲೂಕಿನ ಬೀರಕಬ್ಬಿ ಇತ್ಯಾದಿ ಸ್ಥಳಗಳನ್ನು ರಾಮಾಯಣದ ಐತಿಹ್ಯ ಉಳ್ಳ ಸ್ಥಳಗಳನ್ನಾಗಿ ಗುರುತಿಸಿದೆ. ಕರ್ನಾಟಕವನ್ನು ರಾಮಕ್ಷೇತ್ರ ಮತ್ತು ಪರುಶುರಾಮ ಕ್ಷೇತ್ರವೆಂಬುದಾಗಿ ಸಂಕಲ್ಪಗಳಲ್ಲೂ ಸ್ಮರಿಸುವುದು ಈವತ್ತಿಗೂ ಇದೆ. ಮಹಾಭಾರತ ಸಂಬಂಧದ ಐತಿಹ್ಯಗಳು ಅನೇಕವಿವೆ. ಪಾಂಡವರು ವನವಾಸದಲ್ಲಿ ದಂಡಕಾರಣ್ಯವನ್ನು ದಾಟಿ ಕರ್ನಾಟಕವನ್ನು ಸೇರಿದುದು, ಭೀಮಸೇನನು ಹಿಡಿಂಬನೆಂಬ ರಾಕ್ಷಸನನ್ನು ಕೊಂದು, ಆತನ ತಂಗಿ ಹಿಡಿಂಬೆಯನ್ನು ವಿವಾಹವಾದುದು ಚಿತ್ರದುರ್ಗದ ಬಳಿ. ಮುಂದೆ ಪಾಂಡವರು ಶಿವಮೊಗ್ಗ ಜಿಲ್ಲೆಯ ತಾಳಗುಂದಕ್ಕೆ ಹೋಗಿ ನಂತರ ಏಕಚಕ್ರನಗರದಲ್ಲಿ ವಾಸವಾಗಿದ್ದರು. ಕೋಲಾರ ಜಿಲ್ಲೆಯ ಕೈವಾರ ಗ್ರಾಮವೇ ಈ ಏಕಚಕ್ರನಗರವೆಂದು ತಿಳಿಯಲಾಗಿದೆ. ಇದೇ ಜಿಲ್ಲೆಯ ಮಾಲೂರು ತಾಲ್ಲೂಕಿನ 'ರಹಮಾನ ಬೇಟ್'ವೆಂಬ ಸ್ಥಳದಲ್ಲೇ ಬಕಾಸುರನನ್ನು ಭೀಮಸೇನನು ಸಂಹರಿಸಿದ್ದು, ಮುಂದೆ ದ್ರೌಪದೀ ವಿವಾಹದ ನಂತರದಲ್ಲಿ ಪಾಂಡವರು ಇಂದ್ರಪ್ರಸ್ಥದಲ್ಲಿ ರಾಜ್ಯವಾಳುತ್ತಿದ್ದಾಗ, ಅರ್ಜುನನು ಪೃಥ್ವಿ ಸಂಚಾರಾರ್ಥವಾಗಿ ಹೊರಟು ಕರ್ನಾಟಕಕ್ಕೆ ಬಂದು ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನ ಮಣಿಪುರವೆಂಬ ಸ್ಥಳಕ್ಕೆ ಬಂದಿದ್ದನು. ಅರ್ಜುನನು ಆ

ಸ್ಥಳದಲ್ಲಿಯೇ ಚಿತ್ರಾಂಗದೆಯನ್ನು ಸಂಧಿಸಿ, ಕಾಲಾನಂತರದಲ್ಲಿ ಆತನ ಪುತ್ರ ಬಭ್ರುವಾಹನನೊಂದಿಗೆ ಹೋರಾಡಿದ ಸ್ಥಳವು ಇದೇ. ಪಾಂಡವರು ಅಜ್ಞಾತವಾಸದಲ್ಲಿ ಮತ್ಸ್ಯಪುರ ಅಥವಾ ವಿರಾಟನಗರದಲ್ಲಿ ವಾಸವಾಗಿದ್ದ ವಿಷಯವಿದೆಯಷ್ಟೆ. ಈ ವಿರಾಟ ನಗರವು ಇಂದಿನ ಹಾವೇರಿ ಜಿಲ್ಲೆಯ 'ಹಾನಗಲ್ಲು' ಎಂಬ ಸ್ಥಳವೆಂದು ತಿಳಿಯಲಾಗಿದೆ. ಚಂದ್ರಹಾಸನು ಆಳಿದ ಕುಂತಳ ರಾಜ್ಯವು ಈಗಿನ ಶಿವಮೊಗ್ಗ ಜಿಲ್ಲೆಯ ಕುಪ್ಪಟೂರು ಎಂದು ತಿಳಿಯಲಾಗಿದೆ. (ನೋಡಿ- ನಮ್ಮ ಕರ್ನಾಟಕ - ಕನ್ನಡ ಸಾಹಿತ್ಯ ಪರಿಷತ್ತು)

**35.** ದ್ರವಿಡ : ದಕ್ಷಿಣ ಭಾರತದ ತಮಿಳುನಾಡಿನ ಪ್ರಾಂತ್ಯವೆಂದು ಹೇಳಿದರೂ, ಚಾರಿತ್ರಿಕ ದೃಷ್ಟಿಯಿಂದ ದಕ್ಷಿಣ ಭಾರತದ ಜನರನ್ನು ದ್ರಾವಿಡರೆಂದೇ ಸಂಬೋಧಿಸುತ್ತಾರೆ. ಪಾಂಡವರ ಕಾಲದಲ್ಲಿ ಕಾಂಚೀ ನಗರವು ಇದರ ರಾಜಧಾನಿಯಾಗಿತ್ತು.

**36.** ದ್ರಾವಿಡ : ಇದೂ ಸಹ ತಮಿಳುನಾಡಿನ ಒಂದು ಭಾಗ.

**37.** ಪಾಂಡ್ಯ : ಈಗಣ ತಮಿಳುನಾಡು ರಾಜ್ಯದ ತಿರುನಲ್ವೇಲಿ, ಮಧುರೆ ಜಿಲ್ಲೆಗಳಿಗೆ ಸೇರಿದ ಪ್ರದೇಶಗಳು. ಕೆಲವು ಕಾಲ ಉರಗಪುರವೂ (ಇಂದಿನ ನಾಗಪಟ್ಟಣ) ಮತ್ತು ಕೆಲವು ಕಾಲ ಮಧುರೈ ನಗರವೂ ಇದರ ರಾಜಧಾನಿಗಳಾಗಿದ್ದವು. ಬೃಹತ್ ದೇವಾಲಯಗಳಿಗೆ ಪ್ರಸಿದ್ಧವಾಗಿರುವ ದೇಶ.

**38.** ಪುಳಿಂದ : ಮಧ್ಯಪ್ರದೇಶ ರಾಜ್ಯದ ಸಾಗರವೆಂಬ ಜಿಲ್ಲೆಗೆ ಸೇರಿದ ಭಾಗವು. ಇದು ಇಂದ್ರಪ್ರಸ್ಥಕ್ಕೆ ದಕ್ಷಿಣ ಮತ್ತು ಬುಂದೇಲಖಂಡಕ್ಕೆ ಪಶ್ಚಿಮ ದಿಕ್ಕಿನಲ್ಲಿರುವುದು. ಪಾಂಡವರ ಕಾಲದಲ್ಲಿ ಸುಕುಮಾರ ಮತ್ತು ಸುಮಿತ್ರರೆಂಬ ಅರಸರು ಆಳುತ್ತಿದ್ದರು. (ಭಾರತ ಭೀ-ಸಭಾ). ಇದು ಪರ್ವತ ಪ್ರದೇಶವಾಗಿದೆ.

**39.** ಪಾರಶೀಕ : ಇಂದಿನ ಪರ್ಶಿಯಾ/ಇರಾನ್ ದೇಶದ ಭಾಗಗಳು. ಇಲ್ಲಿದ್ದ ಪಾರ್ಸಿ ಜನಾಂಗವು ಪರಕೀಯರ ಧಾಳಿಗೆ ತುತ್ತಾಗಿ ದೇಶ ತೊರೆದು ಭಾರತ ದೇಶವನ್ನು ಸೇರಿದರು. ಈಗ ಈ ಜನಾಂಗದವರು ಹೆಚ್ಚಾಗಿ ಮುಂಬಯಿ ನಗರದಲ್ಲಿ ವಾಸಿಸುತ್ತಿದ್ದಾರೆ.

**40.** ಬಾಹ್ಲಿಕ : ವಿಪಾಶಾ ಮತ್ತು ಶತದ್ರೂ ನದಿಗಳ ನಡುವೆ, ಕೇಕಯ ದೇಶಕ್ಕೆ ಪೂರ್ವದಲ್ಲಿದೆ. (ಭಾರ. ಭೀ/9) ಇದೊಂದು ಅನಾರ್ಯದೇಶವೆಂದು ಹೇಳಲ್ಪಟ್ಟಿದೆ. ಮಹಾಭಾರತ ಕಾಲದಲ್ಲಿ ಇಲ್ಲಿನ ಅರಸು ಕೌರವರ ಪರವಾಗಿ ಹೋರಾಡಿ ಭಾರತ ಯುದ್ಧದಲ್ಲಿ ಮಡಿದ. ಭಾರತದ ಗೆಜೆಟಿಯರ್ ಪ್ರಕಾರ ಇದನ್ನು ಅಫ್‌ಘಾನಿಸ್ಥಾನದಲ್ಲಿ ಗುರುತಿಸಿದ್ದಾರೆ. ಇಲ್ಲಿನ ಉತ್ಖನನದಲ್ಲಿ ಸೂರ್ಯಮೂರ್ತಿಯೊಂದು ದೊರೆತಿದ್ದು, ಇಲ್ಲಿ ವೈದಿಕ ಧರ್ಮವೂ ಪ್ರಚಾರದಲ್ಲಿತ್ತೆಂದು ತಿಳಿದು ಬಂದಿದೆ.



shrinath.udupa@gmail.com

**41.** ಬರ್ಬರ : ಪುರಾಣ ಪ್ರಸಿದ್ಧ ದೇಶ. ಇಲ್ಲಿ ವಾಸಿಸುತ್ತಿದ್ದ ಜನಗಳು ಕೆಳವರ್ಗಕ್ಕೆ ಸೇರಿದವರೆಂದು ಪರಿಗಣಿಸಲ್ಪಟ್ಟು, ಇವರನ್ನು ಬರ್ಬರರೆಂದೇ ಕರೆಯುತ್ತಿದ್ದರು. ಪಾಂಡವರ ರಾಜಸೂಯಯಾಗದಲ್ಲಿ ಕಪ್ಪ ಕಾಣಿಕೆಗಳೊಂದಿಗೆ ಇವರುಗಳು ಆಗಮಿಸಿದ್ದರೆಂದು ಉಕ್ತವಾಗಿದೆ.

**42.** ವಿದರ್ಭ : ವಿಂಧ್ಯಪರ್ವತಕ್ಕೆ ದಕ್ಷಿಣದಲ್ಲಿ, ಗೋದಾವರೀ ನದಿಗೆ ಉತ್ತರದಲ್ಲಿ ದಶಾರ್ಣ ಮತ್ತು ಸೂರತ್ ನಗರಗಳ ನಡುವಿನ ಪ್ರದೇಶವಾಗಿದೆ. ಈ ದೇಶವನ್ನು ಹಿಂದೆ ದಮಯಂತಿಯ ತಂದೆ ಭೀಮರಾಜನೆಂಬುವನೂ, ಪಾಂಡವರ ಕಾಲದಲ್ಲಿ ರುಕ್ಮಿಣಿಯ ತಂದೆ ಭೀಷ್ಮಕನೆಂಬುವನೂ ಆಳುತ್ತಿದ್ದರು. ಮೊದಲಿನ ರಾಜಧಾನಿ ಕುಂಡನೀಪುರವೂ ನಂತರ, ಭೋಜಕಟಕ ಮತ್ತು ಅಮರಾವತಿ ನಗರಗಳೂ ಆಗಿದ್ದವು. ಈಗ ಇದನ್ನು 'ಬಿರಾರ್' ಎಂದು ಕರೆಯುತ್ತಾರೆ. ಕರ್ನಾಟಕ ರಾಜ್ಯದ ಬೀದರ್ ಜಿಲ್ಲೆ ವಿದರ್ಭ ದೇಶದ ಭಾಗವೆಂದು ಗುರುತಿಸಲ್ಪಟ್ಟಿದೆ.

**43.** ಕೇಕಯ : ಶತುದ್ರೂ ಮತ್ತು ವಿಪಾಶಾ ನದಿಗಳ ನಡುವೆ, ಇಂದಿನ ಲೂಧಿಯಾನ ನಗರಕ್ಕೆ ವಾಯವ್ಯಭಾಗದಲ್ಲಿದೆ. ದಶರಥರಾಜನ ಮಾವನಾದ ಅಶ್ವಪತಿಯೆಂಬುವನು ಆಳುತ್ತಿದ್ದನು. ಈತನ ಮಗಳು ಕೈಕೇಯಿಯೆಂಬ ಹೆಸರಿನಿಂದ ಪ್ರಸಿದ್ಧಳು. ಪಾಂಡವರ ಕಾಲದಲ್ಲಿ ಧೃಷ್ಟಕೇತುಯೆಂಬುವನು ಇಲ್ಲಿ ಅರಸನಾಗಿದ್ದ. ಗಿರಿವ್ರಜವೆಂಬುದು ಅಂದಿನ ರಾಜಧಾನಿ. ಹಿಂದೆ ಕೇಕಯವೆಂಬುವನು ಆಳಿದ್ದರಿಂದ ಇದಕ್ಕೆ ಅವನ ಹೆಸರೇ ಬಂದಿತು.

**44.** ಕುರು : ಮಹಾಭಾರತದಲ್ಲಿ ವರ್ಣಿತವಾಗಿರುವ ಹಸ್ತಿನಾಪುರವನ್ನು ರಾಜಧಾನಿಯಾಗಿ ಹೊಂದಿದ್ದ ದೇಶ. ಚಂದ್ರವಂಶದ ರಾಜರುಗಳು ಆಳಿದ ದೇಶ. ಇದು ಅತ್ಯಂತ ಪುರಾತನ ಹಿನ್ನೆಲೆಯುಳ್ಳ ಸ್ಥಳ. ಇಂದ್ರಪ್ರಸ್ಥ ಮತ್ತು ವಾರಣಾವತಗಳೂ ಸಹ ಇದರ ತರುವಾಯ ಏರ್ಪಟ್ಟವು.

**45.** ಕಿರಾತ : ಬಂಗಾಳ ದೇಶಕ್ಕೆ ಪೂರ್ವದಿಕ್ಕಿನಲ್ಲಿರುವ ಪರ್ವತ ಭೂಯಿಷ್ಠ ಭೂಭಾಗ (ಭಾರತ ಭೀ 9). ನೇಪಾಳಕ್ಕೆ ಸೇರಿದ್ದ ಭಾಗವೇ ಕ್ರಿ. ಪೂ. 3 ರಿಂದ ಕ್ರಿ. ಪೂ. 5 ರವರೆಗೆ ಕಿರಾತರೆಂಬುವರಿಂದ ಆಳಲ್ಪಡುತ್ತಿತ್ತೆಂದು ಹೇಳಲ್ಪಟ್ಟಿದೆ. ಇದು ಒಂದು ಸಾಮಂತರಾಜ್ಯವಾಗಿದ್ದಿರಬೇಕು. ಭಾರತ ಗೆಜೆಟಿಯರ್ ಪ್ರಕಾರ ಭಾರತದ ಸಾಂಸ್ಕೃತಿಕ ಪ್ರಭಾವವು ಪಶ್ಚಿಮ ಮತ್ತು ಮಧ್ಯ ಏಷಿಯಾದಲ್ಲಿ ಹಬ್ಬಿತ್ತು.

**46.** ದಶಾರ್ಣ : ದಕ್ಷಿಣ ಕೋಸಲಕ್ಕೆ ಸೇರಿರುವ ಒಂದು ದೇಶ. (ಭಾರ. ಭೀ-9) ಪಾಂಡವರ ಕಾಲದಲ್ಲಿ ಸುಧರ್ಮ, ಹಿರಣ್ಯವರ್ಮ ಎಂಬುವರು ಆಳುತ್ತಿದ್ದರು. ಈ ಹಿರಣ್ಯವರ್ಮನು ದ್ರುಪದರಾಜನ ಹಿರಿಯಮಗನಾದ ಶಿಖಂಡಿಗೆ ಹೆಣ್ಣು ಕೊಟ್ಟ ಮಾವ. ಈಗ ಉತ್ತರ ಪ್ರದೇಶ ರಾಜ್ಯದ ಛತ್ತೀಸ್‌ಘರ್ ಜಿಲ್ಲೆಯ ಒಂದು ಭಾಗವಾಗಿದೆ.

**47.** ಹೂಣ : ಹೂಣರು ಆಳುತ್ತಿದ್ದ ದೇಶ. ಇದು ಮ್ಲೇಚ್ಛ ದೇಶ. ಮಹಾಭಾರತದಲ್ಲಿ ಇದರ ಉಲ್ಲೇಖವಿದೆ. ಭಾರತದ ವಾಯುವ್ಯ ಭಾಗದಲ್ಲಿತ್ತು.

**48.** ಟಂಕಣ : ಇಂದಿನ ಸೌರಾಷ್ಟ್ರದೇಶದಲ್ಲಿದ್ದ ಒಂದು ರಾಜ್ಯ. ಟಂಕಾರ್ ಎಂದು ಸಹ ಕರೆಯುತ್ತಿದ್ದರು.

**49.** ಕೊಂಕಣ : ಪರಶುರಾಮನು ತಾನು ಯಜ್ಞ ಮಾಡಿದ ನಂತರ ಭೂಮಂಡಲವನ್ನೆಲ್ಲಾ ಕಶ್ಯಪ ಮುನಿಗೆ ದಾನ ಮಾಡಿದ. ಅನಂತರ ದಾನ ಮಾಡಿದ ಸ್ಥಳದಲ್ಲಿ ತಾನು ವಾಸಮಾಡಲಾರದ ನಿಯಮಕ್ಕೆ ತಲೆಬಾಗಿ, ಸಮುದ್ರರಾಜನ ನೆರವಿನಿಂದ ಸ್ವಲ್ಪ ಭೂಭಾಗವನ್ನು ಬಿಡಿಸಿಕೊಂಡ. ಇದಕ್ಕೆ ಶೂರ್ಪಾರಕವೆಂತಲೂ, ಕೊಂಕಣವೆಂತಲೂ ಹೆಸರಾಯಿತು. ಈ ಪ್ರದೇಶ ಈಗಿನ ಮುಂಬಯಿ ಬಳಿ, ಪೂರ್ವಕ್ಕೆ ಸಹ್ಯಾದ್ರಿ, ಪಶ್ಚಿಮಕ್ಕೆ ಸಮುದ್ರ ಉತ್ತರದಲ್ಲಿ ಗುಜರಾತ್ ಪ್ರಾಂತ್ಯ, ದಕ್ಷಿಣದಲ್ಲಿ ಕೇರಳ ಪ್ರಾಂತ್ಯದ ಭಾಗಗಳು ಇವುಗಳ ನಡುವೆ ಇದ್ದಂತಹ ಸ್ಥಳ. (ಶಾಂತಿ 49)

**50.** ಯವನ : ಕಾಲಯವನನು ಆಳುತ್ತಿದ್ದ ದೇಶ. ಇಂದಿನ ಭಾರತದ ವಾಯವ್ಯ ದಿಕ್ಕಿನಲ್ಲಿತ್ತು. ಕಾಲಯವನನು ಶ್ರೀಕೃಷ್ಣನಿಂದ ಹತನಾದ.

**51.** ಶೂರಸೇನ : ಶ್ರೀಕೃಷ್ಣನ ಸೋದರಮಾವನಾದ ಕಂಸನು ಆಳುತ್ತಿದ್ದ ದೇಶ. ಇಂದಿನ ಮಥುರಾ ಪಟ್ಟಣವು ಇದರ ರಾಜಧಾನಿಯಾಗಿತ್ತು.

**52.** ಘೂರ್ಜರ : ಇಂದಿನ ಗುಜರಾತ್ ಪ್ರಾಂತ್ಯದ ಒಂದು ಭಾಗ. ತಪತಿ ನದಿಯ ಉತ್ತರಕ್ಕೆ ಪಶ್ಚಿಮ ಘಟ್ಟಗಳಿಗೂ ಸಮುದ್ರಕ್ಕೂ ನಡುವೆ ಇರುವ ಪ್ರದೇಶ. ಗುರ್ಜರ ಪ್ರತಿಹಾರ ರೆಂಬುವರು ಆಳುತ್ತಿದ್ದರು.

**53.** ವಿದೇಹ : ಜನಕಮಹಾರಾಜನು ಆಳುತ್ತಿದ್ದ ದೇಶ. ಪೂರ್ವಕ್ಕೆ ಕೌಶಿಕೀ ನದಿ, ದಕ್ಷಿಣಕ್ಕೆ ಗಂಗಾನದಿ, ಪಶ್ಚಿಮಕ್ಕೆ ಗಂಡಕೀನದಿ, ಉತ್ತರಕ್ಕೆ ಹಿಮಾಲಯ ಪರ್ವತ- ಈ ನಾಲ್ಕು ಗಡಿಗಳ ನಡುವೆ ಇದ್ದ ದೇಶ. ಇದನ್ನು ಮಿಥಿಲಾ ಎಂದೂ ಕರೆಯುತ್ತಾರೆ. ಇಂದಿನ ಬಿಹಾರ್ ರಾಜ್ಯದಲ್ಲಿ ಉತ್ತರ ಭಾಗದಲ್ಲಿದೆ. ದರ್ಭಾಂಗ, ಚಂಪಾರಣ್, ಉತ್ತರ ಮುಸಾಪರ್‌ಪುರ್ ಜಿಲ್ಲೆಗಳಿಂದ ಕೂಡಿದ ಈ ಭಾಗವು ಅಂದು ವಿದೇಹವೆಂದು ಕರೆಯಲ್ಪಡುತ್ತಿತ್ತು. ವೇದಗಳ ಕಾಲದಿಂದಲೂ ಪ್ರಸಿದ್ಧವಾದ ದೇಶ. ಇದರ ಉಲ್ಲೇಖವು ಶತಪಥ ಬ್ರಾಹ್ಮಣದಲ್ಲೂ ಇದೆ. ಈಗ ಈ ಸ್ಥಳವನ್ನು ಜನಕಪುರವೆಂದು ಕರೆಯುತ್ತಾರೆ. ಇಕ್ಷ್ವಾಕು ವಂಶದ ನಿಮಿಯೆಂಬ ಚಕ್ರವರ್ತಿಯು ಒಂದು ಮಹಾಯಾಗವನ್ನು ಪ್ರಾರಂಭಿಸಿ ಅಕಸ್ಮಾತ್ ವಸಿಷ್ಠರ ಶಾಪದಿಂದ ಪೂರ್ಣಗೊಳಿಸಲಾರದೇ ದೇಹರಹಿತನಾಗಬೇಕಾದ ಸಂದರ್ಭವೊದಗಿತು. ಆಗ ಗೌತಮ ಮಹರ್ಷಿಗಳು ಆ ಯಾಗವನ್ನು ಪೂರ್ಣಗೊಳಿಸಲು ನಿಮಿಯ ಶವವನ್ನು ಕಡೆಧಾಗ ಒಬ್ಬ



shrinath.udupa@gmail.com

ಮನುಷ್ಯನ ಜನನವಾಯಿತು. ಅವನನ್ನು ಮಿಥಿಯೆಂದು ಕರೆದರು. ಈತನು ಆಳಿದ ದೇಶ ಮಿಥಿಲಾ ಎಂದಾಯಿತು. ಸ್ತ್ರೀ ಸಂಪರ್ಕವಿಲ್ಲದೇ ಈತನಿಗೆ ಮತ್ತೆ ಜನ್ಮ ಬಂದದ್ದರಿಂದ ಇವನನ್ನು ಜನಕನೆಂದೂ ಕರೆದರು. ಶವದಿಂದ ಉತ್ಪನ್ನವಾಗಿದ್ದರಿಂದ ವಿದೇಹನೆಂದೂ ಕರೆದರು. ಈತನು ಆಳಿದ ದೇಶ ವಿದೇಹವೆಂದಾಯಿತು.

**54.** ಚೇದಿ : ಬುಂದೇಲುಖಂಡದ ದಕ್ಷಿಣ ಭಾಗವನ್ನು, ಜಬ್ಬಲ್‌ಪುರದ ಉತ್ತರ ಭಾಗವನ್ನು ಒಳಗೊಂಡಿದ್ದ ದೇಶ. ಇಂದಿನ ಮಧ್ಯ ಪ್ರದೇಶ ರಾಜ್ಯದಲ್ಲಿದೆ. ಪಾಂಡವರ ಕಾಲದಲ್ಲಿ ಶಿಶುಪಾಲನು ಆಳುತ್ತಿದ್ದ ದೇಶ. ಈಗ ಈ ಪ್ರದೇಶವನ್ನೂ 'ರೇವಾ'ಯೆಂದು ಕರೆಯುತ್ತಾರೆ. ಇದರ ರಾಜಧಾನಿ ಒಮ್ಮೆ ಶುಕ್ತಿಮತಿಯೆಂಬ ಪಟ್ಟಣವಾಗಿದ್ದಿತು.

**55.** ಭೋಜ : i) ಭೋಜರಾಜನು ಆಳಿದ ದೇಶ. ಧಾರಾನಗರವು ಇದರ ರಾಜಧಾನಿ. ಇಂದಿನ ಮಧ್ಯಪ್ರದೇಶ ರಾಜ್ಯದಲ್ಲಿ 'ಧಾರ್' ಎಂಬ ಹೆಸರಿನಿಂದ ಕರೆಯಲ್ಪಡುತ್ತಿರುವ ನಗರ. ii) ಪಶ್ಚಿಮ ದಖ್ಖನ ಪ್ರದೇಶದಲ್ಲಿ 6 ಮತ್ತು 7ನೇ ಶತಮಾನದಲ್ಲಿ ಭೋಜರೆಂಬುವರು ಆಳುತ್ತಿದ್ದು, ಆ ದೇಶವು ಅದೇ ಹೆಸರಿನಿಂದ ಪ್ರಸಿದ್ಧವಾಗಿದ್ದಿತು. (ಬಾ.ಗೆ)

**56.** ಅವನ್ತಿ : ಮಾಳವ ದೇಶವು ಇದೇ ಹೆಸರಿನಿಂದ ಕರೆಯಲ್ಪಡುತ್ತಿತ್ತು. ಸಿಪ್ರಾನದಿಯ ಬಲದಂಡೆಯ ಮೇಲಿರುವ ಪ್ರದೇಶ. ಇಂದಿನ ಮಧ್ಯಪ್ರದೇಶ ರಾಜ್ಯವೆಂದು ಗುರುತಿಸಲ್ಪಟ್ಟಿದೆ. ಉಜ್ಜಯಿನಿಯು ಇದರ ರಾಜಧಾನಿಯಾಗಿದ್ದಿತು. ಶಕ ಪುರುಷ ವಿಕ್ರಮಾದಿತ್ಯನೇ ಮುಂತಾದ ಅನೇಕ ತೇಜಸ್ವಿಗಳು ಆಳಿದ ದೇಶ. ಭಾರತ ದೇಶಕ್ಕೆ ಕೇಂದ್ರವೆನಿಸಿದ್ದ ಸ್ಥಳ. (ನೋಡಿ - ಸಪ್ತಮೋಕ್ಷಪುರಿಗಳು)

### ೨೩. ಅನೇಕ ನದೀ ವಿರಾಜಿತೇ

ಭಾರತದಲ್ಲಿ ನದಿಗಳೆಂದರೆ ಅತ್ಯಂತ ಪವಿತ್ರತೀರ್ಥಸ್ಥಾನಗಳೆಂದೂ, ನದಿಯ ಸ್ನಾನವೆಂದರೆ ಘೋರ ಪಾಪಗಳನ್ನು ಕಳೆಯುವ ಉತ್ತಮ ಕ್ಷೇತ್ರಗಳೆಂದೂ ಪರಿಗಣಿಸಲ್ಪಟ್ಟಿದೆ. ಪರಮಾತ್ಮನ ಪವಿತ್ರ ಚೈತನ್ಯವೇ ನದಿಗಳಾಗಿ ಭಾರತದಲ್ಲಿ ಹರಿಯುತ್ತಿವೆಯೆಂಬ ನಂಬಿಕೆಯು ಅತ್ಯಂತ ಪುರಾತನವಾದುದು. ಭಾರತೀಯರು ಆಚರಿಸುವ ಸಕಲ ಕರ್ಮಗಳಲ್ಲಿಯೂ ವಿನಿಯೋಗಿಸುವ ಜಲದಿಂದ ತುಂಬಿರುವ ಕಲಶದಲ್ಲಿ ಪವಿತ್ರವಾದ ನದಿಗಳನ್ನು ಆಹ್ವಾನಿಸುವ ಸಂಪ್ರದಾಯವು ಇಂದಿಗೂ ಮನೆಮನೆಯಲ್ಲಿಯೂ ನಡೆದುಬಂದಿದೆ. ಮಹಾನ್ ಋಷಿಗಳು ತಮ್ಮ ತಪಸ್ಸಾಧನೆಗಾಗಿ ನದೀತೀರಗಳನ್ನು ಆರಿಸಿಕೊಂಡಿರುವ ವಿಚಾರವು ಮನನೀಯವಾಗಿದೆ. ಪ್ರಸಿದ್ಧ ದೇವಾಲಯಗಳು ನಿರ್ಮಾಣವಾಗಿರುವುದೂ ಸಹ ನದೀ ತೀರದಲ್ಲಿಯೇ. ಆದ್ದರಿಂದ ಇಲ್ಲಿ ಪವಿತ್ರ ನದಿಗಳನ್ನು ಸ್ಮರಿಸಿ, ಜಲಾಭಿಮಾನಿ ದೇವತೆಗಳ ಅನುಗ್ರಹವನ್ನು ಸಂಪಾದಿಸಿ ನಂತರ ಮುಂದಿನ ಕರ್ಮಗಳನ್ನು ಆಚರಿಸಬೇಕೆಂದು ಮಹಾಸಂಕಲ್ಪದ ಅಭಿಪ್ರಾಯವಾಗಿದೆ.

**1. ಭಾಗೀರಥೀ :** ಭಗೀರಥನು ದೇವಲೋಕದಿಂದ ಗಂಗೆಯನ್ನು ಭೂಮಿಗೆ ತಂದ ಕಾರಣ, ಈ ಹೆಸರು ಗಂಗಾನದಿಗೆ ಸಲ್ಲುತ್ತದೆ. ಹಿಮಾಲಯದಲ್ಲಿ ಗಂಗಾನದಿಯ ಉಗಮಸ್ಥಾನವಾದ ಗಂಗೋತ್ರಿಯ ಬಳಿ ಹರಿಯುತ್ತಿರುವ ಭಾಗವನ್ನು ಭಾಗೀರಥಿಯೆಂದು ಹೇಳುತ್ತಾರೆ. ಸುಮಾರು 35 ಕಿ.ಮಿ. ದೂರ ಪಶ್ಚಿಮಾಭಿಮುಖವಾಗಿ ಹರಿಯುವ ಪವಿತ್ರಭಾಗ.

**2. ಭೀಮರಥೀ :** ಇದು ಸಹ್ಯಾದ್ರಿಯಲ್ಲಿ ಖಂಡಾಲಕ್ಕೆ 25 ಮೈಲು ಉತ್ತರದಲ್ಲಿ ಹುಟ್ಟುತ್ತದೆ. ಈ ಸ್ಥಳದಲ್ಲಿ ಭೀಮಶಂಕರವೆಂಬ ಜ್ಯೋತಿರ್ಲಿಂಗ ಕ್ಷೇತ್ರವಿದೆ. ಈ ನದಿಯು ಪೂನಾ, ಶೋಲಾಪುರ, ಬಿಜಾಪುರ ಮುಂತಾದ ಪಟ್ಟಣಗಳಲ್ಲಿ ಹರಿದು ರಾಯಚೂರಿಗೆ ಉತ್ತರದಲ್ಲಿ ಕೃಷ್ಣಾ ನದಿಗೆ ಸೇರುತ್ತದೆ.

**3. ಸರಸ್ವತೀ :** ವೇದಗಳಲ್ಲಿ ಪ್ರಮುಖವಾಗಿ ಉಕ್ತವಾಗಿರುವ ಪುಣ್ಯನದಿ. ಸರಸ್ವತಿ ಮತ್ತು ದೃಷದ್ವತಿ ನದಿಗಳ ನಡುವಿನ ಪ್ರದೇಶವು ಬ್ರಹ್ಮಾವರ್ತವೆಂದು ಕರೆಯಲ್ಪಟ್ಟಿದೆ. ಈ ಸ್ಥಳವನ್ನು ಸಾರಸ್ವತ ಸತ್ರವೆಂದೂ ಸಹ ಕರೆಯುತ್ತಾರೆ. ಈ ಪ್ರದೇಶದ ಒಂದು ಭಾಗವೇ ಕುರುಕ್ಷೇತ್ರವೆಂಬುದು. ಸರಸ್ವತೀ ನದೀ ತೀರದಲ್ಲಿರುವ ಪೃಥೂದಕ (ಇಂದಿನ ಪಿಹೋವ - Pehoa) ಎಂಬ ಸ್ಥಳವನ್ನು ಬ್ರಹ್ಮಯೋನಿಯೆಂದು ಕರೆಯುತ್ತಾರೆ. ಬ್ರಹ್ಮಾವರ್ತದಲ್ಲಿ ಅನೇಕ ಮಹಾ ಯಾಗಗಳು ನಡೆದಿವೆ. ಬ್ರಾಹ್ಮಣಗಳ ಕಾಲದಲ್ಲಿ ಪ್ರಾಯಶಃ ಈ ನದಿಯು ಮರಳಿನ ಒಳಗೆ ಸೇರಿಹೋಯಿತೆಂದು ವಿದ್ವಾಂಸರುಗಳ ಅಭಿಪ್ರಾಯವಿದೆ.

ಈ ನದಿಯ ಉಗಮವು ಹಿಮವತ್ಪರ್ವತದಲ್ಲಿ 'ಪ್ಲಕ್ಷಪ್ರಶ್ರವಣ' ಎಂಬ ಸ್ಥಳದಲ್ಲಿ ಆಯಿತೆಂದು ಹೇಳಲಾಗಿದೆ. ಮತ್ತು ಕಣ್ಮರೆಯಾದ ಪ್ರದೇಶವನ್ನು 'ವಿನಾಶನ' ಎಂದು ಕರೆಯುತ್ತಾರೆ. ಈ ನದಿಯು ಸುಪ್ರಭಾ, ಕಾಂಚನಾಕ್ಷೀ, ವಿಶಾಲಾ, ಮನೋರಮಾ, ಓಘವತೀ, ಸುರೇಣು ಮತ್ತು ವಿಮಲೋದಕ ಎಂಬ ಹೆಸರುಗಳಿಂದ ಏಳು ಭಾಗಗಳಾಗಿ ಹರಿಯುತ್ತಿತ್ತೆಂದೂ ಮತ್ತು ಆ ಸ್ಥಳಕ್ಕೆ ಸಪ್ತ ಸಾರಸ್ವತವೆಂಬ ಹೆಸರಿದೆಯೆಂದೂ ವರ್ಣಿಸಲ್ಪಟ್ಟಿದೆ.(ಭಾರತ-ಶಲ್ಯ)

**4. ಗೌತಮೀ :** ಗೋದಾವರೀ ನದಿಯನ್ನೇ ಗೌತಮೀ ಎಂದು ಕರೆಯುತ್ತಾರೆ. ಮಹಾರಾಷ್ಟ್ರ ರಾಜ್ಯದ ನಾಸಿಕ ಕ್ಷೇತ್ರದಿಂದ 20 ಮೈಲು ದೂರದಲ್ಲಿರುವ ಬ್ರಹ್ಮಗಿರಿಯೆಂಬ ಬೆಟ್ಟದಲ್ಲಿ ಹುಟ್ಟುವ ಈ ನದಿಯು ಪವಿತ್ರ ಸಪ್ತ ನದಿಗಳಲ್ಲೊಂದಾಗಿದೆ. ಈ ಬೆಟ್ಟದ ಮೇಲೆ ತ್ರ್ಯಂಬಕೇಶ್ವರ ಜ್ಯೋತಿರ್ಲಿಂಗವಿದ್ದು, ಈ ಸ್ಥಳದಲ್ಲಿಯೇ ಗೌತಮ ಮಹರ್ಷಿಗಳ ಆಶ್ರಮವಿತ್ತೆಂದು ಉಕ್ತವಾಗಿದೆ. ಒಮ್ಮೆ ಭೀಕರ ಕ್ಷಾಮ ಬರಲು, ಮುನಿಗಳೆಲ್ಲರೂ ಈ ಆಶ್ರಮದಲ್ಲಿ ಆಶ್ರಯ ಹೊಂದಿ ಗೌತಮರ ತಪಃಪ್ರಭಾವದಿಂದ ಸುಖವಾಗಿದ್ದರು. ಆದರೆ ಕೆಲವು ಮುನಿಗಳು ಅಸೂಯೆಯಿಂದ ಒಂದು ಕೃತಕಗೋವನ್ನು ಸೃಷ್ಟಿಸಿ, ಆಶ್ರಮದ ಗಿಡಗಳನ್ನು ಹಾಳುಗೆಡವಲು ಬಿಟ್ಟರು. ಗೌತಮರು ಅದನ್ನು ಹೆದರಿಸಲು ಅದರ ಮೇಲೆ ಒಂದು ದರ್ಭೆಯ ತುಂಡನ್ನು ಎಸೆದರು. ಅಷ್ಟರಿಂದಲೇ ಆ ಗೋವು ಸತ್ತಿದ್ದರಿಂದ, ಅವರು ಗೋಹತ್ಯಾದೋಷಿಗಳಾದರೆಂಬ ಪ್ರಚಾರಕ್ಕೆ ಒಳಗಾದರು. ಬೇಸರಗೊಂಡ ಗೌತಮರು ಶಿವನನ್ನು ಆರಾಧಿಸಿದರು. ಶಿವನು ಅವರನ್ನು ಅನುಗ್ರಹಿಸಿ, ತನ್ನ ಜಟೆಯಿಂದ ಒಂದು ಹಿಡಿ ಕೂದಲನ್ನು



ಕೊಟ್ಟು, ಅದನ್ನು ಗೋವಿನ ಶರೀರದ ಮೇಲೆ ಹಿಂಡುವಂತೆ ಹೇಳಿದನು. ಇದರಿಂದ ಗೋವು ಮತ್ತೆ ಬದುಕಿ, ಗೌತಮರ ದೋಷವು ದೂರವಾಯಿತು, ಆ ಜಟೆಯಲ್ಲಿದ್ದ ಗಂಗೆಯು ಪ್ರವಾಹರೂಪದಲ್ಲಿ ಹರಿದು ಪವಿತ್ರ ನದಿಯಾಯಿತು. ಹಸುವು ಜೀವಗೊಂಡಿದ್ದರಿಂದ ಗೋದಾವರಿಯೆಂದೂ, ಗೌತಮರ ತಪಸ್ಸಿನಿಂದ ಉತ್ಪನ್ನವಾದ ನದಿಯು ಗೌತಮೀಯೆಂದೂ ಕರೆಯಲ್ಪಟ್ಟಿತು. ಗಂಗಾನದಿಗಿಂತ ಮೊದಲೇ ಇದರ ಉತ್ಪನ್ನವಾಗಿದ್ದರಿಂದ ವೃದ್ಧಗಂಗೆಯೆಂದೂ ಕರೆಯಲ್ಪಟ್ಟಿತು. (ಭಾರತ - ಆದಿ, ವನ, ಭೀಷ್ಮ; ಶಿವ.ಪು., ದೇವೀ-ಭಾಗ, ಮತ್ಸ್ಯ ಪು.)

**5. ನರ್ಮದಾ :** ಭಾರತದ ಅತ್ಯಂತ ದೊಡ್ಡ ನದಿಗಳಲ್ಲೊಂದು. ವಿಂಧ್ಯ ಪರ್ವತಕ್ಕೆ ಸೇರಿದ ಅಮರ ಕಂಟಕವೆಂಬ ಬೆಟ್ಟದಲ್ಲಿ ಹುಟ್ಟಿ ಸುಮಾರು 800 ಮೈಲಿಗಳಷ್ಟು ದೂರ ಹರಿದು ಗುಜರಾತ್ ರಾಜ್ಯದ ಸಮುದ್ರ ತೀರದ ಬಳಿಯಲ್ಲಿ ಕ್ಯಾಂಬೆ ಕೊಲ್ಲಿಯಲ್ಲಿ ಸಿಂಧು ಸಮುದ್ರವನ್ನು ಸೇರುವುದು. ಈ ಪವಿತ್ರ ನದಿಯ ಇಕ್ಕೆಲಗಳಲ್ಲಿಯೂ ಇರುವ ಅನೇಕ ತೀರ್ಥಗಳಲ್ಲಿ ಸುಮಾರು 400 ತೀರ್ಥಗಳು ಬಹುಮುಖ್ಯವಾದುವೆಂದು ಹೇಳಲ್ಪಟ್ಟಿದೆ. ಋಕ್ಷ ಪರ್ವತದಲ್ಲಿ ಶಿವನು ತಪಸ್ಸಿನಲ್ಲಿ ಲೀನವಾಗಿದ್ದಾಗ, ಆತನ ಶರೀರದಿಂದ ಅತಿಯಾದ ಬೆವರು ಹುಟ್ಟಿ ಅದರಿಂದ ಓರ್ವ ನಾರಿಯ ಜನನವಾಯಿತು. ಅವಳು ಶಿವನನ್ನು ಭಕ್ತಿಯಿಂದ ಪೂಜಿಸಿ, ಶಿವಾನುಗ್ರಹದಿಂದ ಪುಣ್ಯನದಿಯ ರೂಪವನ್ನು ತಾಳಿದಳು. ಈ ನದಿಯೇ ನರ್ಮದಾ ನದಿಯೆನಿಸಿತು. ನರ್ಮದೆಯನ್ನು ಸ್ಮರಿಸುವುದರಿಂದ ಸಕಲ ವಿಷ ಬಾಧೆಗಳಿಂದಲೂ ಮುಕ್ತರಾಗಬಹುದೆಂದು ಪ್ರಸಿದ್ಧವಾಗಿದೆ. ಶಿವನ ರೂಪವಾದ ಬಾಣಲಿಂಗಗಳು ಈ ನದಿಯಲ್ಲಿ ಉತ್ಪತ್ತಿಯಾಗಿ ನರ್ಮದೇಶ್ವರನೆಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಇದು ವೇದ ಪ್ರಸಿದ್ಧವಾದ ಸಪ್ತ ನದಿಗಳಲ್ಲೊಂದು. ನಿತ್ಯವೂ ಆಚರಿಸುವ ಸಂಧ್ಯಾವಂದನೆಯಲ್ಲಿ

**'ನರ್ಮದಾಯೈ ನಮಃ ಪ್ರಾತಃ । ನರ್ಮದಾಯೈ ನಮೋ ನಿಶಿ ।**
**ನಮೋऽಸ್ತು ನರ್ಮದೇ ತುಭ್ಯಂ ತ್ರಾಹಿ ಮಾಂ ವಿಷ ಸರ್ಪತಃ' ॥**

ಎಂದು ಪ್ರಾರ್ಥಿಸುತ್ತಾರೆ.

**6. ಯಮುನಾ :** ಪ್ರಸಿದ್ಧ ಸಪ್ತ ನದಿಗಳಲ್ಲೊಂದಾದ ಈ ಮಹಾನದಿಯು ಹಿಮಾಲಯದಲ್ಲಿ ಹುಟ್ಟಿ ಪ್ರಯಾಗದಲ್ಲಿ (ಅಲಹಾಬಾದ್) ಗಂಗಾನದಿಗೆ ಸೇರುವುದು. ಈ ಸ್ಥಳವು ತ್ರಿವೇಣಿ ಸಂಗಮವೆಂದು ಪ್ರಸಿದ್ಧಿಯಾಗಿದೆ. ಯಮುನಾ ನದಿಯ ತೀರದಲ್ಲಿರುವ ಮಥುರಾ ಕ್ಷೇತ್ರವು ಭಾರತದಲ್ಲಿರುವ ಪ್ರಮುಖ ಕ್ಷೇತ್ರಗಳಲ್ಲೊಂದಾಗಿದೆ. ಇದು ಶ್ರೀಕೃಷ್ಣ ಪರಮಾತ್ಮನು ಜನಿಸಿದ ಸ್ಥಳವು. ಯಮುನಾ ನದಿಯ ಜಲವನ್ನು ಭಕ್ತಿಯಿಂದ ಪ್ರಾಶನ ಮಾಡಿದವನು ಸೋಮಯಾಗದ ಫಲವನ್ನು ಹೊಂದುತ್ತಾನೆಂದು ಹೇಳಲ್ಪಟ್ಟಿದೆ. ಈ ನದೀ ತೀರದಲ್ಲಿ ಮಾಡುವ ಗಾಯತ್ರೀ ಜಪವು ವಿಶೇಷವಾದ ತೇಜಸ್ಸನ್ನು ಅನುಗ್ರಹಿಸುವುದೆಂದು ತಿಳಿಯಲ್ಪಟ್ಟಿದೆ.

**7. ಕೃಷ್ಣವೇಣೀ :** ದಕ್ಷಿಣ ಭಾರತದ ಪ್ರಸಿದ್ಧ ನದಿಯಾದ ಕೃಷ್ಣಾನದಿಯೇ ಕೃಷ್ಣವೇಣಿಯೆಂಬ ಹೆಸರಿನಿಂದ ಕರೆಯಲ್ಪಡುತ್ತದೆ. ಸಹ್ಯಾದ್ರಿ ಪರ್ವತದಲ್ಲಿ ಹುಟ್ಟಿ ಮಹಾರಾಷ್ಟ್ರ, ಕರ್ನಾಟಕ ಮತ್ತು ಆಂಧ್ರ ಪ್ರದೇಶ ರಾಜ್ಯಗಳಲ್ಲಿ ಹರಿದು, ಅನೇಕ ಉಪನದಿಗಳಿಂದ ಕೂಡಿ ಸುಮಾರು

shrinath.udupa@gmail.com

800 ಮೈಲು ಹರಿಯುತ್ತಾ ಕೊನೆಯಲ್ಲಿ ಗಂಗಾಸಾಗರವನ್ನು ಸೇರುವುದು. ಸಹ್ಯಾದ್ರಿಯಲ್ಲಿ ಪಂಚಗಂಗೆಗಳೆಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಕೃಷ್ಣಾ, ವೇಣಾ, ಕಕುದ್ಮತೀ, ಸಾವಿತ್ರೀ ಮತ್ತು ಗಾಯತ್ರೀ ಎಂಬ ಐದು ನದಿಗಳಲ್ಲಿ ಪ್ರಮುಖವೆನಿಸಿರುವುದು ಕೃಷ್ಣಾನದಿ.

**8. ವೇಣುಕಾ :** ಪಂಚಗಂಗೆಗಳೆನಿಸಿರುವ ನದಿಗಳಲ್ಲಿ ಒಂದಾದ ವೇಣಾ ನದಿಯನ್ನೇ ವೇಣುಕಾ ಎಂದೂ ಕರೆಯುತ್ತಾರೆ. ಈಗ ಈ ನದಿಯನ್ನು ಯೆನ್ನಾಯೆಂದು ಕರೆಯುತ್ತಾರೆ. ಕೃಷ್ಣಾ ಮತ್ತು ವೇಣಾ ನದಿಗಳು ಮಹಾರಾಷ್ಟ್ರ ರಾಜ್ಯದ ಸತಾರ ಎಂಬ ಸ್ಥಳದಿಂದ 4 ಮೈಲು ದೂರದಲ್ಲಿರುವ ಮಾಹುಲೀ ಎಂಬ ಸ್ಥಳದಲ್ಲಿ ಸಂಧಿಸುತ್ತವೆ.

**9. ತುಂಗಭದ್ರಾ :** ಕೃಷ್ಣಾ ನದಿಗೆ ಸೇರುವ ಪ್ರಮುಖವಾದ ಉಪನದಿ. ಶಿವಮೊಗ್ಗದಿಂದ 9 ಮೈಲು ದೂರದಲ್ಲಿರುವ ಕೂಡ್ಲಿ ಕ್ಷೇತ್ರದಲ್ಲಿ ತುಂಗಾ ಮತ್ತು ಭದ್ರಾ ನದಿಗಳ ಸಂಗಮವಾಗಿ ಮುಂದೆ ತುಂಗಭದ್ರಾ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ನದಿಗಳು ಪಶ್ಚಿಮ ಘಟ್ಟಗಳಲ್ಲಿರುವ ಗಂಗಾಮೂಲವೆಂಬ ಸ್ಥಳದಲ್ಲಿ ಉಗಮವಾಗುತ್ತವೆ. ಈ ಸ್ಥಳವು ಚಿಕ್ಕಮಗಳೂರು ಜಿಲ್ಲೆಯಲ್ಲಿರುವ ವರಾಹ ಪರ್ವತದಲ್ಲಿದೆ. ಪ್ರಸಿದ್ಧವಾಗಿರುವ ದಕ್ಷಿಣಾಮ್ನಾಯ ಶ್ರೀ ಶಂಕರಾಚಾರ್ಯ ಪೀಠವಾದ ಶೃಂಗೇರಿ ಕ್ಷೇತ್ರವು ತುಂಗಾನದಿಯ ಎಡದಂಡೆಯ ಮೇಲಿದೆ. ಕೂಡ್ಲಿಯಲ್ಲಿ ಈ ನದಿಗಳ ಸಂಗಮವಾಗಿ ನಂತರ ತುಂಗಭದ್ರಾ ಎಂಬ ಹೆಸರಿನಿಂದ ಹರಿಯುತ್ತಾ ಶಿವಮೊಗ್ಗದಿಂದ 24 ಮೈಲು ದೂರದಲ್ಲಿರುವ ಭಾಸ್ಕರ ಕ್ಷೇತ್ರವೆಂದು ಪ್ರಸಿದ್ಧಿ ಹೊಂದಿರುವ ಹೊನ್ನಾಳಿಯೆಂಬ ಸ್ಥಳವನ್ನು ಸೇರಿ ನಂತರ ಗುಹಾರಣ್ಯ ಕ್ಷೇತ್ರವಾದ ಹರಿಹರದಲ್ಲಿ ಹರಿದು ವಿಜಯ ನಗರ ಸಾಮ್ರಾಜ್ಯದ ರಾಜಧಾನಿ ಹಂಪೆಯನ್ನು ಸೇರಿ ನಂತರದಲ್ಲಿ ಆಂಧ್ರ ರಾಜ್ಯದಲ್ಲಿ ಹರಿದು ಕರ್ನೂಲಿನ ಬಳಿ ಕೃಷ್ಣಾ ನದಿಯನ್ನು ಸೇರುವುದು. ಸುಮಾರು 400 ಮೈಲು ಹರಿಯುವ ಈ ನದಿಯು ರಾಮಾಯಣದಲ್ಲಿ ಪಂಪಾನದಿಯೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಭಾಗವತದಲ್ಲಿ ಸಹ ಉಕ್ತವಾಗಿರುವ ಈ ನದಿಯು ಬ್ರಹ್ಮಾಂಡ ಪುರಾಣದಲ್ಲಿ ತುಂಗಭದ್ರಾ ಮಹಾತ್ಮೆಯೆಂಬ ಹೆಸರಿನಲ್ಲಿ ಸ್ತುತಿಸಲ್ಪಟ್ಟಿದೆ. ಪರಮಾತ್ಮನಾದ ವಿಷ್ಣುವು ವರಾಹಾವತಾರದಲ್ಲಿ ಹಿರಣ್ಯಾಕ್ಷನನ್ನು ಸಂಹರಿಸಿದಾಗ, ಪರಮಾತ್ಮನ ಶರೀರದಲ್ಲಿ ಉತ್ಪನ್ನವಾದ ಬೆವರು ವರಾಹರೂಪಿಯ ಎಡ ಮತ್ತು ಬಲ ಕೋರೆ ದಾಡೆಗಳಿಂದ ಹರಿದು ತುಂಗ ಮತ್ತು ಭದ್ರಾ ನದಿಗಳಾದವೆಂದು ಪುರಾಣದಲ್ಲಿ ಹೇಳಲ್ಪಟ್ಟಿದೆ.

**10. ಚಂದ್ರಭಾಗಾ :** (೧) ಇದು ಭೀಮಾನದಿಗೆ (ಭೀಮರಥೀ) ಸೇರುವ ಒಂದು ಉಪನದಿ. ಇದರ ದಡದಲ್ಲೆ ಅತ್ಯಂತ ಪ್ರಸಿದ್ಧವಾದ ಪಂಡರಾಪುರ ಕ್ಷೇತ್ರವಿರುವುದು. ಭಗವಾನ್ ವಿಷ್ಣುವು ವಿಠಲನೆಂಬ ಹೆಸರಿನಿಂದ ಪೂಜೆಗೊಂಡು ಭಕ್ತಾದಿಗಳನ್ನು ಕಾಪಾಡುತ್ತಿದ್ದಾನೆ. (೨) ಪಂಜಾಬ್ ರಾಜ್ಯದಲ್ಲಿ ಹರಿಯುವ ಪಂಚ ನದಿಗಳಲ್ಲಿ ಒಂದಾದ ಚೇನಾಬ್ ನದಿಯನ್ನೂ ಸಹ ಚಂದ್ರಭಾಗಾ ನದಿಯೆಂದು ಹೇಳುತ್ತಾರೆ. ಇದು ವೇದಗಳಲ್ಲಿ ಅಸಿಕ್ನಿಯಾ ಎಂದೂ, ಪುರಾಣಗಳಲ್ಲಿ ಚಂದ್ರಭಾಗಾ ಎಂಬುದಾಗಿಯೂ ಉಲ್ಲೇಖಿಸಲ್ಪಟ್ಟಿದೆ. ಪಂಜಾಬ್, ಹಿಮಾಚಲ ಪ್ರದೇಶ, ಕಾಶ್ಮೀರ ರಾಜ್ಯಗಳಲ್ಲಿ ಹರಿದು ಮುಂದೆ ಪಾಕಿಸ್ಥಾನದಲ್ಲೂ ಹರಿಯುತ್ತದೆ.



**11. ವರುಣಾ :** ಒಂದು ಉಪನದಿ. ಮಹಾರಾಷ್ಟ್ರ ರಾಜ್ಯದ ಸಾಂಗ್ಲಿ ಎಂಬ ಸ್ಥಳದ ಬಳಿ ಈ ನದಿಯು ಕೃಷ್ಣಾನದಿಯನ್ನು ಸೇರುವುದು.

**12. ಮಲಾಪಹಾರಿಣೀ :** ಕರ್ನಾಟಕ ರಾಜ್ಯದ ಬಿಜಾಪುರ ಜಿಲ್ಲೆಯಲ್ಲಿ ಮಲಪ್ರಭಾ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ನದಿ. ಈ ಪುಣ್ಯನದಿಯು ಸಹ್ಯಾದ್ರಿ ಪರ್ವತದಲ್ಲಿ ಹುಟ್ಟಿ ಕೃಷ್ಣಾ ನದಿಯನ್ನು ಸೇರುವ ಉಪನದಿಯಾಗಿದೆ. ಈ ನದಿಯ ದಂಡೆಯ ಮೇಲೆಯೇ ಪ್ರಸಿದ್ಧವಾದ **"ಪಟ್ಟದಕಲ್"** ಎಂಬ ಶಿಲ್ಪಕಲಾ ಸ್ಥಳವಿರುವುದು.

**13. ಕಾವೇರೀ :** ದಕ್ಷಿಣ ಭಾರತದ ಪ್ರಸಿದ್ಧ ನದಿ. ಪಶ್ಚಿಮ ಘಟ್ಟದಲ್ಲಿರುವ ಕೊಡಗು ಜಿಲ್ಲೆಯಲ್ಲಿರುವ ಬ್ರಹ್ಮಗಿರಿಯೆಂಬ ಬೆಟ್ಟದಲ್ಲಿ ಉಗಮವಾಗುತ್ತದೆ. ಈ ಸ್ಥಳವನ್ನು ತಲಕಾವೇರಿಯೆಂದು ಕರೆಯುತ್ತಾರೆ. ಈ ನದಿಯನ್ನು ದಕ್ಷಿಣ ಗಂಗೆಯೆಂಬುದಾಗಿ ಕರೆಯುತ್ತಾರೆ. ಈ ನದಿಯು ಆಗ್ನೇಯ ದಿಕ್ಕಿನಲ್ಲಿ ಹರಿಯುತ್ತಾ ಕರ್ನಾಟಕ ಮತ್ತು ತಮಿಳುನಾಡಿನಲ್ಲಿ 475 ಮೈಲುಗಳ ದೂರ ಹರಿದು ಗಂಗಾಸಾಗರವನ್ನು ಸೇರುತ್ತದೆ. ಈ ನದಿಯು ಸಮುದ್ರಕ್ಕೆ ಸೇರುವ ಬಳಿ ಹಿಂದೆ ಕಾವೇರಿ ಪಟ್ಟಣವೆಂಬ ಪ್ರಸಿದ್ಧ ಬಂದರಿದ್ದಿತು. ಇದನ್ನು ಚೋಳರು ಆಳುತ್ತಿದ್ದರು. ಅರ್ಜುನನು ತೀರ್ಥಯಾತ್ರೆಗೆ ಹೋಗಿದ್ದಾಗ ಇಲ್ಲಿ ಸ್ನಾನ ಮಾಡಿದ್ದನು. (ಭಾರತ. ಆದಿ 235) ರಾಜಸೂಯ ಯಾಗದಲ್ಲಿ ನಕುಲನು ಇಲ್ಲಿಗೆ ಬಂದಿದ್ದ. ಕವೇರನೆಂಬ ಅರಸು ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ಕಾವೇರಿಯೆಂಬ ಮಗಳನ್ನು ಪಡೆದು, ಬಳಿಕ ಅಗಸ್ತ್ಯ ಮಹಾಮುನಿಗೆ ಕೊಟ್ಟು ವಿವಾಹ ಮಾಡಿದ. ಆಕೆ ಕೊನೆಗೆ ನದೀ ರೂಪವನ್ನು ಪಡೆದು ಈ ಪವಿತ್ರ ನದಿಯಾದಳು. ಆಕೆಯ ಮೂಲಕ ಕವೇರನೂ ಸಹ ಮುಕ್ತಿಯನ್ನು ಪಡೆದ.

**14. ಕಪಿಲಾ :** (೧) ಮಹಾವಿಷ್ಣುವಿನ ಅಂಶಭೂತರಾದ ಕಪಿಲ ಮಹರ್ಷಿಗಳು ನೀಲಾಚಲ ಪರ್ವತದ ಬಳಿ ತಪಸ್ಸು ಆಚರಿಸುತ್ತಿದ್ದಾಗ, ಅವರ ಯೋಗ ಶರೀರದಲ್ಲಿದ್ದ ಅಮೃತ ಕುಂಭವು ಒಡೆದು ಬ್ರಹ್ಮರಂಧ್ರದಿಂದ ಹೊರಕ್ಕೆ ಹರಿದು ಅದೇ ಕಪಿಲಾ ನದಿಯೆನಿಸಿತು. ಸಿಂಧೂನದಿಗೆ ಉಪನದಿಯೆಂದೂ ಸಹ ವರ್ಣಿತವಾಗಿದೆ (ಭಾರತ ಭೀ. 9). (೨) ಕರ್ನಾಟಕ ರಾಜ್ಯದಲ್ಲಿರುವ ಗರಳಪುರಿ ಕ್ಷೇತ್ರದಲ್ಲಿ (ನಂಜನಗೂಡು) ಹರಿಯುತ್ತಿರುವ ಪವಿತ್ರವಾದ ನದಿಯು ಕಪಿಲಾ ನದಿಯೆಂದು ಪ್ರಸಿದ್ಧಿಹೊಂದಿದೆ. ಇದು ಕಾಕನಕೋಟೆ ಕಾಡಿನಲ್ಲಿ ಹುಟ್ಟಿ ತಿರುಮ ಕೂಡಲು ನರಸೀಪುರದ ಬಳಿ ಕಾವೇರೀ ನದಿಯನ್ನು ಸೇರುವುದು.

**15. ಕೌಂಡಿನೀ :** ಹಿಂದೆ ಕೌಂಡಿನ್ಯನೆಂಬ ಬ್ರಾಹ್ಮಣನು ತನ್ನ ಪತ್ನಿಯು ಭಕ್ತಿಯಿಂದ ಧಾರಣೆ ಮಾಡಿದ್ದ ಅನಂತ ಪದ್ಮನಾಭ ವ್ರತದ ಪ್ರಸಾದವಾದ ಅನಂತನ ದಾರವನ್ನು ಕಿತ್ತೆಸೆದುದರ ಪಾಪದ ಫಲವಾಗಿ ತನ್ನ ಸಂಪತ್ತನ್ನೆಲ್ಲಾ ಕಳೆದುಕೊಂಡು ದರಿದ್ರನಾದನು. ಪಶ್ಚಾತ್ತಾಪದಿಂದ ಜ್ಞಾನೋದಯವಾಗಿ ಅನಂತಪದ್ಮನಾಭನ ಪ್ರೇರಣೆಯಿಂದ ಪುನಃ ಭಕ್ತಿಯಿಂದ ಗೋವರ್ಧನಗಿರಿಗೆ ಹೋಗಿ (ಮೈಸೂರು ಜಿಲ್ಲೆಯಲ್ಲಿರುವ ಹಿಮವದ್ಗೋಪಾಲ ಸ್ವಾಮಿ ಬೆಟ್ಟ)



shrinath.udupa@gmail.com

ಗೋಪಾಲ ಸ್ವಾಮಿ ಸನ್ನಿಧಿಯಲ್ಲಿ ವ್ರತವನ್ನಾಚರಿಸಿದನು. ಆಗ ಅಲ್ಲಿ ಕೌಂಡಿನೀಯೆಂಬ ನದಿಯು ಜನ್ಮತಾಳಿ ಗರಳ ಪುರಿಯ ಕಡೆಗೆ (ನಂಜನಗೂಡು) ಹರಿದು ಕಪಿಲಾ ನದಿಯನ್ನು ಸೇರಿತು.

**16.** **ಕೃತಮಾಲಾ :** (i) ಮಲಯ ಪರ್ವತದಲ್ಲಿ ಹುಟ್ಟುವುದೆಂದೂ, ಶ್ರೀಕೃಷ್ಣನ ಅಣ್ಣ ಬಲರಾಮನು ತೀರ್ಥಯಾತ್ರಾ ಸಮಯದಲ್ಲಿ ಇಲ್ಲಿಗೆ ಬಂದಿದ್ದನೆಂದೂ ಹೇಳಲ್ಪಟ್ಟಿದೆ (ಭಾಗ:-ಸ್ಕಾಂದ 10) (ii) ಮಥುರಾ ಪಟ್ಟಣದ ಬಳಿ ಈ ನದಿಯು ಹರಿಯುತ್ತಿತ್ತೆಂದು ಆಗ್ನೇಯ ಪುರಾಣದಲ್ಲಿನ ತುಲಾಕಾವೇರಿ ಮಹಾತ್ಮ್ಯೆಯಲ್ಲೂ ಉಕ್ತವಾಗಿದೆ. (iii) ಮತ್ಸ್ಯಾವತಾರವನ್ನು ಹೊಂದುವ ಮುಂಚೆ ಪರಮಾತ್ಮನು ಒಂದು ಚಿಕ್ಕ ಮೀನಿನ ರೂಪದಲ್ಲಿ ಕೃತಮಾಲಾ ನದಿಯಲ್ಲಿ ತಪಸ್ಸನ್ನಾಚರಿಸುತ್ತಿದ್ದ. ಸತ್ಯವ್ರತನೆಂಬ ರಾಜರ್ಷಿಗೆ ಗೋಚರಿಸಿ ಮುಂದೆ ಬೃಹದಾಕಾರವಾಗಿ ಬೆಳೆದು ಪ್ರಳಯ ಕಾಲದಲ್ಲಿ ಜಗತ್ತನ್ನು ಕಾಪಾಡಿದ. (ಭಾರತ :-ವನ 190)

**17.** **ವಿಪಾಶಾ :** ಈ ನದಿಯ ಇಂದಿನ ಹೆಸರು 'ಬೀಯಾಸ್' ಎಂದಾಗಿದೆ. ಕಾರಣಾಂತರದಿಂದ ವಸಿಷ್ಠ ಮಹಾಮುನಿಗಳು ಆತ್ಮಹತ್ಯೆ ಮಾಡಿಕೊಳ್ಳುವ ಉದ್ದೇಶದಿಂದ ಈ ನದಿಯಲ್ಲಿ ಬಿದ್ದಾಗ, ಬ್ರಹ್ಮಹತ್ಯೆಯ ಭಯದಿಂದ ವಿಪಾಶೆಯು ಇವರನ್ನು ದಡಕ್ಕೆ ತಂದು ಹಾಕಿತು (ಭಾರತ :- ಆದಿ 193). ಆದುದರಿಂದಲೇ ಈ ಹೆಸರು ಬಂದಿತು. ಈ ನದಿಯು ವೈದಿಕ ಕಾಲದಿಂದಲೂ ಪ್ರಸಿದ್ಧವು. ಪಂಜಾಬಿನಲ್ಲಿ ಪಂಚಮಹಾನದಿಗಳೆಂದು ಪ್ರಸಿದ್ಧವಾಗಿರುವ ಸಟ್ಲೇಜ್(ಶುತುದ್ರು), ಬೀಯಾಸ್ (ವಿಪಾಶಾ), ರಾವೀ (ಪರುಷ್ಣೀ), ಚೀನಾಬ್ (ಅಸಿಕ್ನಿ) ಮತ್ತು ಝೀಲಂ (ವಿತಸ್ತಾ) ಎಂಬ ನದಿಗಳು ಒಟ್ಟಾಗಿ ಸೇರಿ ಸಿಂಧು ನದಿಯನ್ನು ಇಂದಿನ ಪಾಕಿಸ್ತಾನದ ಮಿಥಾನ್‌ಕೋಟ್ ಎಂಬಲ್ಲಿ ಸೇರುತ್ತವೆ. 290 ಮೈಲು ದೂರ ಹರಿಯುವ ವಿಪಾಶಾ ನದಿಯು ಲಾಹುಲ್ ಪ್ರದೇಶದಲ್ಲಿರುವ ರೋಟಾಂಗ್(Rohtang) ಕಣಿವೆಯಲ್ಲಿ ಹುಟ್ಟುತ್ತದೆ. ಈ ಕಣಿವೆಯು ಹಿಮವತ್ಪರ್ವತದಲ್ಲಿರುವುದು. ಪಾಣಿನಿಯು ತನ್ನ ನಿರುಕ್ತ ಗ್ರಂಥದಲ್ಲಿ ಈ ನದಿಯ ಹಿಂದಿನ ಹೆಸರು 'ಉರುಂಜಿರಾ'ಯೆಂದು ತಿಳಿಸಿದ್ದಾನೆ. ಋಗ್ವೇದದಲ್ಲಿ ಇದನ್ನು ಆರ್ಜೀಕೀಯಾ ಎಂದೂ ಸಹ ಹೇಳಿದೆ.

**18.** **ತಾಪಿನೀ :** ಉಗಮಸ್ಥಳವು ವಿಂಧ್ಯ ಪರ್ವತವು. ಇದು ಸೂರತ್ತಿನ ಬಳಿ ಅರಬ್ಬಿ ಸಮುದ್ರವನ್ನು ಸೇರುತ್ತದೆ. ಸ್ಕಾಂದ ಪುರಾಣದಲ್ಲಿ ಈ ನದಿಯ ಪವಿತ್ರತೆಯನ್ನು ವರ್ಣಿಸಲು ತಾಪೀ ಮಹಾತ್ಮ್ಯೆಯೆಂಬ ಆಖ್ಯಾನವೇ ಇದೆ. ತಾಪಿ ಸಾಗರ ಸಂಗಮವೆಂಬುದು ಅತ್ಯಂತ ಪವಿತ್ರ ಸ್ಥಳ. ಇದು ಮಧ್ಯಪ್ರದೇಶ ರಾಜ್ಯದ ಹಜಿರಾ ಎಂಬ ಊರಿನ ಬಳಿ ಇದ್ದು. 'ತಪತಿ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ನದಿಯ ತೀರಗಳಲ್ಲಿರುವ ತೀರ್ಥಕ್ಷೇತ್ರಗಳು ನೂರೆಂಟು ಎಂಬುದಾಗಿ ಹೇಳಲ್ಪಟ್ಟಿದೆ.



shrinath.udupa@gmail.com

**19.** **ಪೂರ್ಣಮಾ :** ಮಧ್ಯಪ್ರದೇಶ ರಾಜ್ಯದಲ್ಲಿರುವ 'ಬೇರಾರ್' ಎಂಬ ಬೆಟ್ಟದಲ್ಲಿ ಹುಟ್ಟಿ ತಪತೀ ನದಿಯನ್ನು ಸೇರುತ್ತದೆ. ಈ ಪವಿತ್ರ ಸಂಗಮ ಕ್ಷೇತ್ರವು 'ಭೋಸ್‌ವಾಲ್' ಎಂಬ ಸ್ಥಳದಲ್ಲಿದ್ದು. ಇಲ್ಲಿ 'ಚಂಗದೇವ' ಎಂಬ ದೇವಾಲಯವು ಪ್ರಸಿದ್ಧವಾಗಿದೆ. ಇದನ್ನು ಪಯೋಷ್ಣೀ ನದಿ ಎಂಬುದಾಗಿಯೂ ಕೆಲವರು ಹೇಳುವರು. ಅನೇಕ ಪುರಾಣಗಳಂತೆ ಈ ಎರಡು ನದಿಗಳು ಸ್ವತಂತ್ರವಾದ ಬೇರೆ ಬೇರೆ ನದಿಗಳು.

**20.** **ತಾಮ್ರಪರ್ಣೀ :** ಮಹೇಂದ್ರ ಅಥವಾ ಮಲಯ ಪರ್ವತದಲ್ಲಿ ಹುಟ್ಟುವುದು(ಮತ್ಸ್ಯ). ತಮಿಳುನಾಡಿನ ತಿರುನಲ್ವೇಲಿ ಜಿಲ್ಲೆಯಲ್ಲಿ ಹರಿಯುತ್ತದೆ. ಹಿಂದೆ ದೇವತೆಗಳು ಈ ನದಿತೀರದಲ್ಲಿ ಬಹಳ ವರ್ಷಗಳ ಕಾಲ ತಪಸ್ಸನ್ನು ಆಚರಿಸುತ್ತಿದ್ದರು. ಪಶ್ಚಿಮ ಘಟ್ಟಗಳಲ್ಲಿ ನೀಲಗಿರಿಯಿಂದ ಹಿಡಿದು ಕನ್ಯಾಕುಮಾರಿಯವರೆಗೂ ಇರುವ ಕಣಿವೆ ಪ್ರದೇಶವು ಮಲಯ ಪರ್ವತವೆನಿಸಿದೆ. ಅಂಬ ಸಮುದ್ರವೆಂಬ ಸ್ಥಳದ ಬಳಿ ಇರುವ ಪಾಪನಾಶಿನೀ ಕ್ಷೇತ್ರವು ಈ ನದಿಯ ತೀರದಲ್ಲೇ ಇರುವುದು.

**21.** **ವೇಗವತೀ :** 'ಕಂಚಿ' ಕ್ಷೇತ್ರದ ಬಳಿ ಹರಿಯುತ್ತಿರುವ ಪ್ರಸಿದ್ಧ ನದಿ. ಈ ನದಿಯು ಹತ್ತಿರದಲ್ಲಿರುವ ತೊಪ್ಪಿಲ್ ಅಗ್ರಹಾರವೆಂಬ ಸ್ಥಳದಲ್ಲಿಯೇ ಪ್ರಸಿದ್ಧ ಶ್ರೀ ವೈಷ್ಣವ ಆಚಾರ್ಯರಾದ ವೇದಾಂತ ದೇಶಿಕರು ಜನಿಸಿದ್ದರು.

**22.** **ಹೇಮವತೀ :** (i) ಹೈಮವತೀಯೆಂದು ಕರೆಯುವ ಈ ನದಿ ಹಿಮವತ್ಪರ್ವತದಲ್ಲಿ ಹುಟ್ಟುವುದು. ಶುತುದ್ರೂ ನದಿಗೂ ಈ ಹೆಸರು ರೂಢಿಯಲ್ಲಿತ್ತು. (ಭಾರತ- ಆದಿ. ಬೀಷ್ಮ) (ii) ಕರ್ನಾಟಕ ರಾಜ್ಯದಲ್ಲಿ ಹರಿಯುತ್ತಿರುವ ಮತ್ತು ಕಾವೇರಿ ನದಿಗೆ ಸೇರುವ ಪವಿತ್ರ ಹೇಮಾವತೀ ನದಿ.

**23.** **ವೇತ್ರವತೀ :** ಪಾರಿಯಾತ್ರ ಪರ್ವತದಲ್ಲಿ ಹುಟ್ಟಿ ಯಮುನಾ ನದಿಗೆ ಸೇರುವ ಉಪನದಿ. ಈಗ ಇದು ಭೂಪಾಲ್ ಬಳಿ 'ಬೆಟ್ವೆ' ಎಂಬ ಹೆಸರಿನಿಂದ ಕರೆಯಲ್ಪಡುತ್ತಿದೆ.

**24.** **ನೇತ್ರವತೀ :** ಇದನ್ನು ನೇತ್ರಾವತಿಯೆಂದೂ ಸಹಾ ಹೇಳುತ್ತಾರೆ. ಇದು ಮಡಿಕೇರಿ ಬಳಿ ಹುಟ್ಟಿ ಪಶ್ಚಿಮಾಭಿಮುಖವಾಗಿ ಹರಿಯುವ ಕೆಲವೇ ನದಿಗಳಲ್ಲಿ ಅತ್ಯಂತ ಪವಿತ್ರವೆನಿಸಿರುವುದು. ಈ ನದಿಯ ತೀರದಲ್ಲೇ ಪ್ರಸಿದ್ಧವಾದ ಶ್ರೀಕ್ಷೇತ್ರ ಧರ್ಮಸ್ಥಳವಿದೆ.

**25.** **ವಿಶೋಕಾ :** ಕಾಮ್ಯಕವನದ ದಕ್ಷಿಣ ಭಾಗದಲ್ಲಿ ಅಶೋಕ ತೀರ್ಥವೆಂಬ ಪ್ರಸಿದ್ಧ ತೀರ್ಥವಿದೆ. ಇದನ್ನೇ 'ವಿಶೋಕಾ' ಎಂದು ಕರೆದಿರಬಹುದು.

**26.** **ಕೌಶಿಕೀ :** ವಿಶ್ವಾಮಿತ್ರ ಮಹರ್ಷಿಗಳ ಸೋದರಿಯೂ, ಜಮದಗ್ನಿ ಮಹರ್ಷಿಗಳ ಜನನಿಯೂ ಆದ ಸತ್ಯವತೀಯೆಂಬುವಳು ನದಿಯ ರೂಪ ಪಡೆದು ಕೌಶಿಕಿಯೆಂಬ ಹೆಸರು ಪಡೆದಳು. ಈ ನದಿ ನೇಪಾಳದ ಬಳಿ ಹಿಮಪರ್ವತದಲ್ಲಿ ಹುಟ್ಟುತ್ತದೆ. ಗಂಗಾನದಿಗೆ

ಉಪನದಿಯಾಗಿ ಸೇರುವುದು. ಗಂಗಾಸಾಗರವನ್ನು ಗಂಗೆಯು ಸೇರುವ ಒಂದು ಪವಿತ್ರ ಸ್ಥಳವನ್ನೂ ಸಹ ಕೌಶಿಕೀ ತೀರ್ಥವೆನ್ನುತ್ತಾರೆ. (ಭಾರತ-ಭೀಷ್ಮ.ವನ. ಅನು) ಇಂದು ಈ ನದಿಯನ್ನು "ಕೋಸೀ" ಎಂದು ಕರೆಯುತ್ತಾರೆ.

**27. ಗಂಡಕೀ :** ಈ ನದಿ ಹಿಮಪರ್ವತದಲ್ಲಿ ಹುಟ್ಟಿ ದಕ್ಷಿಣವಾಹಿನಿಯಾಗಿ ಹರಿಯುವುದು. ಹಿಂದೆ ಜಯ ವಿಜಯರೆಂಬ ವಿಷ್ಣುಭಕ್ತರು ಶಾಪಗ್ರಸ್ತರಾಗಿ ಆನೆ ಮೊಸಳೆಗಳಾಗಿ ಜನಿಸಿ, ಈ ನದಿಯ ಬಳಿ ಪರಸ್ಪರ ಜಗಳ ಕಾಯುತ್ತಿರಲು ವಿಷ್ಣುವಿನ ಚಕ್ರದಿಂದ ಹತರಾಗಿ, ವಿಷ್ಣು ಸಾರೂಪ್ಯಹೊಂದಿ ಜಯ, ವಿಜಯ ಎಂಬ ಹೆಸರಿನಿಂದಲೇ ವೈಕುಂಠದ ದ್ವಾರಪಾಲಕರಾದರು. ಅಂದಿನಿಂದ ಈ ನದಿಗೆ ಹರಿಕ್ಷೇತ್ರವೆಂದೇ ಹೆಸರಾಯಿತು. ವಿಷ್ಣುಚಕ್ರವು ನೀರಿನಲ್ಲಿ ಗಿರಗಿರನೇ ಸುತ್ತಿದಾಗ ಆ ನದಿಯ ಕಲ್ಲುಗಳೆಲ್ಲವೂ ಚಕ್ರದ ಗುರುತನ್ನು ಹೊಂದಿ ಸಾಲಿಗ್ರಾಮಗಳೆಂದು ಪ್ರಖ್ಯಾತವಾಗಿ ವಿಷ್ಣುವಿನ ಅಂಶದಿಂದ ಶಕ್ತಿಯುತವಾದವು. ಇಂದಿಗೂ ಭಕ್ತಾದಿಗಳಿಂದ ನಿತ್ಯವೂ ಪೂಜೆಗೊಂಡು ಅನುಗ್ರಹಿಸುತ್ತಿರುವುವು. ಖಟ್ಮಂಡುವಿನಿಂದ 140 ಮೈಲು ದೂರದಲ್ಲಿ ಮುಕ್ತಿನಾಥವೆಂಬ ಕ್ಷೇತ್ರವಿದೆ. ಈ ಸ್ಥಳದಲ್ಲಿ ಹರಿಯುವ ಗಂಡಕೀನದಿಯು ಸಾಲಿಗ್ರಾಮಗಳಿಗೆ ಪ್ರಸಿದ್ಧಿಯು. ಈ ನದಿಯನ್ನು ಸಾಲಿಗ್ರಾಮೀ ಎಂಬುದಾಗಿಯೂ ಕರೆಯುತ್ತಾರೆ.

**28. ಗೋಮುಖೀ :** (i) ಗೋಮುಖವೆಂಬ ಹಿಮಗುಹೆ ಗಂಗಾನದಿಯ ಉಗಮ ಸ್ಥಳವು. ಈ ಭಾಗಕ್ಕೆ ಗೋಮುಖೀ ಎಂದು ಹೆಸರು. ಈ ಸ್ಥಳದಿಂದ ಸುಮಾರು 35ಮೀ. ದೂರ ಪಶ್ಚಿಮಾಭಿಮುಖವಾಗಿ ಹರಿಯುವ ಭಾಗವು ಭಾಗೀರಥಿಯೆಂದು ಪ್ರಸಿದ್ಧವು. (ii) ರೈವತಕ ಪರ್ವತದಲ್ಲಿ (ಇಂದಿನ ಗಿರಿನಾರ್) ಇರುವ ಒಂದು ಕಲ್ಯಾಣಿ, ಶ್ರೀ ಕೃಷ್ಣನ ಗುರುಗಳಾದ ಗಾರ್ಗ್ಯಮುನಿಗಳು ಒಮ್ಮೆ ಬಾಲ್ಯದಲ್ಲಿ, ಹಸಿದ ಹಸುವೊಂದು ನೀರು ಕುಡಿಯುತ್ತಿದ್ದಾಗ ಹೊಡೆದು ಓಡಿಸಿ ಗೋಶಾಪಕ್ಕೆ ಗುರಿಯಾದರು. ಇದರ ಪರಿಹಾರಾರ್ಥವಾಗಿ ಇಲ್ಲಿ ಬಹುಕಾಲ ತಪಸ್ಸನ್ನು ಆಚರಿಸಿ ಗಂಗಾದೇವಿಯಿಂದ ಅನುಗ್ರಹ ಪಡೆದರು. ಇದರ ಸಂಕೇತವಾಗಿ ಗಂಗೆಯು ಗೋಮುಖದಿಂದ ಇಲ್ಲಿ ಹರಿದು' ಗೋಮುಖೀ ಗಂಗಾ' ಎಂಬ ಹೆಸರಿನಿಂದ ಪ್ರಖ್ಯಾತಳಾಗಿ ಭಕ್ತರನ್ನು ಅನುಗ್ರಹಿಸುತ್ತಿರುವಳು.

**29. ಪಿನಾಕಿನೀ :** ಆಂಧ್ರಪ್ರದೇಶ ರಾಜ್ಯದಲ್ಲಿ ಹುಟ್ಟಿ, ತಾಡಪತ್ರಿಯೆಂಬ ಪುಣ್ಯ ಕ್ಷೇತ್ರದಲ್ಲಿ ಪವಿತ್ರವೆನಿಸಿ ಹರಿಯುತ್ತದೆ. ಈ ಸ್ಥಳವು ಅನಂತಪುರ ಜಿಲ್ಲೆಯಲ್ಲಿದೆ. ಗುಂತಕಲ್ಲಿನಿಂದ 47 ಮೈಲು ದೂರವಿರುವ ತಾಡಪತ್ರಿಯಲ್ಲಿ ಈ ನದಿಯು ಉತ್ತರವಾಹಿನಿಯಾಗಿ ಹರಿಯುತ್ತಾ ಪರಮಪವಿತ್ರ ಕ್ಷೇತ್ರವಾಗಿದೆ. ಶಿಲ್ಪಕಲೆಗೆ ಅತ್ಯಂತ ಹೆಸರುವಾಸಿಯಾದ ಬುಗ್ಗ ರಾಮಲಿಂಗೇಶ್ವರ ಸ್ವಾಮಿ ಮತ್ತು ಚಿಂತಲ ವೆಂಕಟರಮಣ ಸ್ವಾಮಿ ದೇವಾಲಯಗಳು ಈ ಸ್ಥಳದಲ್ಲಿ ಪ್ರಸಿದ್ಧವು. ಶಿವ ದೇವಾಲಯದಲ್ಲಿ ಪೂರ್ಣವಾಗಿ ಶಿವಪುರಾಣವೂ ಮತ್ತು ವಿಷ್ಣು ದೇವಾಲಯದ ಗೋಡೆಗಳ ಮೇಲೆ ರಾಮಾಯಣ, ಭಾಗವತಗಳ ಮುಖ್ಯ ಪ್ರಸಂಗಗಳು ಕೆತ್ತಲ್ಪಟ್ಟಿವೆ: ಅತ್ಯಂತ ಅಪೂರ್ವ ಶಿಲ್ಪಕಲೆಗೆ ಪ್ರಸಿದ್ಧವಾಗಿರುವ ಕಲಾ ಪವಿತ್ರ ಕ್ಷೇತ್ರವನ್ನು ಭಾಸ್ಕರ ಕ್ಷೇತ್ರವೆಂದೂ ಕರೆಯುತ್ತಾರೆ.



shrinath.udupa@gmail.com

## ೨೪. ಅನೇಕ ಪುಣ್ಯಕ್ಷೇತ್ರ ಸಂಯುತೇ

ಭಾರತದಲ್ಲಿ ಪುಣ್ಯಕ್ಷೇತ್ರಗಳ ಪಾತ್ರ ಅತ್ಯಂತ ಮಹತ್ತರವಾದುದರಿಂದ ಶುಭಕರ್ಮಗಳಲ್ಲಿ ಮೊದಲು ಅವುಗಳನ್ನೂ ಸಹ ಮನನ ಮಾಡಬೇಕೆಂದು ಮಹಾಸಂಕಲ್ಪದ ಸಂಕಲ್ಪವಾಗಿದೆ. ಕೆಲವು ಮುಖ್ಯ ಪುಣ್ಯಕ್ಷೇತ್ರಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.

**1. ವಾರಣಾಸಿ :** ಪರಮ ಪವಿತ್ರವಾದ ಮತ್ತು ಜೀವನದಲ್ಲಿ ಒಂದು ಸಲವಾದರೂ ಪ್ರತಿಯೊಬ್ಬ ಹಿಂದುವು ತೀರ್ಥಯಾತ್ರೆ ಮಾಡಲೇಬೇಕೆಂದು ಪರಿಗಣಿಸಿರುವ ದಿವ್ಯವಾದ ಕಾಶೀಕ್ಷೇತ್ರವು. ವರುಣಾ ಮತ್ತು ಅಸೀಯೆಂಬ ಎರಡು ಉಪ ನದಿಗಳು ಗಂಗಾ ನದಿಯನ್ನು ಸೇರುತ್ತವೆ. ಈ ಎರಡು ನದಿಗಳ ನಡುವೆ ಪ್ರಧಾನವಾಗಿ ಹರಿಯುವ ಗಂಗಾನದೀ ತೀರದಲ್ಲಿರುವ ಕಾಶೀಕ್ಷೇತ್ರವು ವಾರಣಾಸಿ ಎಂದು ಕರೆಯಲ್ಪಡುವ ಶಕ್ತಿ ಪೀಠವೂ ಹೌದು. ಇಲ್ಲಿನ ಆರಾಧ್ಯ ದೇವ ಕಾಶೀ ವಿಶ್ವನಾಥ ಸ್ವಾಮಿಯು. ಇದು ವಿಶಾಲಾಕ್ಷಿಯೆಂದು ಕರೆಯಲ್ಪಡುವ ಶಕ್ತಿಪೀಠವೂ ಹೌದು. ಇದು ದೇವಾಲಯಗಳ ಬೀಡೆಂದೇ ಪ್ರಸಿದ್ಧವು. ಸಾವಿರಾರು ವರ್ಷಗಳ ಕಾಲ ರಾಜಧಾನಿಯಾಗಿ ಮೆರೆದ ಸ್ಥಳ. ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಪ್ರಧಾನವಾದ ಕಾಶೀ ವಿಶ್ವೇಶ್ವರ ಸ್ವಾಮಿಯು ನೆಲೆಸಿರುವ ಸ್ಥಳ. ಭೂ ಪ್ರಳಯವಾಗಲು ಈ ಸ್ಥಳವು ಮಾತ್ರ ಮುಳುಗಡೆಹೊಂದುವುದಿಲ್ಲವೆಂದು ಪ್ರತೀತಿ. ಇಂದು ಇದು ಉತ್ತರ ಪ್ರದೇಶ ರಾಜ್ಯಕ್ಕೆ ಸೇರಿದ ಪವಿತ್ರ ಸ್ಥಳವು. ಈಗ ಇದನ್ನು ಬೆನಾರಸ್ ಎಂಬುದಾಗಿಯೂ ಕರೆಯುತ್ತಾರೆ. (ನೋಡಿ-ಸಪ್ತಮೋಕ್ಷಪುರಿಗಳು).

**2. ಚಿದಂಬರ :** ಶಿವನು ನಟರಾಜನಾಗಿ ನಟನವಾಡಿದ ಸ್ಥಳ. ಮದ್ರಾಸಿನಿಂದ ದಕ್ಷಿಣಕ್ಕೆ150 ಮೈಲು ದೂರದಲ್ಲಿದೆ. ಇಲ್ಲಿನ ಬೃಹತ್ತಾದ ದೇವಾಲಯವು 9ನೇ ಶತಮಾನಕ್ಕೆ ಸೇರಿದ ದ್ರಾವಿಡ ಶೈಲಿಗಳಲ್ಲೊಂದಾಗಿದೆ. 1520ರಲ್ಲಿ ಈ ದೇವಾಲಯಕ್ಕೆ ನೂತನವಾದ ರೂಪವನ್ನು ರಚಿಸಿದವರು ಕರ್ನಾಟಕ ವಿಜಯನಗರ ಸಾಮ್ರಾಜ್ಯದ ಪ್ರಭುವಾದ ಕೃಷ್ಣದೇವರಾಯರು. 40 ಎಕರೆ ಪ್ರದೇಶವನ್ನೊಳಗೊಂಡಿರುವ ಈ ಬೃಹತ್ ದೇವಾಲಯದಲ್ಲಿ ಭರತನಾಟ್ಯದ 108 ಭಂಗಿಗಳನ್ನು ಕಾಣಬಹುದಾಗಿದೆ. ಪಂಚಭೂತ ಲಿಂಗಗಳಲ್ಲಿ ಒಂದಾದ ಆಕಾಶಲಿಂಗವು ಇಲ್ಲಿ ಪ್ರತಿಷ್ಠಿತವಾಗಿದೆ. ತಿರುನೀಲಕಂಠ ನಾಯನಾರ್ ಹುಟ್ಟಿದುದು, ಮಾಣಿಕ್ಯವಾಚಕರು ಬೌದ್ಧರನ್ನು ವಾದದಲ್ಲಿ ಸೋಲಿಸಿದುದು, ಶೆಕ್ಕಿಲಾರರು ಪೆರಿಯಪುರಾಣವನ್ನು ರಚಿಸಿದುದು, ನಂದನಾರ್, ರಾಮಾನುಜಾಚಾರ್ಯರು ಇದ್ದುದು ಈ ಪುಣ್ಯ ಕ್ಷೇತ್ರದಲ್ಲಿಯೇ.

**3. ಶ್ರೀಶೈಲ :** ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾದ ಮಲ್ಲಿಕಾರ್ಜುನೇಶ್ವರ ಸ್ವಾಮಿಯು ನೆಲೆಸಿರುವ ಕ್ಷೇತ್ರ. ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯಲ್ಲಿರುವ ಋಷಭಗಿರಿಯೆಂಬ ಬೆಟ್ಟದ ಮೇಲೆ ಕೃಷ್ಣಾನದಿಯ ದಕ್ಷಿಣ ದಂಡೆಯಲ್ಲಿರುವ ಸ್ಥಳ. ವೇದಗಳ ಕಾಲದಿಂದಲೂ ಪ್ರಸಿದ್ಧಿಯಾಗಿರುವ ಕ್ಷೇತ್ರ. ವಿಜಯವಾಡ-ಗುಂತಕಲ್ಲಿನ ಮಧ್ಯೆ ಇರುವ ನಂದ್ಯಾಲ ರೈಲ್ವೆ ನಿಲ್ದಾಣದಲ್ಲಿ ಇಳಿದು ಅಲ್ಲಿಂದ 68 ಮೈಲು ಬಸ್ಸಿನಲ್ಲಿ ಪ್ರಯಾಣಿಸಿ ಈ ಕ್ಷೇತ್ರವನ್ನು ಸೇರಬಹುದು. ಇಲ್ಲಿಗೆ ವಿವಿಧ ನಗರಗಳಿಂದ ನೇರ ಬಸ್ ಸಂಪರ್ಕವೂ ಇದೆ. ಬಸವಣ್ಣ,

ಅಲ್ಲಮಪ್ರಭು, ಸಿದ್ಧರಾಮ, ಅಕ್ಕಮಹಾದೇವಿ ಮುಂತಾದವರು ಅರ್ಚಿಸಿ ಸಿದ್ಧಿ ಪಡೆದ ಪುಣ್ಯ ಸ್ಥಳ.

**4.** ಅಹೋಬಲ : ಆಂಧ್ರಪ್ರದೇಶದಲ್ಲಿರುವ ಕರ್ನೂಲು ಜಿಲ್ಲೆಯಲ್ಲಿರುವ ನಂದ್ಯಾಲ ರೈಲ್ವೆ ನಿಲ್ದಾಣದಿಂದ 30 ಮೈಲು ದೂರದಲ್ಲಿರುವ ನರಸಿಂಹ ಸ್ವಾಮಿಯ ಕ್ಷೇತ್ರ. ನವ ನರಸಿಂಹ ಸ್ವಾಮಿಯ ಕ್ಷೇತ್ರವಾದ ಇಲ್ಲಿ ಎಲ್ಲಾ ಒಂಭತ್ತು ನರಸಿಂಹ ರೂಪಗಳೂ ಇದ್ದು ಭಕ್ತರನ್ನು ಅನುಗ್ರಹಿಸುವ ಪುಣ್ಯಕ್ಷೇತ್ರವಾಗಿದೆ. ಪ್ರತಿರೂಪಕ್ಕೂ ಬೇರೆ ಬೇರೆಯಾಗಿರುವ ದೇವಾಲಯಗಳಿರುವ ಈ ಕ್ಷೇತ್ರವು ಬೆಟ್ಟಗಳಿಂದ ಕೂಡಿದ ಅರಣ್ಯ ಪ್ರದೇಶವಾಗಿದೆ. ಪ್ರಹ್ಲಾದವರದ ನರಸಿಂಹ, ಚಕ್ರವತ ನರಸಿಂಹ, ಕರಂಡ ನರಸಿಂಹ, ಯೋಗಾನಂದ ನರಸಿಂಹ, ಗುಹಾನರಸಿಂಹ, ಕ್ರೋಧ ನರಸಿಂಹ, ಮಾಲೋಲ ನರಸಿಂಹ, ಜ್ವಾಲಾ ನರಸಿಂಹ ಮತ್ತು ಪಾವನ ನರಸಿಂಹ ಎಂಬ ಒಂಭತ್ತು ರೂಪಗಳಿಂದ ದರ್ಶನ ಕೊಡುವ ನರಸಿಂಹ ಸ್ವಾಮಿಯನ್ನು ದೇವತೆಗಳು **"ನಾರಸಿಂಹಃ ಪರಂ ದೈವಂ ಅಹೋಬಲಂ ಅಹೋಬಲಂ"** ಎಂಬುದಾಗಿ ಸ್ತುತಿಸಿದ್ದರಿಂದ ಈ ಸ್ಥಳಕ್ಕೆ ಅಹೋಬಲವೆಂದು ಹೆಸರು ಬಂದಿತು.

**5.** ವೇಂಕಟಾಚಲ : ಇದು ಭಾರತ ದೇಶದ ಪ್ರಜೆಗಳಿಗಲ್ಲದೇ ಅನ್ಯ ದೇಶಗಳಲ್ಲಿನ ವಿಷ್ಣುಭಕ್ತರೆಲ್ಲರಿಗೂ ಪರಿಚಿತವಾಗಿರುವ ಅತ್ಯಂತ ಪ್ರಸಿದ್ಧವಾದ "ತಿರುಪತಿ" ಎಂಬ ಪುಣ್ಯಕ್ಷೇತ್ರವು. ಪುರಾಣ ಪ್ರಸಿದ್ಧವಾದ ವೇಂಕಟಾಚಲವೆಂಬ ಗಿರಿಯ ಮೇಲೆ ವಿಷ್ಣುಪರಮಾತ್ಮನು ವೇಂಕಟೇಶ್ವರನೆಂಬ ಹೆಸರಿನಿಂದ ಜನಗಳನ್ನು ಅನುಗ್ರಹಿಸುತ್ತಿರುವ ಪ್ರಸಿದ್ಧ ಕ್ಷೇತ್ರವು. ತಿರುಮಲೆಯೆಂಬ ಹೆಸರಿನಿಂದಲೂ ಕರೆಯಲ್ಪಡುತ್ತದೆ. ವಿಷ್ಣುವು ವರಾಹಾವತಾರವನ್ನೆತ್ತಿದ ಬಳಿಕ, ಅದೇ ರೂಪದಲ್ಲಿ ವೈಕುಂಠಕ್ಕೆ ಹೋಗಲು ಇಚ್ಛಿಸದೆ, ವೈಕುಂಠದಲ್ಲಿದ್ದ ತನ್ನ ಕ್ರೀಡಾಪರ್ವತವನ್ನು ಭೂಮಿಗೆ ಗರುಡದೇವನ ಕೈಯಿಂದ ತರಿಸಿ, ಇಲ್ಲಿಯೇ ವಾಸಮಾಡತೊಡಗಿದನು. ನಾರಾಯಣನನ್ನು ಬಿಟ್ಟಿರಲಾರದ ಮಹಾಲಕ್ಷ್ಮಿಯು ಭೂಮಿಗೆ ಬಂದು, ಆಕಾಶರಾಯನೆಂಬ ರಾಜನಿಗೆ ಪದ್ಮಾವತಿಯೆಂಬ ಹೆಸರಿನಿಂದ ಜನಿಸಿದಳು. ವಿಷ್ಣುವು ಶ್ರೀನಿವಾಸನಾಗಿಯೂ, ಲಕ್ಷ್ಮಿಯು ಪದ್ಮಾವತಿಯಾಗಿಯೂ ಈ ಗಿರಿಯಲ್ಲೇ ನೆಲೆಸಿದರು. ಅಂದಿನಿಂದ ಇದು ಗರುಡಾಚಲ ಎಂದೂ ಸಹ ಪ್ರಸಿದ್ಧವಾಗಿ ಇಂದು ತಿರುಪತಿಯಾಗಿದೆ.

ಇಲ್ಲಿರುವ ಪರ್ವತ ಶ್ರೇಣಿಯ ಏಳು ಶಿಖರಗಳು ಆದಿಶೇಷನ ಏಳು ಹೆಡೆಗಳೆಂದು ಹೇಳಲ್ಪಟ್ಟಿವೆ. ಕೃತಯುಗದಲ್ಲಿ ವೃಷಭಾಚಲ ತ್ರೇತಾಯುಗಲ್ಲಿ ಅಂಜನಾಚಲ, ದ್ವಾಪರಯುಗದಲ್ಲಿ ಶೇಷಾಚಲ ಮತ್ತು ಕಲಿಯುಗದಲ್ಲಿ ವೇಂಕಟಾಚಲವೆಂದು ಪ್ರಸಿದ್ಧವಾಗಿದೆ.

ಈ ಕ್ಷೇತ್ರದ ಮತ್ತೊಂದು ಬಹು ಮುಖ್ಯ ವಿಶೇಷವೇನೆಂದರೆ ಇದು ವೇದದಲ್ಲಿ ಹೆಸರಿಸಲ್ಪಟ್ಟಿರುವ ಕ್ಷೇತ್ರವಾಗಿರುವುದು.

"ಅರಾಯಿ ಕಾಣೇ ವಿಕಟೇ ಗಿರಿಂ ಗಚ್ಛ ಸದಾನ್ವೇ |
ಶಿರಿಂಬಿಠಸ್ಯ ಸತ್ವಭಿಸ್ತೇಭಿಷ್ಟ್ವಾ ಚಾತಯಾಮಸಿ || ಋಗ್ವೇದ ೧೦-೧೫೫-1



shrinath.udupa@gmail.com

ಓ ಕಷ್ಟಪಡುತ್ತಿರುವ ಮಾನವನೇ ! ಶ್ರೀ ಪೀಠ ವೇಂಕಟಗಿರಿಗೆ ಹೋಗಿ, ಭಕ್ತಾದಿಗಳಲ್ಲಿ ಒಂದಾಗಿ, ನಿನ್ನ ತೊಂದರೆಗಳನ್ನು ಪರಿಹರಿಸಿಕೋ ||

ಈ ಪವಿತ್ರ ಕ್ಷೇತ್ರದಲ್ಲಿ ಶುಕ, ಭೃಗು, ಪ್ರಹ್ಲಾದ, ಅಂಬರೀಷ ಮುಂತಾದ ಭಾಗವತೋತ್ತಮರು ತಪಸ್ಸನ್ನು ಆಚರಿಸಿದ್ದಾರೆ.

ಕರ್ನೂಲಿನ ಜಿಲ್ಲೆಯ ರೇಣಿಗುಂಟಾ ಜಂಕ್ಷನ್‌ನಿಂದ ೧೪ ಮೈಲು ಪಶ್ಚಿಮಕ್ಕೆ ತಿರುಪತಿ ರೈಲ್ವೇ ನಿಲ್ದಾಣವಿದೆ. ಭಾರತದ ಮುಖ್ಯ ಸ್ಥಳಗಳಿಂದಲೂ ನೇರವಾಗಿ ಬರಲು ಪ್ರಯಾಣ ಸೌಕರ್ಯವಿದೆ. ಈ ಕ್ಷೇತ್ರವು ಏಳು ಪರ್ವತ ಶ್ರೇಣಿಗಳಿಂದ ಕೂಡಿ ಸಪ್ತಗಿರಿಯೆಂದೂ ಸಹ ಕರೆಯಲ್ಪಡುತ್ತದೆ. ಈ ದೇವಾಲಯವು ದ್ರಾವಿಡ ಶೈಲಿಯಿಂದ ಕೂಡಿದ್ದು, ಪರಕೀಯರ ಧಾಳಿಗೆ ತುತ್ತಾಗದ ಪವಿತ್ರ ಸ್ಥಳವಾಗಿದೆ.

**6.** ಶ್ರೀರಂಗ : ತಿರುಚನಾಪಳ್ಳಿಗೆ ಉತ್ತರಕ್ಕೆ ಕೇವಲ ಮೂರು ಮೈಲು ಹತ್ತಿರದಲ್ಲಿರುವ ಅತ್ಯಂತ ದೊಡ್ಡ ಮತ್ತು ಪ್ರಸಿದ್ಧವಾದ ದೇವಾಲಯವನ್ನು ಹೊಂದಿರುವ ವಿಷ್ಣುಕ್ಷೇತ್ರವು. ಇದು ಕಾವೇರಿ ನದಿಯದಂಡೆಯ ಮೇಲಿರುವ ಮೂರು ಪ್ರಖ್ಯಾತ ವಿಷ್ಣು ಕ್ಷೇತ್ರಗಳಾದ ಆದಿ, ಮಧ್ಯ ಮತ್ತು ಅಂತ್ಯರಂಗವೆಂಬುವುಗಳಲ್ಲಿ ಕೊನೆಯದು. ದಕ್ಷಿಣ ದೇಶದ ಪ್ರಮುಖವಾದ ಅರಸರೆಲ್ಲರೂ ಸಹ ಇದನ್ನು ಅಭಿವೃದ್ಧಿಪಡಿಸಲು ಶ್ರಮಿಸಿದ್ದಾರೆ. ೧೭ನೇ ಶತಮಾನದಲ್ಲಿ ಮಧುರೈ ದೇಶದ ನಾಯಕರು ಇದನ್ನು ಬಹಳ ವಿಶಾಲವಾದ ರೂಪಕ್ಕೆ ತಂದರು. ೧೮ನೇ ಶತಮಾನದಲ್ಲಿ ರಷ್ಯಾದೇಶದ ಜಾರ್ (CZAR) ಮನೆತನದವರ ಬಳಿಯಿದ್ದ ದಂಡದಲ್ಲಿ (Sceptre) ಹೂಳಿರುವ, ಇಂದಿಗೂ ಪ್ರಸಿದ್ಧವಾಗಿರುವ 'ಆರ್‌ಲಾಫ್' (Orloff) ವಜ್ರವನ್ನು ಈ ದೇವಾಲಯದಿಂದ ಯೂರೋಪಿಯನ್ನರು ಕದ್ದರೆಂದು ಪ್ರತೀತಿ. ಈ ಕ್ಷೇತ್ರದಲ್ಲಿ ಶ್ರೀರಾಮಚಂದ್ರ, ವಿಭೀಷಣ ಮುಂತಾದ ಪುರಾಣ ವ್ಯಕ್ತಿಗಳೂ ಸಹ ಶ್ರೀ ರಂಗನಾಥ ಸ್ವಾಮಿಯನ್ನು ಪೂಜಿಸಿರುವರೆಂದು ಪುರಾಣೋಕ್ತವು. ಶ್ರೀರಾಮಚಂದ್ರನಿಂದ ಅನುಗ್ರಹೀತವಾದ ಈ ಮೂರ್ತಿಯನ್ನು ವಿಭೀಷಣನು ಲಂಕೆಗೆ ಕೊಂಡುಯ್ಯುತ್ತಿದ್ದಾಗ, ಅದು ಸಾಧ್ಯವಾಗದೇ ಇಲ್ಲೇ ಪ್ರತಿಷ್ಠಿಸಬೇಕಾಯಿತು.

**7.** ಸೇತು : ಭಾರತ ದೇಶದ ಉತ್ತರದ ಕೊನೆಯಲ್ಲಿ ಬದರಿ ಕ್ಷೇತ್ರವೂ, ಪೂರ್ವದಲ್ಲಿ ಪುರಿ ಜಗನ್ನಾಥ ಕ್ಷೇತ್ರವೂ, ಪಶ್ಚಿಮದಲ್ಲಿ ದ್ವಾರಕಾ ಕ್ಷೇತ್ರವೂ ಮತ್ತು ದಕ್ಷಿಣದಲ್ಲಿ ರಾಮನಾಥ ಕ್ಷೇತ್ರವೂ ಸೇರಿ ನಾಲ್ಕು ಕ್ಷೇತ್ರಗಳು ಭಾರತದ ಪವಿತ್ರ ಭಾಗದ ಎಲ್ಲೆಗಳೆಂದು ಪ್ರಸಿದ್ಧವಾಗಿವೆ. ದಕ್ಷಿಣ ಭಾಗದಲ್ಲಿರುವ ರಾಮೇಶ್ವರವೆಂಬ ಕ್ಷೇತ್ರದಲ್ಲಿ ಶ್ರೀರಾಮಚಂದ್ರ ಸ್ವಾಮಿಯಿಂದ ಸ್ಥಾಪಿಸಲ್ಪಟ್ಟ ರಾಮನಾಥ ಸ್ವಾಮಿಯೆಂಬ ಹೆಸರಿನಿಂದ ವಿರಾಜಿಸುತ್ತಿರುವ ಶಿವಲಿಂಗವು ಪುರಾಣ ಪ್ರಖ್ಯಾತವು. ಶ್ರೀರಾಮಚಂದ್ರ ಸ್ವಾಮಿಯು ರಾವಣ ಸಂಹಾರಕ್ಕಾಗಿ ಭಾರತದಿಂದ ಲಂಕಾನಗರಿಗೆ ನಿರ್ಮಿಸಿದ ಸೇತುವೆಯನ್ನು ತಾನು ವಿಜಯಹೊಂದಿ ಭಾರತಕ್ಕೆ ಹಿಂತಿರುಗಿದಾಗ ತನ್ನ ಧನುಸ್ಸಿನ ತುದಿಯಿಂದ ನಾಶ ಮಾಡಿದನೆಂದೂ, ಆ ಸ್ಥಳವೇ ಪವಿತ್ರವಾದ ಧನುಷ್ಕೋಟಿ ತೀರ್ಥವೆಂದೂ, ಸೇತು ಕೆರೆ ಕ್ಷೇತ್ರವೆಂದೂ ಪ್ರಸಿದ್ಧಿಹೊಂದಿತೆಂದು ಹೇಳಲ್ಪಟ್ಟಿದೆ. ಎರಡು ಸಮುದ್ರಗಳು

ಸೇರುವ ಈ ಸಾಗರ ಕ್ಷೇತ್ರವು ಅತ್ಯಂತ ಪುಣ್ಯವೆನಿಸಿ, ಇಲ್ಲಿ ಸ್ನಾನ ಮಾಡಿದ ನಂತರ, ರಾಮನಾಥ ಸ್ವಾಮಿಯ ಸೇವೆ ಮಾಡುವ ಪದ್ಧತಿ ರೂಢಿಗೆ ಬಂದಿತು. (ನೋಡಿ - ರಾಮನಾಥ ಕ್ಷೇತ್ರ)

**8. ಜಂಬುಕೇಶ್ವರ** : ಶ್ರೀರಂಗದಿಂದ ತಿರುಚನಾಪಳ್ಳಿಗೆ ಬರುವಾಗ ಮಧ್ಯದಲ್ಲಿ ಪೂರ್ವಭಾಗಕ್ಕೆ ನಾಲ್ಕು ಮೈಲು ಹತ್ತಿರದಲ್ಲಿ ಜಂಬುಕೇಶ್ವರ ಕ್ಷೇತ್ರವಿದೆ. ಪಂಚಭೂತ ಲಿಂಗಗಳಲ್ಲಿ ಅಪ್ ಲಿಂಗವೆಂದು ಕರೆಯಲ್ಪಡುವ ಶಿವಸನ್ನಿಧಿಯು ಇರುವ ದೇವಾಲಯವು. ವಾಸ್ತು ಶಿಲ್ಪದ ದೃಷ್ಟಿಯಿಂದ ಶ್ರೀರಂಗ ದೇವಾಲಯಕ್ಕಿಂತಲೂ ಉತ್ತಮವೆಂದು ಹೇಳಲ್ಪಟ್ಟಿದೆ. ಇಲ್ಲಿ ಮಧ್ಯಾಹ್ನ ಕಾಲದಲ್ಲಿ ಆರತಿಯನ್ನು ಮಾಡಬೇಕಾದರೆ ಅರ್ಚಕನು ಸೀರೆಯನ್ನುಟ್ಟು ಪಾರ್ವತೀದೇವಿಯೇ ಶಿವನಿಗೆ ಆರತಿಯನ್ನು ಮಾಡುತ್ತಿರುವಳೆಂಬ ಭಾವನೆಯಿಂದ, ಆರತಿ ಮಾಡುವ ಸಂಪ್ರದಾಯವಿದೆ. ನೇರಳೆ ಹಣ್ಣಿನ ಮರದ ಕೆಳಗೆ ಸ್ವಾಮಿ ಸನ್ನಿಧಿಯಿರುವುದರಿಂದ ಜಂಬುಕೇಶ್ವರನೆಂಬ ಹೆಸರು ಬಂದಿದೆ. ಆದಿಶಂಕರರು ಇಲ್ಲಿಯ ಶಕ್ತಿದೇವತೆಯಾದ ಅಖಿಲಾಂಡೇಶ್ವರೀ ಅಂಬಿಕೆಯ ಎರಡು ಕಿವಿಗಳಿಗೂ ಆಭರಣವಾಗಿ ಎರಡು ಶ್ರೀ ಚಕ್ರಗಳನ್ನು ಹೊಂದಿರುವ ಓಲೆಗಳನ್ನು ಕೊಟ್ಟಿದ್ದಾರೆಂಬುದು ಇತಿಹಾಸ ಪ್ರಸಿದ್ಧ ವಿಷಯವು. ಇಂದಿಗೂ ಇದನ್ನು ನೋಡಬಹುದೆಂದು ಹೇಳುತ್ತಾರೆ.

**9. ಕುಂಭಘೋಣ** : ಚಿದಂಬರ ಕ್ಷೇತ್ರಕ್ಕೆ ದಕ್ಷಿಣ ಭಾಗದಲ್ಲಿ ೪೧ ಮೈಲು ದೂರದಲ್ಲಿರುವ ಮತ್ತು ಕಾವೇರೀ ನದಿ ದಂಡೆಯಲ್ಲಿರುವ ಪವಿತ್ರ ಕ್ಷೇತ್ರವು. ಅನೇಕ ರೀತಿಯ ಸಾರಿಗೆ ಸೌಕರ್ಯವನ್ನು ಹೊಂದಿರುವ ತಮಿಳುನಾಡಿನ ಪ್ರಸಿದ್ಧ ಸ್ಥಳ. ಪ್ರಳಯ ಕಾಲದಲ್ಲಿ ತೇಲಿಕೊಂಡು ಬರುತ್ತಿದ್ದ ಅಮೃತ ಕಲಶವನ್ನು ಬ್ರಹ್ಮದೇವರ ಪ್ರಾರ್ಥನೆಯ ಮೇರೆಗೆ ಶಿವನು ಈ ಕ್ಷೇತ್ರದಲ್ಲಿ ನೆಲೆ ನಿಲ್ಲುವಂತೆ ಮಾಡಿದ್ದರಿಂದ, ಈ ಕ್ಷೇತ್ರವು ಕುಂಭಘೋಣವೆಂದು ಪ್ರಸಿದ್ಧವಾಯಿತು. ಈ ಸ್ಥಳದಲ್ಲಿರುವ ಪವಿತ್ರ ಸರೋವರವು ಅಮೃತ ಸರೋವರವೆಂದು ಕರೆಯಲ್ಪಟ್ಟು, ಇಲ್ಲಿ ನಡೆಯುವ 'ಮಹಾಮಖ'ವೆಂಬ ಉತ್ಸವವು ಭಾರತದಲ್ಲಿ ನಡೆಯುವ ಪ್ರಪಂಚ ಪ್ರಸಿದ್ಧವಾದ ಕುಂಭಮೇಳ ಉತ್ಸವದಷ್ಟೇ ಪ್ರಖ್ಯಾತವಾಗಿದೆ. ಈ ಉತ್ಸವವು ೧೨ ವರ್ಷಗಳಿಗೊಮ್ಮೆ ಗುರುಗ್ರಹವು ಸಿಂಹರಾಶಿಗೆ ಬಂದಾಗ ಕುಂಭ ಮಾಸದಲ್ಲಿ (ರವಿಯು ಕುಂಭ ರಾಶಿಗೆ ಬಂದಾಗ) ನಡೆಯುತ್ತದೆ. ಆಗ ಪವಿತ್ರ ನವ ನದಿಗಳಾದ ಗಂಗಾ, ಸರಯೂ, ಯಮುನಾ, ಸರಸ್ವತೀ, ಸಿಂಧು, ನರ್ಮದಾ, ಗೋದಾವರೀ, ಕೃಷ್ಣಾ ಮತ್ತು ಕಾವೇರೀ ನದಿಗಳ ಸನ್ನಿಧಿಯು ಇಲ್ಲಿ ಇರುವುದೆಂದೂ, ಅಂದು ಇಲ್ಲಿ ಮಾಡುವ ಸ್ನಾನವು ಸಕಲ ಪಾಪಗಳನ್ನೂ ಕಳೆಯುವುದೆಂದೂ ಹೇಳಲ್ಪಟ್ಟಿದೆ. ಲಕ್ಷಗಟ್ಟಲೆ ಭಕ್ತಾದಿಗಳು ಅಂದು ಇಲ್ಲಿ ಪವಿತ್ರ ಸ್ನಾನವನ್ನು ಮಾಡುವರು. ಈ ಕ್ಷೇತ್ರದಲ್ಲಿರುವ ಅನೇಕ ಪ್ರಸಿದ್ಧ ದೇವಾಲಯಗಳಲ್ಲಿ ಕುಂಭೇಶ್ವರ ಸ್ವಾಮಿ ಮತ್ತು ಶಾರ್ಙ್ಗಪಾಣಿ ಸ್ವಾಮಿಯ ದೇವಾಲಯಗಳು ಬಹು ಪ್ರಮುಖವು.

**10. ಹಾಲಾಸ್ಯ** : ತಮಿಳು ನಾಡಿನಲ್ಲಿರುವ 'ಮಧುರೈ' ಎಂಬ ಪಟ್ಟಣವೇ ಅಂದಿನ ಹಾಲಾಸ್ಯ ಕ್ಷೇತ್ರವೆಂದು ಪ್ರಸಿದ್ಧವಾಗಿದೆ. ಸುಂದರೇಶ್ವರ ಮತ್ತು ಮೀನಾಕ್ಷೀದೇವೀ ಎಂಬ ಹೆಸರಿನಿಂದ ಪಾರ್ವತೀಪರಮೇಶ್ವರರು ಈ ನಗರದಲ್ಲಿ ನೆಲೆಸಿ ಭಕ್ತರನ್ನು ಅನುಗ್ರಹಿಸುತ್ತಿರುವರೆಂದು ಪುರಾಣಗಳಲ್ಲಿ ಹೇಳಲ್ಪಟ್ಟಿದೆ. ಸ್ಕಾಂದ ಪುರಾಣದ ಅಗಸ್ತ್ಯ



shrinath.udupa@gmail.com

ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯೆಂಬ ಹೆಸರಿನ ೭೧ ಅಧ್ಯಾಯಗಳಲ್ಲಿ ಈ ಕ್ಷೇತ್ರದಲ್ಲಿ ನಡೆದ ಪಾರ್ವತೀ ಪರಮೇಶ್ವರರ ವೈಭವವನ್ನು ಅತ್ಯಂತ ಮನೋಹರವಾಗಿ ಅಗಸ್ತ್ಯ ಮುನಿಗಳು ವರ್ಣಿಸುತ್ತಾರೆ. ಇದು ಪಾಂಡ್ಯರ ರಾಜಧಾನಿಯಾಗಿತ್ತು. ಇಲ್ಲಿ ವೈಗೈಯೆಂಬ ನದಿಯು ಹರಿಯುತ್ತಿದೆ. ಇದು ದೊಡ್ಡ ನಗರವಾಗಿರುವುದರಿಂದ ಇಲ್ಲಿಗೆ ತಲಪಲು ಅನೇಕ ವಿಧವಾದ ಸಾರಿಗೆ ಸೌಕರ್ಯಗಳಿವೆ. ಐದು ಪ್ರಸಿದ್ಧವಾದ ಶಿವನ ನೃತ್ಯ ಸಭೆಗಳಲ್ಲಿ ಇದು ರಜತ ಸಭೆಯೆಂದು ಪ್ರಸಿದ್ಧವಾಗಿದೆ. ಕ್ರಿಸ್ತ ಪೂರ್ವದಲ್ಲೇ ಗ್ರೀಕರ ಗ್ರಂಥಗಳಲ್ಲಿ ಈ ನಗರದ ಉಲ್ಲೇಖವಿದೆ. ಇದನ್ನು ದಕ್ಷಿಣ ಭಾರತದ ಅಥೆನ್ಸ್ ನಗರ (Athens of South India)ವೆಂದೇ ಕರೆಯುತ್ತಿದ್ದರು. ಗ್ರೀಕರು ಮತ್ತು ರೋಮನರು ಈ ರಾಜ್ಯದೊಡನೆ ವಾಣಿಜ್ಯ ಸಂಬಂಧವನ್ನು ಬೆಳೆಸಿದ್ದರೆಂಬುದು ಐತಿಹಾಸಿಕ ವಿಷಯವಾಗಿದೆ. ಕ್ರಿ. ಪೂ. 25ರಲ್ಲಿ ಪಾಂಡ್ಯದೇಶದ ರಾಯಭಾರಿ, ಅಗಸ್ಟಸ್ (Augustus)ನು ಸಿಂಹಾಸನವನ್ನು ಅಲಂಕರಿಸಿದ್ದ ಸಂದರ್ಭದಲ್ಲಿ ಭೇಟಿ ನೀಡಿದ್ದನೆಂಬ ಉಲ್ಲೇಖವಿದೆ. ಈ ಕ್ಷೇತ್ರದಲ್ಲಿರುವ ಬೃಹತ್ತಾದ ದೇವಾಲಯವು, ಅತ್ಯಂತ ಆಶ್ಚರ್ಯಕರ ರೀತಿಯಲ್ಲಿ ಕಟ್ಟಲ್ಪಟ್ಟಿದ್ದು ಪ್ರತಿಯೊಬ್ಬರೂ ನೋಡಲೇಬೇಕಾದ ಕ್ಷೇತ್ರವಾಗಿದೆ. ೧೨ ರಿಂದ ೧೭ನೇ ಶತಮಾನದವರೆಗೂ ದಕ್ಷಿಣ ಬಾರತದಲ್ಲಿ ಆಳಿದ ಅನೇಕ ಮಹಾರಾಜರುಗಳ ಭಕ್ತಿಯ ಫಲದಿಂದ ನಿರ್ಮಾಣವಾಗಿರುವ ಈ ದೇವಾಲಯವು ಬಹಳ ಅದ್ಭುತವಾಗಿದೆ. ವಾಸ್ತು ಕಲಾ ಸಂಗ್ರಹಾಲಯವನ್ನು ಒಳಗೊಂಡಿರುವ ಈ ದೇವಾಲಯವು ಇಡೀ ಭಾರತದಲ್ಲೇ ಮಾದರಿಯಾಗಿದೆ.

**11. ಗಜಾರಣ್ಯ** : ಕರ್ನಾಟಕ ರಾಜ್ಯದ ತಿರುಮಕೂಡಲು ನರಸೀಪುರ ತಾಲೂಕಿನಲ್ಲಿ ಕಾವೇರೀ ನದೀ ತೀರದಲ್ಲಿರುವ ಪುಣ್ಯಕ್ಷೇತ್ರ. ಈಗ ಇದು ತಲಕಾಡು ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಕ್ಷೇತ್ರ ಮಹಿಮೆಯ ಪ್ರಕಾರ ಶಾಪಗ್ರಸ್ತನಾದ ಒಬ್ಬ ಭಕ್ತ, ಆನೆಯ ರೂಪವನ್ನು ಹೊಂದಿ, ಆ ಆನೆಯು ನಿತ್ಯವೂ ಪೊದೆಯಲ್ಲಿದ್ದ ಒಂದು ಶಿವಲಿಂಗಕ್ಕೆ ಕಮಲಪುಷ್ಪವನ್ನಿಟ್ಟು ಪೂಜಿಸುತ್ತಿತ್ತು. ಇದರ ರಹಸ್ಯವನ್ನು ತಿಳಿಯಲು, ತಲ ಮತ್ತು ಕಾಡರೆಂಬ ಇಬ್ಬರು ಬೇಡರು, ಪೊದೆಯನ್ನು ತಮ್ಮ ಕೊಡಲಿಯಿಂದ ಸವರುತ್ತಾ ಬರುತ್ತಿದ್ದಾಗ, ಅಲ್ಲಿಯೇ ಒಂದು ಅತ್ತಿಮರದ ಬುಡದಲ್ಲಿದ್ದ ಶಿವಲಿಂಗಕ್ಕೆ ಏಟು ಬಿದ್ದು ರಕ್ತವು ಸುರಿಯಲಾರಂಭಿಸಿತು. ಭಯಪಟ್ಟು ಬೇಡರು ಶಿವನನ್ನು ಸ್ತುತಿಸಿದಾಗ, ಅತ್ತಿಯ ಹಾಲನ್ನು ಗಾಯಕ್ಕೆ ಹಚ್ಚಬೇಕೆಂದು ಅಶರೀರವಾಣಿಯಾಯಿತು. ಬೇಡರು ಅದೇ ರೀತಿ ಮಾಡಿದಾಗ ಶಿವಲಿಂಗವು ಮೂಲರೂಪದಲ್ಲಿ ಪ್ರಜ್ವಲಿಸಿತು. ಅವರಿಗೆ ಶಿವನ ಅನುಗ್ರಹವಾಗಿ, ಅಂದಿನಿಂದ ಆ ಸ್ಥಳವು ತಲಕಾಡು ಎಂದು ಪ್ರಸಿದ್ಧವಾಯಿತು. ಶಿವನು ವೈದ್ಯೇಶ್ವರನೆಂಬ ಹೆಸರಿನಿಂದ ನೆಲೆಸಿದನು. ವೈದ್ಯನಾಥೇಶ್ವರ, ಪಾತಾಳೇಶ್ವರ, ಮಲ್ಲಿಕಾರ್ಜುನೇಶ್ವರ, ಅರ್ಕೇಶ್ವರ ಮತ್ತು ಮರಳೇಶ್ವರನೆಂಬ ಪಂಚಶಿವಲಿಂಗ ರೂಪದಲ್ಲಿ ಭಕ್ತರನ್ನು ಅನುಗ್ರಹಿಸುತ್ತಿರುವನು. ಹನ್ನೆರಡು ವರ್ಷಕ್ಕೆ ಒಮ್ಮೆ ಕಾರ್ತಿಕ ಮಾಸದಲ್ಲಿ ಒದಗುವ ಅಪರೂಪವಾದ

ಕುಹೂಯೋಗದಲ್ಲಿ ಪಂಚಲಿಂಗದರ್ಶನವೆಂಬ ಪುಣ್ಯದಿನದಂದು ಲಕ್ಷಾಂತರ ಜನರು ಬಂದು ಶಿವವನ್ನು ಅರ್ಚಿಸುವರು. ಈ ಕ್ಷೇತ್ರವು ಪಂಚನಾರಾಯಣ ಕ್ಷೇತ್ರಗಳಲ್ಲಿ ಒಂದಾಗಿದೆ. ಕೀರ್ತಿನಾರಾಯಣ ಸ್ವಾಮಿಯೆಂಬ ಹೆಸರಿನಲ್ಲಿ ಈ ಕ್ಷೇತ್ರವು ಪ್ರಸಿದ್ಧವಾಗಿದ್ದು ಉಳಿದ ನಾಲ್ಕು ಕ್ಷೇತ್ರಗಳೆಂದರೆ ಬೇಲೂರು, ತೊಂಡನೂರು(ಮಂಡ್ಯ), ಮೇಲುಕೋಟೆ ಮತ್ತು ಗದಗ.

**12. ಗೋಕರ್ಣ :** ದಂಡಕಾರಣ್ಯಕ್ಕೆ ಸೇರಿದ ಪುರಾಣಕಾಲದ ಪುಣ್ಯಕ್ಷೇತ್ರ. ಹಿಂದೆ ಕುಂಭಕರ್ಣನು ಇಲ್ಲಿಯೇ ಬ್ರಹ್ಮದೇವರನ್ನು ಕುರಿತು ತಪಸ್ಸನ್ನಾಚರಿಸಿದ್ದ. ಅರ್ಜುನನು ತೀರ್ಥಯಾತ್ರೆಯ ಸಂದರ್ಭದಲ್ಲಿ ಬಂದಿದ್ದ ಕ್ಷೇತ್ರ. ರಾವಣನು ತನ್ನ ಮಾತೆಗೆ ಪೂಜಿಸಲು ಶಿವನನ್ನು ಕೈಲಾಸದಲ್ಲಿ ತಪಸ್ಸಿನಿಂದ ಮೆಚ್ಚಿಸಿ ಆತ್ಮಲಿಂಗವನ್ನು ಪಡೆದು ಲಂಕೆಗೆ ತೆಗೆದುಕೊಂಡು ಹೋಗುತ್ತಿರಲು, ಮಾರ್ಗಮಧ್ಯೆ ಈ ಸ್ಥಳಕ್ಕೆ ಬಂದಾಗ ಗಣಪತಿಯ ಚತುರತೆಯಿಂದ, ಆ ಮಹಾಲಿಂಗವು ಇಲ್ಲಿಯೇ ಪ್ರತಿಷ್ಠಿತವಾಗುವಂತಾಯಿತೆಂದೂ, ಆ ಕ್ಷೇತ್ರವೇ ಗೋಕರ್ಣವೆಂದಾಯಿತೆಂದೂ ಹೇಳಲ್ಪಟ್ಟಿದೆ. ಇಲ್ಲಿ ಮಹಾಬಲೇಶ್ವರನೆಂಬ ಹೆಸರಿನಿಂದ ಶಿವನು ನೆಲೆಸಿದ್ದಾನೆ. ಪಶ್ಚಿಮ ಸಮುದ್ರದಂಡೆಯಲ್ಲಿರುವ ಈ ದೇವಾಲಯವು ಬಹಳ ಪ್ರಸಿದ್ಧವಾದುದು. ಭೂಪ್ರತಿಷ್ಠೆಯ ನಂತರ ರಾವಣನು ಬಲವಂತವಾಗಿ ಲಿಂಗವನ್ನು ಜಗ್ಗಿಸಿದ್ದರಿಂದ ಅದು ಹಸುವಿನ ಕಿವಿಯ ಆಕಾರವನ್ನು ಹೊಂದಿತು. ಈ ಕಾರಣದಿಂದ ಈ ಕ್ಷೇತ್ರವು ಗೋಕರ್ಣವೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ಈ ಕ್ಷೇತ್ರವು ಭಾರತದ ಪಶ್ಚಿಮ ದಂಡೆಯಲ್ಲಿದ್ದರೂ ತಮಿಳುನಾಡಿನ ಪ್ರಸಿದ್ಧ ಶಿವ ಭಕ್ತರುಗಳೆಲ್ಲರೂ ತಮ್ಮ ಅನೇಕ ಭಕ್ತಿ ಗ್ರಂಥಗಳಲ್ಲಿ ಮನದಣಿಯುವಂತೆ ಭಕ್ತಿಯಿಂದ ಶಿವಸಂಕೀರ್ತನೆಯನ್ನು ಹಾಡಿ ಸ್ತುತಿಸಿರುವ ಪವಿತ್ರಸ್ಥಳವಾಗಿದೆ. ಕಾರವಾರದಿಂದ 35 ಕಿ. ಮೀ., ಕುಮಟಾದಿಂದ 20 ಕಿ.ಮೀ ದೂರದಲ್ಲಿರುವ ಈ ಕ್ಷೇತ್ರಕ್ಕೆ ಹೋಗಲು ಅನೇಕ ರೀತಿ ಸಾರಿಗೆ.ಸೌಕರ್ಯಗಳಿವೆ.

**13. ರಾಮನಾಥ :** ಈ ಕ್ಷೇತ್ರವು ರಾಮೇಶ್ವರವೆಂಬ ಹೆಸರಿನಿಂದ ಕರೆಯಲ್ಪಡುತ್ತಿದೆ. ಭಾರತಭೂಮಿಯ ದಕ್ಷಿಣದ ತುದಿಯಲ್ಲಿರುವ ಈ ಕ್ಷೇತ್ರವು ಭಾರತೀಯರಿಗೆ ಬಹಳ ಮುಖ್ಯವು. ಸಕಲ ಸಾರಿಗೆ ಸೌಕರ್ಯಗಳನ್ನು ಹೊಂದಿರುವ ಈ ಸ್ಥಳವು ಇಂದಿನ ತಮಿಳುನಾಡು ರಾಜ್ಯಕ್ಕೆ ಸೇರಿದುದಾಗಿದೆ. ಶ್ರೀರಾಮಚಂದ್ರಮೂರ್ತಿಯು ರಾವಣನನ್ನು ಸಂಹರಿಸಿ ಹಿಂತಿರುಗಿ ಇಲ್ಲಿ ಶಿವಲಿಂಗವನ್ನು ಪ್ರತಿಷ್ಠಿಸಿ ಶಿವಾರಾಧನೆಯನ್ನು ಮಾಡಿದ್ದರಿಂದ ರಾಮನಾಥ ಸ್ವಾಮಿಯೆಂದು ಪ್ರಸಿದ್ಧಿಯಾಯಿತು. ಇದು ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾಗಿದೆ. ಪ್ರತಿಯೊಬ್ಬ ಭಾರತೀಯನೂ ಮಾಡುವ ಕಾಶೀಯಾತ್ರೆಯು ಪೂರ್ಣವಾಗಬೇಕಾದರೆ ಮೊದಲು ರಾಮೇಶ್ವರಕ್ಕೆ ಬಂದು ಪೂಜಿಸಿ ನಂತರ ಇಲ್ಲಿಂದ ಸಮುದ್ರತೀರದ ಪವಿತ್ರ ಮರಳನ್ನು ತೆಗೆದುಕೊಂಡು ಕಾಶೀಕ್ಷೇತ್ರಕ್ಕೆ ಹೋಗಿ, ಅಲ್ಲಿ ಕಾಶೀ ವಿಶ್ವೇಶ್ವರ ಸ್ವಾಮಿಯನ್ನು ಪೂಜಿಸಿದ ನಂತರ, ಗಂಗಾನದಿಯಲ್ಲಿ ವಿಸರ್ಜಿಸಬೇಕು. ಬಳಿಕ ಕಾಶೀಕ್ಷೇತ್ರಕ್ಕೆ ಹತ್ತಿರದಲ್ಲೇ ಇರುವ ಪವಿತ್ರ ತ್ರಿವೇಣೀ ಸಂಗಮದಿಂದ ಗಂಗಾಜಲವನ್ನು ಸಂಗ್ರಹಿಸಿ, ಪುನಃ ರಾಮನಾಥ ಕ್ಷೇತ್ರಕ್ಕೆ ಬಂದು ಆ ಜಲದಿಂದ ಸ್ವಾಮಿಯ ಅಭಿಷೇಕ ಮಾಡಬೇಕೆಂಬ ಕ್ರಮವು ಬಹಳ ಹಿಂದಿನಿಂದ



shrinath.udupa@gmail.com

ಬಂದದ್ದಾಗಿದೆ. ಈ ಒಂದು ಕ್ರಮವು ಭಾರತೀಯರೆಲ್ಲರೂ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ (ಇಡೀ ಭಾರತದ ತೀರ್ಥಕ್ಷೇತ್ರಗಳನ್ನು) ಸಂಚಾರ ಮಾಡುವುದರ ಮೂಲಕ, ಸಂಸ್ಕೃತಿಗಳು ಒಂದರಲ್ಲೊಂದು ಬೆರೆತು, ವಿಚಾರ ವಿನಿಮಯದಿಂದ ಅದ್ಭುತವಾದ ಸಂಘಟನೆಯನ್ನು ಬೆಳೆಸುವಂತಹ ಅವಕಾಶವನ್ನು ಕಲ್ಪಿಸಿದೆ. ಇದನ್ನು ಉಳಿಸಿಕೊಂಡು ಬರುವ ಕರ್ತವ್ಯವು ಪ್ರತಿಯೊಬ್ಬ ಭಾರತೀಯನಿಗೂ ಉತ್ತಮ ಅನುಷ್ಠಾನವೆನಿಸಿದೆ. ಈ ಬೃಹತ್ ದೇವಾಲಯದ ಬೆಳವಣಿಗೆಗೆ ಮುಖ್ಯವಾಗಿ ಕಾರಣರಾದವರು ರಾಮನಾಥಪುರದ ಸೇತುಪತಿ ಮಹಾರಾಜರು. ಮೂಲ ಲಿಂಗದ ಗರ್ಭಗೃಹ ಮತ್ತು ಅಂಬಿಕೆಯ ಗುಡಿಯನ್ನು 12ನೇ ಶತಮಾನದಲ್ಲಿ, ಲಂಕೆಯ ರಾಜನಾದ ಪರಾಕ್ರಮಬಾಹುವೆಂಬುವನು ಕಟ್ಟಿದನೆಂದು ಇತಿಹಾಸವು ಹೇಳುತ್ತದೆ. ಈ ಕ್ಷೇತ್ರವು ಒಂದು ದ್ವೀಪವಾಗಿದ್ದು, ಭಾರತದ ಪ್ರಧಾನ ಭಾಗದಿಂದ ಇಲ್ಲಿಗೆ ಬೃಹತ್ ಸೇತುವೆ ನಿರ್ಮಾಣವಾಗಿದೆ.

**14. ಪುರಾವರ್ತ :** 'ಪುರಾ' ಎಂದರೆ ಕೋಟೆ ಎಂಬ ಅರ್ಥವಿದೆ. ಪುರಾವರ್ತ ಎಂದರೆ ಕೋಟೆಯಿಂದ ಸುತ್ತಲ್ಪಟ್ಟ ಪುಣ್ಯ ಪ್ರದೇಶವೆಂದರ್ಥವಾಗುವುದು. ಮಹಾರಾಷ್ಟ್ರ ರಾಜ್ಯದಲ್ಲಿ ಪೂನಾ ಬಳಿ ಒಂದು ಪ್ರಸಿದ್ಧ ಬೆಟ್ಟವಿದೆ. ಈ ಬೆಟ್ಟದ ಮೇಲೆ ಪುರಾತನವಾದ ಒಂದು ಕೋಟೆಯಿದ್ದು, ಇದನ್ನು ದೇವೇಂದ್ರನು ನಿರ್ಮಿಸಿದನೆಂಬ ಪ್ರತೀತಿಯಿದೆ. ಬೆಟ್ಟದ ತುದಿಯಲ್ಲಿ ಒಂದು ಶಿವಕ್ಷೇತ್ರವಿದ್ದು, ಇಲ್ಲಿ ಮಹಾದೇವನೆಂಬ ಹೆಸರಿನ ಶಿವನು ಭಕ್ತರನ್ನು ಅನುಗ್ರಹಿಸುತ್ತಿದ್ದಾನೆ. ಪುರಾಣ ಪ್ರಸಿದ್ಧ ಶಿವ ದೇವಾಲಯದಿಂದ ಕೂಡಿರುವ ಪುರಾವರ್ತವೆಂಬ ಪುಣ್ಯಕ್ಷೇತ್ರವು ಇದಾಗಿರಬಹುದು.

**15. ಪುರಾನಂತ :** ಅತ್ಯಂತ ಪ್ರಾಚೀನ ಪುಣ್ಯಕ್ಷೇತ್ರವಾದ ಅನಂತಶಯನ ಕ್ಷೇತ್ರವು. ಭಾರತ ದೇಶದ ದಕ್ಷಿಣದ ತುದಿಯಲ್ಲಿನ ಒಂದು ಪುಣ್ಯ ಕ್ಷೇತ್ರ. ಇದು ಈಗ ತಿರುವನಂತಪುರವೆಂದು ಕರೆಯಲ್ಪಡುತ್ತಿದೆ. ಇಂದಿನ ಕೇರಳ ರಾಜ್ಯದಲ್ಲಿನ ಪ್ರಸಿದ್ಧ ಕ್ಷೇತ್ರ. ಪರಮಾತ್ಮನಾದ ವಿಷ್ಣುವು ಅನಂತ ಪದ್ಮನಾಭ ಸ್ವಾಮಿಯೆಂಬ ಹೆಸರಿನಿಂದ ಇಲ್ಲಿ ಭಕ್ತಾದಿಗಳನ್ನು ಅನುಗ್ರಹಿಸುತ್ತಿರುವನು. ಅನಂತಶಯನ ಮಾಹಾತ್ಮ್ಯವೆಂಬ ಪ್ರಾಚೀನ ಗ್ರಂಥದಲ್ಲಿ ಇದರ ಬಗ್ಗೆ ವರ್ಣನೆಯಿದೆ.

**16. ಶಯನಾಮಗಿರಿ :** (i) ಮದ್ರಾಸ್ ವಿಮಾನ ನಿಲ್ದಾಣದಿಂದ ಪಲ್ಲಾವರಂಗೆ ಹೋಗುವಾಗ, ಇದರ ಬಳಿ ತಿರುವೇರ್‌ಮಲೈಯೆಂಬ ಬೆಟ್ಟವಿದೆ. ಈ ಗಿರಿಕ್ಷೇತ್ರದ ಮೇಲೆ ರಂಗನಾಥ ಸ್ವಾಮಿಯ ದೇವಾಲಯವಿದ್ದು, ಈ ಬೆಟ್ಟವು ಶಯನಾಮಗಿರಿಯೆಂಬ ಹೆಸರಿನಿಂದ ಪ್ರಸಿದ್ಧವು.

(ii) ನಾಗರ್‌ಕೊಯಿಲ್‌ನಿಂದ ತಿರುವನಂತಪುರಕ್ಕೆ ಹೋಗುವ ದಾರಿಯಲ್ಲಿ ತಮಿಳುನಾಡಿನ ಗಡಿಯ ಬಳಿ ಇರುವ ಒಂದು ಗಿರಿಕ್ಷೇತ್ರವು. ಇಂದು ಈ ಕ್ಷೇತ್ರವು ತಿರುವಟ್ಟಾರ್ ಎಂಬುದಾಗಿ ಪ್ರಸಿದ್ಧವಾಗಿದೆ.

**17. ಯಾದವಗಿರಿ :** ಆಂಧ್ರ ಪ್ರದೇಶ ರಾಜ್ಯದ ನೆಲಗೊಂಡ ಜಿಲ್ಲೆಯಲ್ಲಿದೆ. ಹಿಂದೆ ಇದನ್ನು ಭುವನಗಿರಿಯೆಂದು ಕರೆಯುತ್ತಿದ್ದರು. ಹೈದರಾಬಾದಿನಿಂದ ಸುಮಾರು 40 ಮೈಲು ದೂರದಲ್ಲಿದೆ. ಇಲ್ಲಿ ಶ್ರೀ ಲಕ್ಷ್ಮೀ ನರಸಿಂಹ ಸ್ವಾಮಿಯ ಸನ್ನಿಧಿ ಇದ್ದು ಬಹಳ ಪವಿತ್ರವಾದ ಕ್ಷೇತ್ರವೆನಿಸಿದೆ. ಸ್ಕಾಂದ ಪುರಾಣದ ಪ್ರಕಾರ, ವಿಭಾಂಡಕ ಮುನಿಯ ಪುತ್ರನಾದ ಋಷ್ಯಶೃಂಗನಿಗೆ ಯಾದವನೆಂಬ ಮಗನಿದ್ದನು. ಈತನು ವಿಷ್ಣು ದೇವರ ಪರಮಭಕ್ತನು. ಈತನು ಈ ಬೆಟ್ಟದ ಮೇಲೆ ತಪಸ್ಸನ್ನಾಚರಿಸಿ, ವಿಷ್ಣು ದೇವರ ಮೂರು ವಿಧವಾದ ನರಸಿಂಹರೂಪವನ್ನು ದರ್ಶಿಸಲು ಇಚ್ಛಿಸಿದ ಮೇರೆಗೆ ಭಗವಂತನು ಬಾಲ ನರಸಿಂಹ, ಗಂಡಭೇರುಂಡ ನರಸಿಂಹ, ಮತ್ತು ಯೋಗಾನಂದ ನರಸಿಂಹ ರೂಪದಲ್ಲಿ ಪ್ರಕಟಗೊಂಡನು. ಭಕ್ತ ಯಾದವನ ಇಚ್ಛೆಯಂತೆ ಇದೇ ಸ್ಥಳದಲ್ಲಿ ನೆಲೆಸಿದನು. ಅಂದಿನಿಂದ ಈ ಸ್ಥಳವು ಯಾದವಗಿರಿಯೆಂದು ಪ್ರಸಿದ್ಧವಾಯಿತು. ಜನರಿಗೆ ಬರುವ ಸಕಲವಿಧವಾದ ಖಾಯಿಲೆಗಳನ್ನೂ ಈ ಸನ್ನಿಧಿಯಲ್ಲಿ ನಡೆಸುವ ಪೂಜೆಗಳಿಂದ ಗುಣಪಡಿಸಬಹುದೆಂಬ ನಂಬಿಕೆಯಿಂದ ಭಕ್ತಾದಿಗಳ ಸಂಖ್ಯೆ ಅಪಾರವಾಗಿದೆ.

**18. ಕರಿಗಿರಿ :** ಮೈಸೂರು ಜಿಲ್ಲೆಯಲ್ಲಿರುವ ಶ್ರೀರಂಗಪಟ್ಟಣದ ಶ್ರೀರಂಗನಾಥಸ್ವಾಮಿಯ ಕ್ಷೇತ್ರದಿಂದ ಮೂರು ಮೈಲು ದೂರದಲ್ಲಿರುವ ಕರೀಘಟ್ಟವೆಂಬ ಹೆಸರಿನಿಂದ ಪ್ರಸಿದ್ಧಿ ಹೊಂದಿರುವ ಕ್ಷೇತ್ರ. ಲೋಕಪಾವನಿಯೆಂಬ ಪವಿತ್ರನದೀ ತೀರದಲ್ಲಿರುವ ಬೆಟ್ಟದ ಮೇಲಿರುವ ದೇವಾಲಯದಲ್ಲಿ ವೆಂಕಟರಮಣಸ್ವಾಮಿಯವರ ಸನ್ನಿಧಿಯಿದೆ. ಅನೇಕ ಭಕ್ತಾದಿಗಳ ಮನೆದೇವರೆನಿಸಿರುವ ಈ ಸ್ವಾಮಿಯ ಕ್ಷೇತ್ರವು ಪ್ರಸಿದ್ಧವಾದದ್ದಾಗಿದೆ.

**19. ಕಕುದ್ಗಿರಿ :** (i) ಮಹಾರಾಷ್ಟ್ರ ಜಿಲ್ಲೆಯಲ್ಲಿ ಕಕುದ್ಮತಿಯೆಂಬ ಪವಿತ್ರನದಿ ಹರಿಯುತ್ತದೆ. ಇಂದು ಇದನ್ನು ಕೊಯ್ನಾ ನದಿ ಎಂದು ಹೇಳುತ್ತಾರೆ. ಇದರ ಬಳಿ ಕಕುದ್ಗಿರಿಯೆಂಬ ಗಿರಿ ಕ್ಷೇತ್ರವಿದೆ. (ii) ಶಾಲ್ಮಲೀ ದ್ವೀಪದಲ್ಲಿನ ಸಪ್ತಕುಲಪರ್ವತಗಳಲ್ಲಿ ಒಂದು. (ವಾಯು 49)

**20. ಶ್ವೇತಗಿರಿ :** ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲೂಕಿಗೆ ಸೇರಿರುವ ಬಿಳಿಗಿರಿ ರಂಗನಾಥಸ್ವಾಮಿಯ ಬೆಟ್ಟವೆಂದು ಪ್ರಸಿದ್ಧವಾಗಿರುವ ಶ್ರೀನಿವಾಸ ದೇವರ ಸನ್ನಿಧಿಯಿರುವ ಕ್ಷೇತ್ರ. ಕ್ರಿ. ಶ. 1667ರ ಶಾಸನದ ಪ್ರಕಾರ ಇಲ್ಲಿನ ಸನ್ನಿಧಿಯ ಹೆಸರು ಬಿಳಿಕಲ್ ತಿರುವೆಂಗಲನಾಥ ಸ್ವಾಮಿ ಎಂಬುದಾಗಿ ಇದೆ. ಹೊಯ್ಸಳ ರಾಜನಾದ ವಿಷ್ಣುವರ್ಧನನ ಕಾಲದಲ್ಲಿ ಅಭಿವೃದ್ಧಿಹೊಂದಿದ ದೇವಾಲಯವನ್ನು ಹೊಂದಿರುವ ಈ ಕ್ಷೇತ್ರಕ್ಕೆ ಕರ್ನಾಟಕದ ಸಂತರಲ್ಲೊಬ್ಬರಾದ ಶ್ರೀ ಕನಕದಾಸರು ಬಂದಿದ್ದರೆಂದು ಹೇಳಲ್ಪಟ್ಟಿದೆ.

**21. ನೀಲಗಿರಿ :** ಸಹ್ಯಾದ್ರಿ ಪರ್ವತ ಶ್ರೇಣಿಗಳಲ್ಲಿ ಗೋದಾವರೀ ನದಿಯು ಬ್ರಹ್ಮಗಿರಿಯೆಂಬ ಬೆಟ್ಟದಲ್ಲಿ ಹುಟ್ಟುತ್ತದೆ. ಈ ನದೀ ತೀರದಲ್ಲಿರುವ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾದ ತ್ರ್ಯಂಬಕೇಶ್ವರ ಜ್ಯೋತಿರ್ಲಿಂಗ ಕ್ಷೇತ್ರವಿರುವುದು. ಇದರ ಬಳಿ ನೀಲಗಿರಿಯೆಂಬ ಬೆಟ್ಟವಿದ್ದು ಅಲ್ಲಿ ನೀಲಾಂಬಿಕೆ ಎಂಬ ದೇವಿಯ ಸನ್ನಿಧಿಯಿರುವುದು. ಇದು ನಾಸಿಕ ಕ್ಷೇತ್ರದ ಹತ್ತಿರ ಇದೆ.



**22. ಗೋವರ್ಧನಗಿರಿ :** ಯಮುನಾನದೀ ತೀರದಲ್ಲಿ ಬೃಂದಾವನ ಎಂಬ ಸ್ಥಳದ ಸಮೀಪವಿರುವ ಬೆಟ್ಟವು. ಒಮ್ಮೆ ನಂದಗೋಕುಲದ ಗೊಲ್ಲರೆಲ್ಲರೂ ಇಂದ್ರಯಾಗ ಮಾಡಲು ಸಂಕಲ್ಪಿಸಿದರು. ಶ್ರೀಕೃಷ್ಣನು ಈ ಯಾಗ ಮಾಡುವುದಕ್ಕಿಂತ ಗೋವರ್ಧನ ಗಿರಿಯನ್ನೇ ಪೂಜಿಸುವುದು ಉತ್ತಮವೆಂದು ಹೇಳಿದಾಗ ಇಂದ್ರನು ಕೋಪದಿಂದ ಚಂಡವೃಷ್ಟಿಯನ್ನು ಸತತವಾಗಿ ಏಳು ದಿನ ಸುರಿಸಿದನು. ಗೊಲ್ಲರನ್ನು ಅದರಿಂದ ರಕ್ಷಿಸಲು ಶ್ರೀಕೃಷ್ಣ ಪರಮಾತ್ಮನು ಗೋವರ್ಧನ ಗಿರಿಯನ್ನು ತನ್ನ ಬೆರಳಿನಿಂದ ಎತ್ತಿ ಕೊಡೆಯಂತೆ ಹಿಡಿದು ಎಲ್ಲರನ್ನೂ ರಕ್ಷಿಸಿದನು. ಇಂದ್ರನ ಅಹಂಕಾರವು ಅಡಗಿತು. ಅಂದಿನಿಂದ ಈ ಗಿರಿಯು ಅತ್ಯಂತ ಪವಿತ್ರವಾದ ಪುಣ್ಯಕ್ಷೇತ್ರವೆನಿಸಿತು. ಮಥುರಾ ಪಟ್ಟಣದಿಂದ ಪಶ್ಚಿಮಕ್ಕೆ 16 ಮೈಲು ದೂರದಲ್ಲಿದೆ.

**23. ಗಯಾ :** ಪವಿತ್ರ ಭಾರತದಲ್ಲಿ ಪ್ರಯಾಗ, ಕಾಶೀ ಮತ್ತು ಗಯಾ ಕ್ಷೇತ್ರಗಳು ತ್ರಿಸ್ಥಲೀ ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ವಿಷ್ಣುತೀರ್ಥವೆಂಬ ಹೆಸರಿನಿಂದ ಕರೆಯಲ್ಪಡುವ ಗಯಾ ಕ್ಷೇತ್ರವು ಕಾಶೀ ಕ್ಷೇತ್ರದಿಂದ 127 ಮೈಲು ದೂರದಲ್ಲಿದೆ. ಪಿತೃಪೂಜನಕ್ಕೆ ಪ್ರಶಸ್ತವೆನಿಸಿರುವ ಗಯಾ ಕ್ಷೇತ್ರದಲ್ಲಿ ಫಲ್ಗುನೀ ನದೀ ತೀರದಲ್ಲಿನ ಗಯಾಶಿರವೆಂಬ ಸ್ಥಳ, ಸನಾತನವಾಗಿರುವ ವಟವೃಕ್ಷ ಮತ್ತು ವಿಷ್ಣುಪಾದ ಕ್ಷೇತ್ರಗಳು ಬಹಳ ಮುಖ್ಯವಾದವುಗಳು. ಅನೇಕ ಪುರಾಣಗಳಲ್ಲಿ ವಿಸ್ತಾರವಾಗಿ ವರ್ಣಿಸಲ್ಪಟ್ಟಿರುವ ಈ ಕ್ಷೇತ್ರದಲ್ಲಿ ಪಿತೃಪೂಜನ ಮಾತ್ರದಿಂದಲೇ ಮುಕ್ತಿ ಪ್ರಾಪ್ತಿಯಾಗುವುದೆಂದು ಹೇಳಲ್ಪಟ್ಟಿದೆ. ಗಯನೆಂಬ ಅಸುರನು ವಿಷ್ಣುದೇವರ ಪರಮ ಭಕ್ತನೆನಿಸಿ ಕೋಲಾಹಲವೆಂಬ ಪರ್ವತದಲ್ಲಿ ತಪಸ್ಸನ್ನಾಚರಿಸುತ್ತಿದ್ದುದನ್ನು ಕಂಡು ದೇವತೆಗಳು ಹೆದರಿ ವಿಷ್ಣು ದೇವರನ್ನು ಮೊರೆ ಹೊಕ್ಕರು. ಆಗ ಪರಮಾತ್ಮನು ಗಯನ ಶರೀರವನ್ನು ಅತ್ಯಂತ ಪವಿತ್ರಮಾಡುವ ಉದ್ದೇಶದಿಂದ, ಆತನ ದೇಹವನ್ನೇ ಬ್ರಹ್ಮದೇವರು ಸಂಕಲ್ಪಿಸಿದ ಯಜ್ಞಕ್ಕೆ, ಯಜ್ಞವೇದಿಕೆಯಾಗಿ ಅರ್ಪಿಸುವಂತೆ ಕೇಳಿದಾಗ, ಅತ್ಯಂತ ಭಕ್ತಿಯಿಂದ ಒಪ್ಪಿ ಗಯನು ಚರಿತಾರ್ಥನಾದನು. ಅಂದಿನಿಂದ ಆ ಪ್ರದೇಶದಲ್ಲಿ ಪಿತೃಗಳಿಗೆ ಪಿಂಡ ಪ್ರದಾನ ಮಾಡಿದರೆ ಅಕ್ಷಯ ಪುಣ್ಯ ಪ್ರಾಪ್ತಿಯಾಗಲೆಂದು ಪರಮಾತ್ಮನಿಂದ ಅನುಗ್ರಹಿಸಲ್ಪಟ್ಟಿತು.

**24. ಪ್ರಯಾಗ : ಸಿತಾಸಿತೇ ಸರಿತೇ ಯತ್ರ ಸಙ್ಗತೇ | ತತ್ರಾಪ್ಲುತಸೋ ದಿವಮುತ್ಪತನ್ತಿ| ಯೇ ವೈ ತನ್ವಾಂ ವಿಸೃಜನ್ತಿ ಧೀರಾಃ | ತೇ ಜನಾಸೋಽಮೃತತ್ವಂ ಭಜನ್ತೇ ||**

**(ಋಗ್ವೇದ - ಖಿಲಮಂತ್ರ)**

"ಶ್ವೇತ ಮತ್ತು ಕೃಷ್ಣ ನದಿಗಳೆನಿಸಿರುವ - (ಗಂಗಾ ಮತ್ತು ಯಮುನಾ) ನದಿಗಳು ಸೇರುವ ಸ್ಥಳದಲ್ಲಿ ಸ್ನಾನ ಮಾಡುವವರಿಗೆ ಸ್ವರ್ಗ ಪ್ರಾಪ್ತಿಯಾಗುವುದು. ಸ್ಥಿರ ಮನಸ್ಸಿನಿಂದ ಇಲ್ಲಿ ಪ್ರಾಣತ್ಯಾಗ ಮಾಡುವ ಧೀರರು ಮುಕ್ತಿಯನ್ನು ಹೊಂದುವರು." ಈ ಮಂತ್ರವು ಪ್ರಯಾಗ ಕ್ಷೇತ್ರವು ಅತ್ಯಂತ ಪ್ರಾಚೀನವೆಂಬುದಕ್ಕೆ ಸಾಕ್ಷಿಯಾಗಿದೆ. ಗಂಗಾ ಮತ್ತು ಯಮುನಾ ನದಿಗಳು ಪ್ರತ್ಯಕ್ಷವಾಗಿ ಮತ್ತು ಪವಿತ್ರ ಸರಸ್ವತೀ ನದಿ ಗುಪ್ತಗಾಮಿನಿಯಾಗಿ ಸೇರುವ, ತ್ರಿವೇಣೀ

shrinath.udupa@gmail.com

ಸಂಗಮವೆಂದು ಕರೆಯಲ್ಪಡುವ ಈ ಕ್ಷೇತ್ರವು ತೀರ್ಥರಾಜವೆಂದು ಕರೆಯಲ್ಪಟ್ಟಿದೆ. ಬ್ರಹ್ಮದೇವರು ಒಂದು ಬೃಹತ್ ಯಜ್ಞಮಾಡಿದ ಸ್ಥಳವಾದ್ದರಿಂದ ಪ್ರಯಾಗವೆಂದು ಪ್ರಸಿದ್ಧಿಯಾಯಿತು. ಪ್ರಪಂಚ ಪ್ರಖ್ಯಾತವಾದ ಕುಂಭಮೇಳವು ಬೃಹಸ್ಪತಿ ಗ್ರಹವು ವೃಷಭರಾಶಿಗೆ ಬಂದಾಗ 12 ವರ್ಷಗಳಿಗೊಮ್ಮೆ ಇಲ್ಲಿ ನಡೆಯುವುದು. ಪ್ರತಿ ವರ್ಷದ ಮಾಘಮೇಳವು ಇಲ್ಲಿ ನಡೆಯುತ್ತದೆ. ಕಾಶೀ ಕ್ಷೇತ್ರಕ್ಕೆ ಹತ್ತಿರದಲ್ಲಿರುವ ಈ ಕ್ಷೇತ್ರಕ್ಕೆ ತೀರ್ಥರಾಜ ಎಂದೂ ಕರೆಯುತ್ತಾರೆ. ಕಾಶಿಗೆ ಬಂದವರೆಲ್ಲರೂ ಇಲ್ಲಿಗೆ ಬಂದು ಸ್ನಾನಾದಿಗಳನ್ನು ಮಾಡಿ ಪವಿತ್ರ ಗಂಗೆಯನ್ನು ತೆಗೆದುಕೊಂಡು ಹೋಗುವರು.

**೨೫. ಷಟ್ಚಕ್ರವರ್ತಿ ಪರಿಪಾಲಿತೇ**

ಈ ಪೃಥ್ವಿಯು ಮುಖ್ಯವಾದ ಷಟ್ (ಆರು) ಚಕ್ರವರ್ತಿಗಳಿಂದ ಪರಿಪಾಲಿಸಲ್ಪಟ್ಟಿದೆ ಎಂದು ಇಲ್ಲಿ ವರ್ಣಿಸಿದೆ. ಚಕ್ರವರ್ತಿಗಳೆಂದರೆ ಸಾಮಾನ್ಯ ರಾಜರೆಂದು ಪರಿಗಣಿಸಲಾಗುವುದಿಲ್ಲ. ಇವರೆಲ್ಲ ಭೂಮಂಡಲವೇ ಅಲ್ಲದೇ ಲೋಕಾಂತರದ ಸಂಬಂಧವನ್ನು ಇಟ್ಟುಕೊಳ್ಳಲು ಸಮರ್ಥರಾದವರು. (ನೋಡಿ - ಷೋಡಶ ಭೂಪಾಲರು -ಮಹಾಸಂಕಲ್ಪ)

**1. ಹರಿಶ್ಚಂದ್ರ :** ಸೂರ್ಯವಂಶದಲ್ಲಿ ಜನಿಸಿ ಸತ್ಯವ್ರತವನ್ನು ತ್ರಿಕರಣ ಶುದ್ಧಿಯಿಂದ ಆಚರಿಸಿ ತೇಜೋವಂತನಾಗಿದ್ದ ಶ್ರೇಷ್ಠ ಚಕ್ರವರ್ತಿ. ತ್ರಿಶಂಕು ಚಕ್ರವರ್ತಿ ಮತ್ತು ಆತನ ಪತ್ನಿ ಸತ್ಯವ್ರತೆಯೆಂಬುವರಿಗೆ ಜನಿಸಿದವನು. ಸತ್ಯನಿಷ್ಠೆಯನ್ನು ಸಾಧಿಸಲು ವಿಶ್ವಾಮಿತ್ರ ಮಹರ್ಷಿಗಳು ಒಡ್ಡಿದ ಸಕಲ ಕಷ್ಟಜಾಲಗಳನ್ನು ಅನುಭವಿಸಿ, ಕೊನೆಗೆ ಜಯಹೊಂದಿ, ಅವರಿಂದ ಅನುಗ್ರಹ ಹೊಂದಿ ಇಂದ್ರನ ಸಿಂಹಾಸನದಲ್ಲಿ ಅರ್ಧ ಭಾಗವನ್ನು ಪಡೆದು, ಸತ್ಯವ್ರತವನ್ನು ತ್ರಿಕರಣ ಶುದ್ಧಿಯಿಂದ ಆಚರಿಸಲು ಸಾಧ್ಯವೆಂದು ಪ್ರಪಂಚಕ್ಕೆ ತೋರಿಸಿದ ಏಕೈಕ ಮಹಾನುಭಾವ. ಈತನ ಚರಿತ್ರೆಯನ್ನು ಭಾಗವತವೇ ಮೊದಲಾದ ಅನೇಕ ಪುರಾಣಗಳಲ್ಲಿ ವರ್ಣಿಸಿದೆ. **"ಸತ್ಯಮಿತಿ ಸತ್ಯವಚಾರಾಧೀತರಃ | ತದ್ಧಿ ತಪಸ್ತದ್ಧಿ ತಪಃ"** ಎಂಬ ಶ್ರುತಿವಾಕ್ಯವನ್ನು ತತ್ವಶಃ ಪರಿಪಾಲಿಸಿದ ಚರಿತ್ರಾರ್ಹ ಚಕ್ರವರ್ತಿ.

**2. ನಳ ಚಕ್ರವರ್ತಿ :** ನಿಷಧ ದೇಶಾಧಿಪತಿಯಾದ ವೀರಸೇನ ರಾಜನ ಪುತ್ರ. ವಿದರ್ಭ ದೇಶಾಧಿಪತಿಯಾಗಿದ್ದ ಭೀಮರಾಜನ ಮಗಳಾದ ಮಹಾಪತಿವ್ರತೆ ದಮಯಂತಿಯನ್ನು (ನೋಡಿ -ಮಹಾಪತಿವ್ರತೆಯರು) ವಿವಾಹವಾಗಿ ಇಂದ್ರಸೇನ ಎಂಬ ಮಗನನ್ನು ಮತ್ತು ಇಂದ್ರಸೇನೆಯೆಂಬ ಮಗಳನ್ನು ಪಡೆದಿದ್ದನು. ಚಕ್ರವರ್ತಿಯಾಗಿದ್ದರೂ ವಿಧಿವಶದಿಂದ ಅಸಾಧ್ಯವಾದ ಕಷ್ಟಗಳನ್ನು ಅನುಭವಿಸಿ, ಘೋರವಾದ ಅರಣ್ಯದಲ್ಲಿ ಅಲೆಯುವಂತಾಗಿ, ಕೇವಲ ತನ್ನ ಮನೋಬಲದಿಂದ ಮತ್ತು ತಾಳ್ಮೆಯಿಂದ ದೃಢಮನಸ್ಕನಾಗಿ ಕೊನೆಗೆ ಪುನಃ ರಾಜ್ಯವನ್ನು ಹೊಂದಿ ಶ್ರೇಷ್ಠ ಚಕ್ರವರ್ತಿಯೆನಿಸಿದನು. ಈತನ ಚರಿತ್ರೆಯನ್ನು ಶ್ರವಣಮಾಡಿದವರನ್ನು ಶ್ರೀಶನಿದೇವರು ತಾನು ಕಾಡುವುದಿಲ್ಲವೆಂದು ವರವನ್ನು ಪಡೆದವನಾದನು. ಇಂದಿಗೂ ಭಕ್ತಿಯಿಂದ ಜನರು ಈತನ ಚರಿತ್ರೆಯನ್ನು ಶ್ರವಣ ಮಾಡುವರು. ಪಾಂಡವರು ವನವಾಸದಲ್ಲಿದ್ದಾಗ ಋಷಿಗಳು ಈತನ ಚರಿತ್ರೆಯನ್ನು ಶ್ರವಣಮಾಡಿಸಿ, ಅವರುಗಳನ್ನು ದೃಢಮನಸ್ಕರಾಗುವಂತೆ ಮಾಡಿದರು.



**3. ಪುರುಕುತ್ಸ :** ಮಾಂಧಾತ್ರ ಚಕ್ರವರ್ತಿಯ ಪುತ್ರ. ಈತನ ತಾಯಿ ಬಿಂದುಮತಿ. ಒಮ್ಮೆ ರಸಾತಲದಲ್ಲಿದ್ದ ಆರು ಕೋಟಿ ಮೌನೇಯರೆಂಬ ಗಂಧರ್ವರು ನಾಗಕುಲದವರ ಮೇಲೆ ದಾಳಿ ಮಾಡಿ, ಅವರ ಸರ್ವಸ್ವವನ್ನು ತಮ್ಮ ವಶಮಾಡಿಕೊಂಡರು. ಇದರಿಂದ ದುಃಖ ಹೊಂದಿ ಸರ್ಪಾಧಿಪತಿಗಳು ಶ್ರೀಮನ್ನಾರಾಯಣನನ್ನು ಶರಣುಹೊಂದಿ ಪ್ರಾರ್ಥಿಸಿದರು. ಇವರ ಭಕ್ತಿಗೆ ಪ್ರಸನ್ನನಾಗಿ ಪರಮಾತ್ಮನು, ಮಾಂಧಾತ್ರ ಪುತ್ರನಾದ ಪುರುಕುತ್ಸನ ಶರೀರವನ್ನು ಪ್ರವೇಸಿಸಿ, ಅವನ ಮೂಲಕ ಆ ಗಂಧರ್ವರನ್ನು ಪರಾಜಿತರನ್ನಾಗಿ ಮಾಡುವೆನೆಂದು ಹೇಳಿ ಅವರನ್ನು ಸಂತೈಸಿದನು. ನಾಗಾಧಿಪತಿಗಳು ಪುರುಕುತ್ಸನನ್ನು ರಸಾತಲಕ್ಕೆ ಕರೆತರುವಂತೆ ತಮ್ಮ ಸಹೋದರಿಯಾದ ನರ್ಮದೆಯನ್ನು ಪ್ರಾರ್ಥಿಸಿದರು. ಪುರುಕುತ್ಸನ ಪತ್ನಿಯೂ ಆಗಿದ್ದ ನರ್ಮದೆಯು ಆತನನ್ನು ರಸಾತಲಕ್ಕೆ ಕರೆತಂದಳು. ಅಲ್ಲಿ ಆತನು ವಿಷ್ಣು ತೇಜಸ್ಸಿನಿಂದ ತುಂಬಿದವನಾಗಿ , ಪರಮಾತ್ಮನ ಪ್ರೇರಣೆಯಂತೆ ಗಂಧರ್ವರನ್ನು ಸಂಹರಿಸಿ, ನಾಗಕುಲವನ್ನು ಕಷ್ಟದಿಂದ ಪಾರು ಮಾಡಿದನು. ಇದರಿಂದ ಸಂತುಷ್ಟರಾಗಿ ನಾಗಾಧಿಪತಿಗಳು ಪುರುಕುತ್ಸನಿಗೆ ಸಂತತಿಯು ಅನುಸ್ಯೂತವಾಗಿರಲೆಂದೂ ಮತ್ತು ನರ್ಮದೆಯನ್ನು ಸ್ಮರಿಸಿದವರಿಗೆ ವಿಷ ಭಯವಿಲ್ಲದಿರುವಂತೆಯೂ ವರಗಳನ್ನಿತ್ತರು.

**"ನರ್ಮದಾಯೈ ನಮಃ ಪ್ರಾತಃ ನರ್ಮದಾಯೈ ನಮೋ ನಿಶಿ |**
**ನಮೋಽಸ್ತು ನರ್ಮದೇ ತುಭ್ಯಂ ತ್ರಾಹಿ ಮಾಂ ವಿಷಸರ್ಪತಃ ||"**

ಎಂಬ ಶ್ಲೋಕವನ್ನು ಪಠಿಸುತ್ತಾ ಎಲ್ಲಿಯೇ, ಯಾವ ಕಾಲದಲ್ಲಿಯೇ ಆಗಲಿ ಹೋಗುತ್ತಿದ್ದರೂ ಸರ್ಪವು ಕಚ್ಚುವುದಿಲ್ಲ ಮತ್ತು ನರ್ಮದೆಯನ್ನು ಸ್ಮರಿಸುತ್ತಾ ಊಟ ಮಾಡಿದರೆ, ತಿಂದ ವಿಷವೂ ಕೂಡ ಘಾತಕವಾಗುವುದಿಲ್ಲವೆಂಬ ವರವನ್ನು ಇತ್ತರು. (ವಿಷ್ಣುಪುರಾಣ, ಚತುರ್ಥಾಂಶ) ಈ ಶ್ಲೋಕವನ್ನು ಇಂದಿಗೂ ಕೆಲವರು ಸಂಧ್ಯಾವಂದನೆಯ ಕ್ರಮದಲ್ಲಿ ಪಠಿಸಿ, ನರ್ಮದೆಯನ್ನು ಸ್ಮರಿಸುತ್ತಾರೆ.

**4. ಪುರೂರವ :** ಅತ್ರಿ ಮಹರ್ಷಿಗಳ ಮಗ ಚಂದ್ರ; ಈತನ ಮಗ ಬುಧ. ಬುಧ ದೇವತೆಯ ಮಗನೇ ಪುರೂರವ. ಈತನು ನೂರು ಅಶ್ವಮೇಧ ಯಾಗಗಳನ್ನು ಆಚರಿಸಿ, ಹಿಮಾದ್ರಿ ಶೃಂಗದಲ್ಲಿ ವೈಭವದಿಂದಿದ್ದನು. ಕೇಶಿಯೇ ಮುಂತಾದ ಮಹಾರಾಕ್ಷಸರೂ ಸಹ ಈತನ ಸೇವಕರಾಗಿದ್ದರು. ಈತನ ಸೌಂದರ್ಯಕ್ಕೆ ಮನಸೋತು ಇಂದ್ರಲೋಕದ ಅಪ್ಸರೆ ಊರ್ವಶೀ ಈತನ ಪತ್ನಿಯಾದಳು. ಈತನನ್ನು ದೇವೇಂದ್ರನು ಪ್ರತಿದಿನವೂ ಭೇಟಿ ಮಾಡುತ್ತಿದ್ದನು. ಈತನ ಚರಿತ್ರೆಯು ಪದ್ಮಪುರಾಣ ಮತ್ತು ಮಹಾಭಾರತದಲ್ಲಿ ವರ್ಣಿತವಾಗಿದೆ.

**5. ಸಗರ :** ಇಕ್ಷ್ವಾಕುವಂಶದ ಅಸಿತ ರಾಜನ ಮಗ. ಈತನು ಅನೇಕ ಅಶ್ವಮೇಧ ಯಾಗಗಳನ್ನು ಆಚರಿಸಿ ತೇಜೋವಂತನಾಗಿ ದೇವೇಂದ್ರನ ಸಖ್ಯವನ್ನು ಹೊಂದಿದ್ದ ಚಕ್ರವರ್ತಿ. ಈತನು ಉತ್ತರ-ಗೋಗ್ರಹಣ ಕಾಲದಲ್ಲಿ ನಡೆದ ಕೌರವ-ಪಾಂಡವರ ಯುದ್ಧವನ್ನು ವೀಕ್ಷಿಸಲು ದೇವೇಂದ್ರನ ಜೊತೆಯಲ್ಲಿ ಆತನ ವಿಮಾನದಲ್ಲಿ ಬಂದಿದ್ದನೆಂದು ವರ್ಣಿಸಲ್ಪಟ್ಟಿದೆ.

shrinath.udupa@gmail.com

**6. ಕಾರ್ತವೀರ್ಯ :** ಚಂದ್ರವಂಶದ ಕೃತವೀರ್ಯರಾಜನ ಮಗ. ಕಾರ್ತವೀರ್ಯಾರ್ಜುನನೆಂಬ ಹೆಸರಿನಿಂದ ಪ್ರಸಿದ್ಧನಾಗಿ ವಿಂಧ್ಯ ಪರ್ವತದ ಬಳಿಯಿರುವ ಮಾಹಿಷ್ಮತೀ ಪಟ್ಟಣದಲ್ಲಿ ರಾಜ್ಯಭಾರ ಮಾಡುತ್ತಿದ್ದ. ಕುಲಗುರುಗಳಾದ ಗಾರ್ಗ್ಯ ಮಹರ್ಷಿಗಳ ಉಪದೇಶದಿಂದ ಶ್ರೀ ದತ್ತಾತ್ರೇಯರನ್ನು ಉಪಾಸನೆ ಮಾಡಿ ಅನುಗ್ರಹ ಪಡೆದು ಅಜೇಯತ್ವವನ್ನೂ ಯುದ್ಧದ ಸಮಯದಲ್ಲಿ ಸಹಸ್ರ ಬಾಹುಗಳು ಹೊಂದುವಂತೆ ವರವನ್ನೂ ಪಡೆದಿದ್ದನು. ಒಮ್ಮೆ ಅಗ್ನಿ ದೇವನು ಆಹಾರ ಯಾಚಿಸಲಾಗಿ, ಸುತ್ತಲಿನ ಅರಣ್ಯವನ್ನು ದಹಿಸಿ ತೃಪ್ತಿಯಾಗಲು ಅವಕಾಶ ನೀಡಿದ ಸಂದರ್ಭದಲ್ಲಿ, ಅದೇ ಪ್ರದೇಶದಲ್ಲಿದ್ದ ವಸಿಷ್ಠ ಮಹರ್ಷಿಗಳ ಆಶ್ರಮವೂ ದಹಿಸಿಹೋಯಿತು. ಈ ಕಾರಣದಿಂದ ವಸಿಷ್ಠರ ಶಾಪಕ್ಕೆ ಗುರಿಯಾಗಿ, ಪರಶುರಾಮರಿಂದ ಮರಣಹೊಂದಬೇಕಾಯಿತು. (ಮಹಾಭಾರತ, ರಾಮಾಯಣ, ದೇವೀಭಾಗವತ, ಮತ್ಸ್ಯ, ವಾಯು, ಮಾರ್ಕಂಡೇಯ ಪುರಾಣಗಳು)

### ೨೬. ಸಪ್ತಮಾತೃಕಾ ವಿರಾಜಿತೇ

ಸಪ್ತಮಾತೃಕೆಯರ ಪೂಜೆಯು ಶಾಕ್ತ ಮತ್ತು ತಾಂತ್ರಿಕ ಸಂಪ್ರದಾಯಗಳಲ್ಲಿ ಬಹಳ ಮುಖ್ಯವಾದದ್ದಾಗಿದೆ. ಸಾಮಾನ್ಯವಾಗಿ ಯಾವುದೇ ದೇವೀ ದೇವಾಲಯಗಳಲ್ಲೂ ಸಪ್ತಮಾತೃಕೆಯರ ವಿಗ್ರಹಗಳು ಪ್ರತಿಷ್ಠಿತವಾಗಿರುತ್ತವೆ. ಬೇರೆ ಬೇರೆ ಸಂಸ್ಕೃತಿಗಳಲ್ಲಿಯೂ ಸಹ ಏಳು ಜನ ಕನ್ನಿಕೆಯರ ಕಥೆಗಳು ಉಲ್ಲೇಖಿಸಲ್ಪಟ್ಟಿವೆ. ಜಾನಪದ ಸಾಹಿತ್ಯದಲ್ಲಿಯೂ ಈ ಪೂಜೆಗೆ ಪ್ರಧಾನ ಸ್ಥಾನವಿದೆ. ಈ ಬಗ್ಗೆ ಉಲ್ಲೇಖಗಳು ಬೃಹತ್ ಸಂಹಿತೆ, ಭರತಮುನಿಯ ನಾಟ್ಯಶಾಸ್ತ್ರ, ಗೋಭಿಲಸ್ಮೃತಿ, ಪುರಾಣಗಳು, ಪ್ರಪಂಚಸಾರ ಮತ್ತು ಯೋಗಿನೀಹೃದಯ ಮೊದಲಾದ ತಂತ್ರಶಾಸ್ತ್ರಗಳಲ್ಲಿಯೂ ಕಂಡುಬರುತ್ತವೆ.

ಮಾರ್ಕಂಡೇಯ ಪುರಾಣದ ದೇವೀ ಮಹಾತ್ಮೆಯೆಂಬ ಭಾಗದಲ್ಲಿ (ಸಪ್ತಶತಿಯೆಂದು ಪ್ರಸಿದ್ಧವು) ಸಪ್ತಮಾತೃಕೆಯರು ಆವಿರ್ಭವಿಸಿದ ರೀತಿಯು ಹೀಗೆ ವರ್ಣಿಸಲ್ಪಟ್ಟಿದೆ. ದೇವಿಯ ಅಸಾಧಾರಣ ರೂಪಗಳನ್ನು ಮಹಾಕಾಳೀ, ಮಹಾಲಕ್ಷ್ಮೀ ಮತ್ತು ಮಹಾಸರಸ್ವತಿ ಎಂಬ ಮೂರು ಚಾರಿತ್ರ್ಯಗಳ ಮೂಲಕ ವಿವರಿಸಿದೆ. ಇವುಗಳಲ್ಲಿ ಮೂರನೆಯದಾದ ಉತ್ತಮ ಚರಿತ್ರೆಯೆಂಬ ಭಾಗದಲ್ಲಿ ಶುಂಭ, ನಿಶುಂಭರೆಂಬ ರಾಕ್ಷಸರನ್ನು ದೇವಿಯು ಸಂಹಾರ ಮಾಡುವ ವಿವರಣೆಯಿದೆ. ಈ ಸಂದರ್ಭದಲ್ಲಿ ದೇವಿಯ ದೇಹದಲ್ಲಿ ಸುಪ್ತವಾಗಿದ್ದ ಬ್ರಹ್ಮಾ, ವಿಷ್ಣು, ಶಿವ, ಸುಬ್ರಹ್ಮಣ್ಯ, ಇಂದ್ರನೇ ಮುಂತಾದ ಶಕ್ತಿಗಳು ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಮಾಹೇಂದ್ರೀ ಮತ್ತು ಚಾಮುಂಡೀ ಎಂಬ ಸಪ್ತ ಮಾತೃಕೆಯರಾಗಿ ಆವಿರ್ಭವಿಸಿ ರಾಕ್ಷಸಸಂಹಾರವನ್ನು ಮಾಡಿದರೆಂದು ವಿವರಿಸಲ್ಪಟ್ಟಿದೆ.

ವಾಮನಪುರಾಣದಲ್ಲಿ ಚಂಡಿಕೆಯ ದೇಹದಿಂದಲೇ ಸಪ್ತಮಾತೃಕೆಯರು ಹೊರಹೊಮ್ಮಿ ರಾಕ್ಷಸರ ಸಂಹಾರ ಮಾಡಿದ ನಂತರ ಆ ದೇಹದಲ್ಲಿಯೇ ಮರೆಯಾದರೆಂದು ವರ್ಣಿಸಿದೆ.



shrinath.udupa@gmail.com

ಮತ್ಸ್ಯಪುರಾಣದಂತೆ ಅಂಧಕಾಸುರನನ್ನು ಸಂಹರಿಸಲು ಶಿವನು ಈ ಮಹಾಶಕ್ತಿಗಳನ್ನು ನಿರ್ಮಿಸಿದನೆಂದು ಹೇಳಿದೆ.

ವರಾಹಪುರಾಣದಲ್ಲಿ ಅಸುರ ಸಂಹಾರಕ್ಕಾಗಿ ಶಿವನ ಮುಖದಿಂದ ಯೋಗೇಶ್ವರಿಯೆಂಬ ಶಕ್ತಿಯು ಕಾಣಿಸಿಕೊಂಡು, ಆ ಶಕ್ತಿದೇವತೆಗೆ ನೆರವಾಗಲು ಈ ಸಪ್ತಮಾತೃಕೆಯರ ಆವಿರ್ಭಾವವಾಯಿತೆಂದು ತಿಳಿಸಿದೆ.

ಸಪ್ತ ಮಾತೃಕೆಯರ ಧ್ಯಾನ ಶ್ಲೋಕಗಳು, ರೂಪಗಳು ಇತ್ಯಾದಿ ವಿವರಗಳನ್ನು ಆಳಿದ ಮಹಾಪ್ರಭುಗಳಾದ 'ಮುಮ್ಮಡಿ ಕೃಷ್ಣರಾಜ ಒಡೆಯರ್'ರವರಿಂದ ರಚಿಸಲ್ಪಟ್ಟ ಶ್ರೀ 'ತತ್ತ್ವನಿಧಿ'ಯೆಂಬ ಗ್ರಂಥದಲ್ಲಿ ವಿಸ್ತಾರವಾಗಿ ತಿಳಿಯಬಹುದಾಗಿದೆ.

ಇಂತಹ ದಿವ್ಯಶಕ್ತಿಗಳಾದ ಸಪ್ತಮಾತೃಕೆಯರನ್ನು ಇಲ್ಲಿ ಸ್ಮರಿಸಿದೆ.

### ೨೭. ಮಹಾ ಪತಿವ್ರತಾ ಸಂದೋಹ ಸಮಲಂಕೃತೇ

**1. ಸಾವಿತ್ರೀ :** ಮದ್ರ ದೇಶವನ್ನು ಆಳುತ್ತಿದ್ದ ಅಶ್ವಪತಿ ರಾಜನ ಪುತ್ರಿ. ತಾಯಿ ಮಾಳವ ದೇಶದ ರಾಜಕುಮಾರಿ. ವಿಧಿವಶದಿಂದ ರಾಜ್ಯ ಕೋಶಾದಿಗಳನ್ನು ಕಳೆದುಕೊಂಡು, ಕುಟುಂಬ ಸಮೇತನಾಗಿ ಅರಣ್ಯವಾಸಿಯಾಗಿದ್ದ ಸಾಳ್ವ ರಾಜ ದ್ಯುಮತ್ಸೇನನ ಮಗನಾದ ಸತ್ಯವಂತನೆಂಬುವನು ಅಲ್ಪಾಯುವೆಂದು ನಾರದ ಮಹರ್ಷಿಗಳ ಮೂಲಕ ತಿಳಿದಿದ್ದರೂ ಸಹ ಒಮ್ಮೆ ಮನಸ್ಸು ಕೊಟ್ಟಮೇಲೆ ಅದನ್ನು ವ್ಯತ್ಯಾಸ ಮಾಡಬಾರದೆಂಬ ಪತಿವ್ರತಾಧರ್ಮವನ್ನು ಅನುಸರಿಸಿ, ಮನಃಸ್ಥೈರ್ಯದಿಂದ ಅವನನ್ನು ವಿವಾಹವಾದಳು. ಒಮ್ಮೆ ಸತ್ಯವಂತನು ಸೌದೆಯನ್ನು ಸಂಗ್ರಹಿಸಲು ಹೊರಟಾಗ, ಅಂದು , ಆತನ ಮೃತ್ಯು ದಿನವೆಂದು ತಿಳಿದು ಆತನನ್ನು ತಾನೂ ಹಿಂಬಾಲಿಸಿದಳು. ಕಾಡಿನಲ್ಲಿ ಮೃತ್ಯುದೇವತೆಯು ಸತ್ಯವಂತನ ಪ್ರಾಣವನ್ನು ಸೆಳೆದೊಯ್ಯಲು ಬಂದಾಗ, ತನ್ನ ಪತಿವ್ರತಾಧರ್ಮದ ಶಕ್ತಿಯಿಂದ, ಯಮದೇವನನ್ನೇ ಹಿಂಬಾಲಿಸಿ, ತನ್ನ ಸಹನೆ, ಶಕ್ತಿ ಮತ್ತು ಭಕ್ತಿಗಳಿಂದ ಆತನ ಅನುಗ್ರಹವನ್ನು ಪಡೆದವಳಾಗಿ ಮರಳಿ ಸತ್ಯವಂತನನ್ನು ಪಡೆದಳು. ಇಷ್ಟೇ ಅಲ್ಲದೆ ತನ್ನ ಅತ್ತೆ ಮಾವಂದಿರ ಕುರುಡುತನವು ಹೋಗುವಂತೆಯೂ ಪುನಃ ಅವರಿಗೆ ರಾಜ್ಯವು ಪ್ರಾಪ್ತಿಯಾಗುವಂತೆಯೂ ಸಹ ವರವನ್ನು ಪಡೆದಳು. ತನ್ನ ಪಾತಿವ್ರತ್ಯಶಕ್ತಿಯಿಂದ ಮೃತ್ಯುವನ್ನೇ ಹಿಂಬಾಲಿಸಿ, ಆ ದೇವನನ್ನು ಒಲಿಸಿಕೊಂಡ ಮಹಾ ಪತಿವ್ರತೆಯೆನಿಸಿದಳು. (ಮಹಾಭಾರತ ವನ - 293-299;ಮತ್ಸ್ಯಪುರಾಣ-209-214)

**2. ಸತ್ಯವತೀ :** ಕುಶನಾಭನೆಂಬುವನ ಮಗನಾದ 'ಗಾಧಿ' ರಾಜನ ಪುತ್ರಿ. ಮಹರ್ಷಿ ವಿಶ್ವಾಮಿತ್ರರ ಹಿರಿಯ ಸಹೋದರಿ. ತಪೋಮಹಿಮರಾದ ಋಚೀಕ ಮುನಿಗಳನ್ನು ವಿವಾಹವಾಗಿ, ಅವರ ಅನುಗ್ರಹದಿಂದ ಮಹಾತಪಸ್ವಿಗಳಾದ ಜಮದಗ್ನಿ ಋಷಿಗಳಿಗೆ ಜನ್ಮವಿತ್ತಳು. ವಾಲ್ಮೀಕಿರಾಮಾಯಣದ ಬಾಲಕಾಂಡದ 34ನೇ ಸರ್ಗದಲ್ಲಿ, ವಿಶ್ವಾಮಿತ್ರರು ಶ್ರೀ ರಾಮಚಂದ್ರನಿಗೆ ತನ್ನ ಕುಟುಂಬದ ಚರಿತ್ರೆ ನಿರೂಪಿಸುವಾಗ, ತಮ್ಮ ಹಿರಿಯ ಸಹೋದರಿ ಸತ್ಯವತಿಯ ಬಗ್ಗೆ ಈ ರೀತಿ ಹೇಳಿರುತ್ತಾರೆ.

"ಸತ್ಯವತಿಯು ಒಳ್ಳೆಯ ಆಚಾರಸಂಪನ್ನೆ. ಋಷೀಕ ಮುನಿಯನ್ನು ಆಕೆಯು ವಿವಾಹವಾಗಿ, ಮಹಾಪತಿವ್ರತೆಯಾಗಿ ಬಾಳಿ ಪತಿಯನ್ನು ಹಿಂಬಾಲಿಸಿ ಸಶರೀರಳಾಗಿ ಸ್ವರ್ಗಕ್ಕೆ ಹೋದಳು. ಅವಳು ತನ್ನ ಮಹಿಮೆಯಿಂದ ಕೌಶಿಕಿಯೆಂಬ ಮಹಾನದಿಯಾಗಿ ಹರಿಯುತ್ತಿದ್ದಾಳೆ. ಹಿಮಾಲಯದ ಬಳಿ ಹರಿಯುತ್ತಿರುವ ಈ ನದಿಯು ಪುಣ್ಯಕರವಾದದ್ದು. ನಾನು ಆ ಕಾರಣದಿಂದಲೇ ಈ ನದೀ ದಡದಲ್ಲಿ ವಾಸಿಸುತ್ತಿರುವೆನು. ಆಕೆಯು ಸತ್ಯಧರ್ಮಗಳನ್ನು ನಂಬಿದ್ದ ಪುಣ್ಯಪತಿವ್ರತೆ ಮತ್ತು ಪುಣ್ಯವಂತೆ."

**3. ದಮಯಂತಿ :** ವಿದರ್ಭರಾಜನಾದ ಭೀಮ ಭೂಪಾಲನಿಗೆ ದಮನೆಂಬ ಮುನಿಯ ವರಪ್ರಸಾದದಿಂದ ಜನಿಸಿದವಳು. ಈಕೆ ನಿಷಧ ದೇಶಾಧಿಪತಿ ನಳ ಮಹಾ ಚಕ್ರವರ್ತಿಯ ಪತ್ನಿಯು. (ನೋಡಿ -ಷಟ್ಚಕ್ರವರ್ತಿಗಳು). ವಿಧಿವಶದಿಂದ ಪತಿಯು ಕಾಡಿನಲ್ಲಿ ವಿಪರೀತ ಕಷ್ಟಗಳನ್ನು ಅನುಭವಿಸುತ್ತಿದ್ದಾಗ, ಅವನಿಂದ ಬೇರ್ಪಟ್ಟವಳಾಗಿ, ತನ್ನ ಪತಿವ್ರತಾಧರ್ಮದಿಂದ ಸಿದ್ಧವಾಗಿದ್ದ ಮನಃಸ್ಥೈರ್ಯದಿಂದ ಆ ಕಾಲವನ್ನು ಅತ್ಯಂತ ಸಮಾಧಾನದಿಂದ ಕಳೆದು, ಪುನಃ ಪತಿಯನ್ನೂ ರಾಜ್ಯವನ್ನೂ ಹೊಂದಿದಳು. ಈ ಕಥೆಯನ್ನು ಮುನಿಗಳಿಂದ ಶ್ರವಣಮಾಡಿಯೇ ಪಾಂಡವರು ತಮ್ಮ ದುಃಖವನ್ನು ಸಮಾಧಾನದಿಂದ ಅನುಭವಿಸಿ ವನವಾಸವನ್ನೂ ಪೂರೈಸಿದರು. (ಮಹಾ ಭಾರತ - ವನ)

**4. ಮದಯನ್ತಿ :** ಚಂದ್ರವಂಶದ ಸುದಾಸರಾಜನ ಮಗನಾದ ಕಲ್ಮಾಷಪಾದ ರಾಜನ ಭಾರ್ಯೆ. ಒಮ್ಮೆ ರಾಜನ ಮೇಲಿನ ಸೇಡಿನಿಂದ ಒಬ್ಬ ರಾಕ್ಷಸನು, ವಸಿಷ್ಠ ಮಹರ್ಷಿಯು ಈ ರಾಜನ ಅತಿಥಿಯಾಗಿ ಬಂದಿದ್ದಾಗ, ಮೋಸದಿಂದ ಅವರು ನರಮಾಂಸವನ್ನು ಸೇವನೆ ಮಾಡುವಂತೆ ಮಾಡಿ, ರಾಜನ ಮೇಲೆ ಅಪವಾದ ಬರುವಂತೆ ಮಾಡಿದನು. ಕೋಪದ ಭರದಲ್ಲಿ ವಿಚಾರ ತಿಳಿಯದೇ ವಸಿಷ್ಠರು ರಾಜನನ್ನು ಶಪಿಸಿದರು. ರಾಜನೂ ಕೋಪಕ್ಕೆ ವಶನಾಗಿ ಪ್ರತಿಶಾಪವನ್ನು ಕೊಡಲು ಉದ್ಯುಕ್ತನಾದನು. ಅಂತಹ ವಿಪರೀತ ಪರಿಸ್ಥಿತಿಯಲ್ಲಿ ಮದಯನ್ತಿಯು, ಅತ್ಯಂತ ಸಮಾಧಾನ ಚಿತ್ತದಿಂದಲೂ, ಉಪಾಯದಿಂದಲೂ ತನ್ನ ಪತಿಯು ಪ್ರತಿ ಶಾಪವನ್ನು ಕೊಟ್ಟು ತೇಜೋಹೀನನಾಗುವುದನ್ನು ತಪ್ಪಿಸಿ, ಆತನ ಕೀರ್ತಿಯನ್ನು ಹೆಚ್ಚಿಸಿದಳು. ಪತಿವ್ರತೆಯರು ಸಮಯ ಪ್ರಜ್ಞೆ ಉಳ್ಳವರೆಂಬುದಕ್ಕೆ ಸಾಕ್ಷಿಯಾಗಿ ಬದುಕಿದವಳು ಮದಯನ್ತಿ. (ಮಹಾ ಭಾರತ - ಆದಿಪರ್ವ128 -ಅಶ್ವ57)

**5. ಲೋಪಾಮುದ್ರಾ :** ಪಿತೃದೇವತೆಗಳ ಸಂದೇಶದಂತೆ ಅಗಸ್ತ್ಯ ಮಹರ್ಷಿಗಳು ಪುತ್ರ ಪ್ರಾಪ್ತಿಗಾಗಿ ವಿವಾಹವಾಗಲು ಇಚ್ಛಿಸಿ, ಪ್ರಪಂಚದಲ್ಲಿ ಸಕಲ ಪ್ರಾಣಿಗಳಲ್ಲೂ ಇರುವ ಶ್ರೇಷ್ಠವಾದ ಅಂಶಗಳನ್ನು ತಮ್ಮ ತಪಶ್ಶಕ್ತಿಯಿಂದ ಒಂದುಗೂಡಿಸಿ ಒಂದು ಫಲವನ್ನು ಸೃಷ್ಟಿಸಿ, ಅದನ್ನು ಸಂತಾನಕ್ಕಾಗಿ ತಪಸ್ಸು ಮಾಡುತ್ತಿದ್ದ ವಿದರ್ಭದೇಶದ ರಾಜನಿಗೆ ಪ್ರಸಾದ ರೂಪದಲ್ಲಿ ಕೊಟ್ಟರು. ಇದರ ಪ್ರಭಾವದಿಂದ ಜನಿಸಿದವಳು ಲೋಪಾಮುದ್ರಾ. ಅತ್ಯಂತ ಸುಂದರಿಯೂ ಸುಗುಣೆಯೂ ಆಗಿದ್ದ ಈಕೆಯು, ಕಾಲಕರ್ಮವಶಕ್ಕೆ ಒಳಪಟ್ಟಿದ್ದರಿಂದ, ಅಂದಿನ ಯಾವುದೇ . ರಾಜಕುಮಾರನೂ ಈಕೆಯನ್ನು ವಿವಾಹವಾಗಲು ಮುಂದೆ ಬರಲಿಲ್ಲ. ಈಕೆಯ ತಂದೆ ತಾಯಿಗಳು



shrinath.udupa@gmail.com

ಇದರಿಂದ ದುಃಖಿತಪ್ತರಾಗಿದ್ದಾಗ, ಅಗಸ್ತ್ಯಮುನಿಗಳು ಈಕೆಯನ್ನು ಮದುವೆಯಾಗಲು ಇಚ್ಛಿಸಿದರು. ಮಗಳನ್ನು ಕೇವಲ ಒಬ್ಬ ಜಟಾಧಾರಿಯಾದ ಮುನಿಗೆ ಕೊಟ್ಟು, ಕಾಡಿಗೆ ಕಳುಹಿಸುವ ಪರಿಸ್ಥಿತಿ ಬರುವದನ್ನರಿತು ಅವರು ಮತ್ತೂ ಚಿಂತಾಕ್ರಾಂತರಾದರು. ಮುನಿಗಳನ್ನು ವಿರೋಧ ಮಾಡಿಕೊಳ್ಳಲಾರದೇ ಸಮಸ್ಯೆಯ ಸುಳಿಯಲ್ಲಿ ಏನೂ ತೋರದವರಾದರು.

ಇಂತಹ ಕಠಿಣ ಪರಿಸ್ಥಿತಿಯಲ್ಲಿ ಲೋಪಾಮುದ್ರೆಯು ಸ್ಥಿರಮನಸ್ಕಳಾಗಿ, ದೇಶಕ್ಕೆ ಒಳಿತುಮಾಡಲು, ಅಗಸ್ತ್ಯ ಮುನಿಗಳನ್ನು ವಿವಾಹವಾದಳು. ಅವರ ಅಪೇಕ್ಷೆಯಂತೆಯೇ ತನ್ನ ರಾಜಾಭರಣಗಳನ್ನು ತ್ಯಜಿಸಿ, ಕೇವಲ ನಾರುಮಡಿಯನ್ನುಟ್ಟು, ಆಶ್ರಮವಾಸಿಯಾಗಿ, ಪತಿಯ ಸೇವೆಯನ್ನು ಅತ್ಯಂತ ನಿಷ್ಠೆಯಿಂದ ಮಾಡಿ, ಪತಿಯ ಅಧ್ಯಾತ್ಮ ಸಾಧನೆಗಳಲ್ಲಿ ಆನಂದದಿಂದ ಭಾಗಿಯಾಗಿ, ಅವರ ಮನಸ್ಸನ್ನು ಒಲಿಸಿಕೊಂಡ ಮಹಾಪತಿವ್ರತೆಯೆನಿಸಿದಳು. ಕೊನೆಗೆ ಸ್ವಯಂಪ್ರತಿಭೆಯಿಂದ ಬೆಳಗುತ್ತಲಿದ್ದ ತೇಜಃಪುಂಜ ಪೂರ್ಣವಾದ ದೃಢದಸ್ಯುವೆಂಬ ಮಗನಿಗೆ ಜನ್ಮಕೊಟ್ಟಳು. ಹುಟ್ಟಿದಾಗಲೇ ಸಾಂಗೋಪಾಂಗವಾದ ವೇದಾಧ್ಯಯನದಲ್ಲಿ ನಿರತವಾಗಿದ್ದು ಆ ಶಿಶು ಪ್ರಕಾಶಿಸಿತು. ಅಗಸ್ತ್ಯ- ಲೋಪಾಮುದ್ರೆಯರ ಗೃಹಸ್ಥ ಜೀವನವೆಂದರೆ ಅತ್ಯಂತ ಆದರ್ಶವೆಂದು ಪರಿಗಣಿಸಲ್ಪಟ್ಟಿದೆ. (ಮಹಾ ಭಾರತ - ವನ 96-97)

**6. ಸುಕನ್ಯಾ :** ಈಕೆ ಸೂರ್ಯವಂಶದ ವೈವಸ್ವತ ಮನುವಿನ ಮಗನಾದ ಶರ್ಯಾತಿಯೆಂಬ ರಾಜನ ಮಗಳು. ಕುಮಾರಾವಸ್ಥೆಯಲ್ಲಿದ್ದಾಗ ಒಮ್ಮೆ ತನ್ನ ಸಖಿಯರೊಡನೆ ಆಟವಾಡುತ್ತಾ, ಒಂದು ಹುತ್ತವನ್ನು ಕಂಡು, ಅದರ ಕಿಂಡಿಯಲ್ಲಿ ಹೊಳೆಯುತ್ತಲಿದ್ದ ಎರಡು ವಸ್ತುಗಳನ್ನು ಕಂಡು, ಹುಡುಗಾಟಿಕೆಗಾಗಿ ಕಡ್ಡಿಯಿಂದ ಚುಚ್ಚಿದಳು. ಕೂಡಲೇ ಕಿಂಡಿಯಿಂದ ರಕ್ತ ಹರಿಯತೊಡಗಲು, ಗಾಬರಿಯಿಂದ ರಾಜನು ಹುತ್ತವನ್ನು ಒಡೆದು ನೋಡಿದಾಗ, ಅದರೊಳಗೆ ಜೀರ್ಣಸಿಕ್ತರಾದ ಚ್ಯವನ ಮಹರ್ಷಿಗಳು ತಪಸ್ಸಿನಲ್ಲಿ ಕುಳಿತಿರುವುದನ್ನು ಕಂಡನು. ತಿಳಿಯದೆ ಅವರ ಕಣ್ಣುಗಳನ್ನು ಸುಕನ್ಯೆಯು ಚುಚ್ಚಿದುದರ ಪರಿಣಾಮವಾಗಿ, ಅವರು ಅಂಧರಾಗಿಬಿಟ್ಟಿರುವುದನ್ನು ತಿಳಿದನು. ಮಹರ್ಷಿಗಳ ಶಾಪಕ್ಕೆ ಸಕಲರೂ ಹೆದರಿ ಕ್ಷಮೆ ಯಾಚಿಸಿದರು. ಚ್ಯವನರು ವೃದ್ಧರಾಗಿದ್ದರಿಂದ ತಮ್ಮ ಶುಶ್ರೂಷೆಗೆ ಅನುಕೂಲವಾಗುವಂತೆ ಸುಕನ್ಯೆಯನ್ನು ತಮಗೆ ಕೊಟ್ಟು ಮದುವೆ ಮಾಡಿದರೆ ಎಲ್ಲವೂ ಒಳ್ಳೆಯದಾಗುವುದೆಂದು ತಿಳಿಸಿದರು. ಏನು ಮಾಡಲೂ ತೋಚದೆ ಎಲ್ಲರೂ ಭಯದಿಂದ ನಡುಗುತ್ತಿರಲು, ಸಾಧ್ವಿ ಸುಕನ್ಯೆಯು ತನ್ನ ಮನಸ್ಸಿನ ಸ್ಥೈರ್ಯವನ್ನೇ ನಂಬಿ, ಎಲ್ಲರಿಗೂ ಒಳಿತಾಗಬೇಕೆಂದು ಬಯಸಿ, ವಿವಾಹಕ್ಕೆ ತಾನೇ ಸ್ವ ಇಚ್ಛೆಯಿಂದ ಒಪ್ಪಿದಳು. ತನ್ನ ಪತಿವ್ರತಾಧರ್ಮದಿಂದ ಅಮಿತವಾದ ತೇಜಸ್ಸನ್ನು ಪಡೆದು, ಅದರಿಂದ ಶೋಭಿತಳಾಗಿ ಪತಿಯ ಶುಶ್ರೂಷೆಯಲ್ಲಿ ಕಾಲಕಳೆಯುತ್ತಾ ಆಶ್ರಮವಾಸಿಯಾದಳು. ಹೀಗಿರಲು ಒಮ್ಮೆ ಅಶ್ವಿನೀ ಕುಮಾರರು ಈಕೆಯ ಸತೀತ್ವ ಪರೀಕ್ಷೆಗೆ ಪ್ರಯತ್ನಿಸಿದಾಗ, ಆಕೆಯಿಂದ ಶಾಪಗ್ರಸ್ತರಾಗುವ ಸಂದರ್ಭ ಬಂದು, ಕ್ಷಮಾಪಣೆಯನ್ನು ಯಾಚಿಸಿ, ಚ್ಯವನ ಮಹರ್ಷಿಗಳನ್ನು ಯುವಕರಾಗುವಂತೆ ಅನುಗ್ರಹಿಸಿದರು. ಸುಕನ್ಯೆಯು ತನ್ನ ಪತಿವ್ರತಾಧರ್ಮದಿಂದ ಸಂಪಾದಿಸಿದ ತೇಜಸ್ಸಿನಿಂದ ವೃದ್ಧ ಪತಿಯನ್ನು ಯುವಕನನ್ನಾಗಿ

ಮಾಡಿ ಸುಖವಾಗಿದ್ದಳೆಂದು ಪ್ರಸಿದ್ಧವಾಯಿತು. ಈಕೆಯು ಪ್ರಮತಿಯೆಂಬ ಪುತ್ರನನ್ನು ಪಡೆದಳು. (ಭಾಗ :- ಸ್ಕಂದ 9; ಭಾರತ :- ಆದಿ ಮತ್ತು ವನ)

**7. ಕೇಶಿನೀ :** ನಳ ಮಹಾರಾಜನ ಪತ್ನಿಯಾದ ಮಹಾಪತಿವ್ರತೆ ದಮಯಂತಿಯ ಸಖಿ. ಪತಿಯಿಂದ ವಿಧಿವಶಾತ್ ಬೇರ್ಪಟ್ಟ ದಮಯಂತಿಯು ತಂದೆಯ ಬಳಿ ಸೇರಿ ದುಃಖದಿಂದ ಜೀವನವನ್ನು ಸಾಗಿಸುತ್ತಿದ್ದಳು. ಕಾಲಕ್ರಮದಲ್ಲಿ ನಳ ಮಹಾರಾಜನು ಗುರುತು ಸಿಗದಷ್ಟು ವಿಕಾರರೂಪವನ್ನು ಹೊಂದಿ ಬಾಹುಕನೆಂಬ ಹೆಸರಿನಿಂದ ಋತುಪರ್ಣ ರಾಜನ ಸಾರಥಿಯಾಗಿ ದಮಯಂತಿಯ ತಂದೆಯಾದ ವಿದರ್ಭ ದೇಶದ ರಾಜನ ಅರಮನೆಗೆ ಬರುವ ಯೋಗ ಒದಗಿತು. ಆ ಸಂದರ್ಭದಲ್ಲಿ ದಮಯಂತಿಯು ಬಾಹುಕನು ತನ್ನ ಪತಿಯೆಂಬ ಸಂದೇಹ ಹೊಂದಿ, ಆತನ ಬಳಿಗೆ ತನ್ನ ಸಖಿಯಾದ ಕೇಶಿನಿಯನ್ನು ಉಪಾಯದಿಂದ ಗುರುತನ್ನು ತಿಳಿಯಬೇಕೆಂದು ನಿಯೋಜಿಸಿದಳು. ಕೇಶಿನಿಯು ತನ್ನ ಚಾತುರ್ಯದಿಂದ ಬಾಹುಕನೊಡನೆ ಪರಿಪ್ರಶ್ನೆಗಳನ್ನು ಮಾಡಿ, ಕೊನೆಗೆ ಪತಿವ್ರತಾಧರ್ಮದ ಬಗ್ಗೆ ಕೇಳಿದಳು. ಆಗ ನಳ ಮಹಾರಾಜನು ತಾನು ಹಿಂದೆ ಹೇಳಿದ್ದ ನುಡಿಗಳನ್ನೇ ಪುನರುಚ್ಚರಿಸಿದನು. ಇದರಿಂದ ಈತನು ನಳಮಹಾರಾಜನೆಂದು ತೀರ್ಮಾನಿಸಿ, ಸಕಲ ವಿಚಾರಗಳನ್ನು ದಮಯಂತಿಗೆ ತಿಳಿಸಿದಳು. ಸಕಲವೂ ಸುಖಾಂತ್ಯದಲ್ಲಿ ಕೊನೆಗೊಂಡಿತು. ಧರ್ಮಮೂರ್ತಿಯಾದ ನಳ ಚಕ್ರವರ್ತಿ ಮತ್ತು ಮಹಾಪತಿವ್ರತೆ ದಮಯಂತಿಯ ಪುನರ್ಮಿಲನಕ್ಕೆ ಕಾರಣಭೂತಳಾಗಿ ಕೇಶಿನಿಯು ಪುಣ್ಯಭಾಗಿನಿಯಾದಳು. ಆದ್ದರಿಂದ ಈಕೆಯನ್ನೂ ಸಹ ಇಲ್ಲಿ ಸ್ಮರಿಸಲಾಗಿದೆ. (ಭಾರ :-ವನ-ಅಧ್ಯಾಯ74)

**8. ಸುಶೀಲಾ :** ಸೂರ್ಯವಂಶದ ರಾಜನಾದ ರಾಜವೃತ್ ಎಂಬುವನು ಅಶ್ವಮೇಧಯಾಗ ಮಾಡಿದಾಗ, ಆತನ ಪುತ್ರ ಬಾಹುಕನೆಂಬುವನ ನೇತೃತ್ವದಲ್ಲಿ ಯಜ್ಞಾಶ್ವವು ಹೊರಟಿತು. ಶಕ್ತಿಸೇನನೆಂಬ ರಾಜನ ಮಗಳು ಸುಶೀಲಾ ಎಂಬುವಳು. ಈಕೆಯು ಬಹಳ ಅಭಿಮಾನಿಯಾಗಿದ್ದರಿಂದ ಯಜ್ಞಾಶ್ವವನ್ನು ಕಟ್ಟಿ ಹಾಕಿದಳು. ಇದರಿಂದ ಬಾಹುಕನಿಗೂ, ಶಕ್ತಿಸೇನನಿಗೂ ಯುದ್ಧವಾಗಿ, ಶಕ್ತಿಸೇನನು ಸೋತು ತನ್ನ ಮಗಳಾದ ಸುಶೀಲೆಯನ್ನು ವಿವಾಹವಾಗಿ ಸಂಬಂಧ ಬೆಳೆಸಬೇಕೆಂದು ಪ್ರಾರ್ಥಿಸಿದನು. ಬಾಹುಕನು ತನ್ನ ಮೊದಲ ಪತ್ನಿಯಿಂದ ಮಕ್ಕಳಾಗಿರಲಿಲ್ಲವಾಗಿದ್ದರಿಂದ ಎರಡನೇ ಪತ್ನಿಯಾಗಿ ಇವಳನ್ನು ಸ್ವೀಕರಿಸಲು ಸಮ್ಮತಿಸಿದನು. ಸುಶೀಲೆಗೆ ಅಭಿಮಾನಧರ್ಮವು ಮುಖ್ಯವೆಂದೆಣಿಸಿ ಈ ವಿವಾಹವು ಇಷ್ಟವಿರಲಿಲ್ಲ. ಆದರೆ ಸೂರ್ಯವಂಶವು ಅಳಿದು ಹೋಗುವುದೆಂಬ ವಿಚಾರ ತಿಳಿದಾಗ, ಉತ್ತಮ ವಂಶವನ್ನು ಉದ್ಧಾರ ಮಾಡುವುದು ಸಹ ಪತಿವ್ರತಾಧರ್ಮವೆಂದು ತಿಳಿದು ವಿವಾಹಕ್ಕೆ ಸಮ್ಮತಿಸಿ ಸೂರ್ಯವಂಶವು ಮುಂದುವರೆಯಲು ಕಾರಣವಾದಳು.

**9. ಅನಸೂಯಾ :** ಈಗ ನಡೆಯುತ್ತಿರುವ ವೈವಸ್ವತ ಮನ್ವಂತರದ ಸಪ್ತರ್ಷಿಗಳಲ್ಲಿ ಒಬ್ಬರಾದ ಅತ್ರಿ ಮಹರ್ಷಿಗಳ ಪತ್ನಿಯು. ಕರ್ದಮ ಬ್ರಹ್ಮನ ಪುತ್ರಿಯು. ತಾಯಿ ದೇವಹೂತಿಯು. ಈಕೆಯ ಪಾತಿವ್ರತ್ಯಶಕ್ತಿಯು ತ್ರಿಲೋಕಗಳಲ್ಲೂ ಪ್ರಸಿದ್ಧಿ ಹೊಂದಿದ್ದಿತು. ತ್ರಿಮೂರ್ತಿಗಳಾದ ಬ್ರಹ್ಮಾವಿಷ್ಣು ಮಹೇಶ್ವರರೂ ಸಹ ವಿಸ್ಮಯಗೊಂಡು, ಈಕೆಯ



shrinath.udupa@gmail.com

ತ್ರಿಕರಣಶುದ್ಧಿಯಿಂದ ಕೂಡಿದ್ದ ಪಾತಿವ್ರತ್ಯ ಮಾಹಾತ್ಮೆಯನ್ನು ಲೋಕವಿಖ್ಯಾತ ಮಾಡಲು ನಿಶ್ಚಯಿಸಿ ಪರೀಕ್ಷೆಮಾಡುವ ನೆವದಿಂದ, ಈಕೆಯ ಬಳಿಗೆ ಭಿಕ್ಷಾರ್ಥಿಗಳಾಗಿ ಮಾರುವೇಷದಿಂದ ಬಂದು, ನಿರ್ವಾಣದಲ್ಲಿ ಬಡಿಸಿದರೆ ಮಾತ್ರ ಭಿಕ್ಷೆಯನ್ನು ಸ್ವೀಕರಿಸುವ ತಮ್ಮ ವ್ರತವನ್ನು ತಿಳಿಯಪಡಿಸಲು, ಮಹಾಪತಿವ್ರತೆಯಾದ ಅನುಸೂಯೆಯು ತನ್ನ ಪಾತಿವ್ರತ್ಯಶಕ್ತಿಯಿಂದ, ಆ ಮೂರು ಜನರನ್ನೂ ಎಳೆಯ ಕಂದಗಳನ್ನಾಗಿ ಮಾಡಿ, ತನ್ನ ಅತಿಥಿಸತ್ಕಾರ ಕರ್ತವ್ಯವನ್ನು ಪೂರೈಸಿದಳು. ಅವರೇ ಅನಂತರದಲ್ಲಿ ದತ್ತಾತ್ರೇಯ, ಚಂದ್ರ ಮತ್ತು ದುರ್ವಾಸರೆಂದು ನಾಮಧೇಯವನ್ನು ಹೊಂದಿ ಅತ್ರಿ - ಅನಸೂಯೆಯರ ಮಕ್ಕಳೆಂದು ಪ್ರಸಿದ್ಧರಾದರು. ರಾಮಾಯಣದಲ್ಲಿ ಶ್ರೀರಾಮಚಂದ್ರಮೂರ್ತಿಯು ಸೀತಾದೇವಿಯೊಡನೆ ದಂಡಕಾರಣ್ಯದಲ್ಲಿದ್ದಾಗ ಈಕೆಯು ಸೀತಾದೇವಿಗೆ ಪತಿವ್ರತಾಧರ್ಮದ ಸೂಕ್ಷ್ಮಗಳನ್ನು ಉಪದೇಶಿಸಿದಳು.

**10. ಅರುಂಧತಿ :** ಮಹಾಪತಿವ್ರತೆ ಅನಸೂಯೆಯ ಸಹೋದರಿ. ಪ್ರಸಿದ್ಧರಾದ ಕಪಿಲಮಹರ್ಷಿಗಳ ಸಹೋದರಿಯೂ ಹೌದು. ಮಹಾಪತಿವ್ರತೆಯಾದ ಅರುಂಧತಿಯು ವಸಿಷ್ಠ ಮಹರ್ಷಿಗಳ ಪತ್ನಿಯು. ಶಕ್ತಿ ಮಹರ್ಷಿಯು ಈಕೆಯ ಪುತ್ರ. ಈಕೆಯು ಋಷಿಸಮೂಹಕ್ಕೆ ಧರ್ಮರಹಸ್ಯವನ್ನು ಬೋಧಿಸಿದವಳು. ಸಪ್ತರ್ಷಿಗಳು ಹಿಮಾಲಯದಲ್ಲಿ ನೆಲೆಸಿದ್ದಾಗ, ಒಮ್ಮೆ ಹನ್ನೆರಡು ವರುಷಗಳು ನಿರಂತರವಾಗಿ ಮಳೆಯೇ ಬಾರದಿರಲು, ಮಹಾಪತಿವ್ರತೆ ಅರುಂಧತಿ ದೇವಿಯು ಭಕ್ತಿಯಿಂದ ಶಿವನನ್ನು ಕುರಿತು ತಪಸ್ಸನ್ನಾಚರಿಸಿ, ಮಳೆಯು ಬರುವಂತೆ ಅನುಗ್ರಹವನ್ನು ಪಡೆದು, ಋಷಿಸಮೂಹಕ್ಕೆ ಆಹಾರ ಒದಗುವಂತೆ ಮಾಡಿದಳು (ಭಾರತ). ಸಾಕ್ಷಾತ್ ಅಗ್ನಿದೇವನ ಪತ್ನಿಯಾದ ಸ್ವಾಹಾದೇವಿಯು ಒಂದು ಲೀಲಾಪ್ರಸಂಗದಲ್ಲಿ ಸಪ್ತರ್ಷಿಗಳ ಪತ್ನಿಯರ ರೂಪವನ್ನು ಧರಿಸಲು ಪ್ರಯತ್ನಿಸಿದಾಗ, ಆರು ಪತ್ನಿಯರ ರೂಪಧರಿಸಲು ಸಾಧ್ಯವಾದರೂ, ಮಹಿಮಾನ್ವಿತಳಾದ ಅರುಂಧತೀ ದೇವಿಯ ರೂಪವನ್ನು ಮಾತ್ರ ಧಾರಣೆ ಮಾಡಲಾಗಲಿಲ್ಲ. ಆದ್ದರಿಂದ ಇಂದಿಗೂ ಆರು ಜನ ಸಪ್ತರ್ಷಿ ಪತ್ನಿಯರು ಷಟ್‌ಮಾತೃಕೆಯರು ಎನಿಸಿ ಕೃತ್ತಿಕಾ ನಕ್ಷತ್ರರೂಪದಿಂದ ವಿಜೃಂಭಿಸುತ್ತಿರಲು ಅರುಂಧತೀ ದೇವಿಯು ಮಾತ್ರ ಸಪ್ತರ್ಷಿ ಮಂಡಲದಲ್ಲಿ ವಸಿಷ್ಠ ನಕ್ಷತ್ರದ ಪಕ್ಕದಲ್ಲಿಯೇ ಕಂಗೊಳಿಸುತ್ತಿರುವ ನಕ್ಷತ್ರರೂಪದಲ್ಲಿರುವಳು. ಭಾರತದಲ್ಲಿ ಇಂದಿಗೂ ವಿವಾಹಗಳಲ್ಲಿ ನವದಂಪತಿಗಳಿಗೆ ಆ ಮಹಾಪತಿವ್ರತಾಶಿರೋಮಣಿಯ ದಿವ್ಯದರ್ಶನವನ್ನು ಮಾಡಿಸುವ ಪದ್ಧತಿ ನಡೆದುಬಂದಿದೆ. ದಂಪತಿಗಳು ವಸಿಷ್ಠ-ಅರುಂಧತಿಯರಂತೆ ಬಾಳಲೆಂದು ಹಿರಿಯರು ಆಶೀರ್ವದಿಸುತ್ತಾರೆ.

### ೨೮. ಅಷ್ಟಾದಶೋಪದ್ವೀಪ ವಿರಾಜಿತೇ

ದ್ವಿರಾಪತ್ವಾತ್ ಸ್ಮೃತಾ ದ್ವೀಪಾಃ ಪರ್ವತಶ್ಚೋದಕಾವೃತಾ: ||
ಉದಕಸ್ಯಾಧಾನಂ ಯಸ್ಮಾತ್ ತಸ್ಮಾದುದಧಿರುಚ್ಯತೇ || ವಾಯು. 49. 131

ಎರಡು ಕಡೆ ನೀರಿನಿಂದ ತುಂಬಿದ ಪ್ರದೇಶವು ದ್ವೀಪವೆಂದೂ, ಸುತ್ತಲೂ ಜಲದಿಂದ ಆವೃತವಾದ ಸ್ಥಳವು ಉದಧಿಯೆಂದೂ ಹೇಳಲ್ಪಟ್ಟಿದೆ. ಇಲ್ಲಿ ಅಷ್ಟಾದಶೋಪದ್ವೀಪ ವಿರಾಜಿತೆಯೆಂದೂ, ಪಂಚಾಶತ್ಕೋಟಿಯೋಜನಾ ವಿಸ್ತೀರ್ಣೆಯೆಂದೂ ಪೃಥ್ವಿಯನ್ನು ಸ್ತುತಿಸಿದೆ. ಇದರಿಂದ ಈ ಉಪದ್ವೀಪಗಳು ಭಾರತವಲ್ಲದೇ, ಅನ್ಯ ಪ್ರದೇಶಗಳಿಗೂ ಸೇರಿದ ಭಾಗವೆಂದು ತಿಳಿಯಬಹುದಾಗಿದೆ. ಇಡೀ ಭೂಮಂಡಲದ ಪರಿಚಯವು ಹಿಂದಿನ ಋಷಿಗಳಿಗೆ ಇದ್ದಿತೆಂಬುದಕ್ಕೆ ಈ ವಿಶೇಷಣವು ಸಾಕ್ಷಿಯೆನಿಸಿದೆ. ಉದಾಹರಣೆಗೆ ರಮ್ಯ, ರಮಣಕ, ಪುಷ್ಕರ, ಸಿಂಹಳ, ಲಂಕಾ ಮುಂತಾದ ದ್ವೀಪಗಳು ಭಾರತ ದೇಶಕ್ಕೆ ಹೊರಗಿನ ದ್ವೀಪಗಳೆಂದು ಪುರಾಣಗಳಲ್ಲೇ ವರ್ಣಿತವಾಗಿದೆ. ಶ್ರೀಮದ್‌ಭಾಗವತದಲ್ಲಿ ಉಪದ್ವೀಪಗಳ ಈ ರೀತಿಯಾದ ಉಕ್ತಿಯಿದೆ. ಹಿಂದೆ ಸಗರ ಚಕ್ರವರ್ತಿಯ ಪುತ್ರರು ಯಜ್ಞಾಶ್ವವನ್ನು ಹುಡುಕುತ್ತಾ ಈ ಭೂಮಿಯನ್ನು ನಾಲ್ಕೂ ಕಡೆಗಳಿಂದ ಅಗೆದು ಮಣ್ಣನ್ನು ಸಮುದ್ರಕ್ಕೆ ಹಾಕಿದ್ದಾಗ, ಈ ಉಪದ್ವೀಪಗಳು ಉಂಟಾದವು. ಸ್ವರ್ಣಪ್ರಸ್ಥ, ಚಂದ್ರಶುಲ್ಕ, ಆವರ್ತನ, ರಮಣಕ, ಮಂದಹರಿಣ, ಪಾಂಚಜನ್ಯ, ಸಿಂಹಳ ಮತ್ತು ಲಂಕಾ ಎಂದು ಉಪದ್ವೀಪಗಳು ಜಂಬುದ್ವೀಪದ ಸಮುದ್ರದಲ್ಲಿ ಉಂಟಾದವು. ಈ 18 ಉಪದ್ವೀಪಗಳನ್ನೂ ಗುರುತಿಸುವ ಕಾರ್ಯ ಈಗಲೂ ಮುಂದುವರೆಯುತ್ತಿರುವ ಸಂಶೋಧನೆಯ ಭಾಗವಾಗಿದೆ. (ನೋಡಿ-ಸಪ್ತ ಸಮುದ್ರಗಳು) ಮಹಾಭಾರತ ಮತ್ತು ಪುರಾಣಗಳಲ್ಲಿ ಆ ಕೆಲವು ಉಪದ್ವೀಪಗಳ ವಿವರಣೆ ಮಾತ್ರ ಇಲ್ಲಿ ನೀಡಲಾಗಿದೆ. ಉಪದ್ವೀಪಗಳನ್ನು ಈ ರೀತಿ ವರ್ಣಿಸಲಾಗಿದೆ.

**1. ರಮ್ಯ :** ಅಗ್ನೀಧ್ರ ರಾಜನ ಮಗ ರಮ್ಯಕನೆಂಬುವನು ಆಳಿದ ಭೂಭಾಗ. ಇದು ಶ್ವೇತ ಮತ್ತು ನೀಲ ಪರ್ವತಗಳ ಮಧ್ಯೆ ಇರುವುದು. (ಭಾರತ ಭೀ. 6 ವಿಷ್ಣು 2.1)

**2. ರಮಣಕ :** ಪ್ರಿಯವ್ರತರಾಜನ ಮಗ ಯಜ್ಞಬಾಹುವೆಂಬುವನು ಪಾಲಿಸುತ್ತಿದ್ದ ಭೂಭಾಗ. ಇದು ಶಾಲ್ಮಲೀ ದ್ವೀಪಕ್ಕೆ ಸೇರಿದುದು. (ಭಾಗ. 5.1) (ಇಂದಿನ ಆಸ್ಟ್ರೇಲಿಯ ಖಂಡ) ಶ್ರೀಕೃಷ್ಣನು ಕಾಳಿಯನನ್ನು ಸೋಲಿಸಿ ಈ ದ್ವೀಪಕ್ಕೆ ಕಳುಹಿಸಿದ. ಗರುಡ ಸರ್ಪಗಳನ್ನು ಈ ದ್ವೀಪಕ್ಕೆ ಕಳುಹಿಸಿದ್ದ (ಭಾರತ ಆದಿ. 26). ಕದ್ರುವಿನ ಮಕ್ಕಳಾದ ಸರ್ಪಗಳು ವಾಸಿಸುತ್ತಿದ್ದ ಸ್ಥಳ. ಇದರ ಹಿನ್ನೆಲೆಯು ಭಾಗವತದಲ್ಲಿ ವರ್ಣಿತವಾಗಿದೆ. ಸರ್ಪಗಳಲ್ಲಿ ಪ್ರಮುಖನಾಗಿದ್ದ ಕಾಳಿಯನೆಂಬ ನಾಗನು ಬಹಳ ಅಹಂಕಾರಿಯಾಗಿದ್ದು, ಗರುಡನ ಆಗ್ರಹಕ್ಕೆ ಒಳಗಾಗಿದ್ದನು. ಆತನ ಭಯದಿಂದ ತಪ್ಪಿಸಿಕೊಳ್ಳಲು, ಈ ಉಪದ್ವೀಪದಿಂದ ಪರಿವಾರ ಸಮೇತನಾಗಿ ಪಲಾಯನ ಮಾಡಿ, ಯಮುನಾನದಿಯ ಒಂದು ಆಳವಾದ ಮಡುವಿನ ಬಳಿ ಸೇರಿಕೊಂಡು, ಅಲ್ಲಿಯ ನೀರನ್ನೆಲ್ಲಾ ವಿಷಮಯವನ್ನಾಗಿಸಿ, ಅನೇಕ ಪಶು, ಪಕ್ಷಿ, ಪ್ರಾಣಿಗಳ ಸಾವಿಗೆ ಕಾರಣನಾಗಿ, ನದಿಯೇ ಭಯಂಕರ ಸ್ವರೂಪವಾಗುವ ಹಾಗೆ ಮಾಡಿದ್ದನು. ಕಾರಣಾಂತರದಿಂದ ಗರುಡನು ಸೌಭರಿಯೆಂಬ ಮಹರ್ಷಿಯ ಆಗ್ರಹಕ್ಕೆ ಒಳಗಾಗಿ, ಈ ಸ್ಥಳಕ್ಕೆ ಬರುತ್ತಿರಲಿಲ್ಲ. ಈ ಸಂದರ್ಭವನ್ನು ಉಪಯೋಗಿಸಿಕೊಂಡು ಕಾಳಿಯನು ಈ ಸ್ಥಳದಲ್ಲಿ ವಾಸಿಸಿಕೊಂಡು,



shrinath.udupa@ gmail.com

ಅಹಂಕಾರದಿಂದ ಮೆರೆಯುತ್ತಾ ಪಾಪಿಷ್ಠನಾಗಿದ್ದನು. ದುಷ್ಟ ಶಿಕ್ಷಕನಾದ ಶ್ರೀ ಕೃಷ್ಣಪರಮಾತ್ಮನು ಸಕಲ ಜೀವಿಗಳನ್ನು ಈ ತೊಂದರೆಯಿಂದ ಕಾಪಾಡಲು, ಕಾಳಿಯನೊಂದಿಗೆ ಸೆಣಸಿ ಆತನ ಅಹಂಕಾರವನ್ನು ಮುರಿದು, ತನ್ನ ಪವಿತ್ರವಾದ ಪಾದಗಳ ಚಿಹ್ನೆಯನ್ನು ಆತನ ತಲೆಯ ಮೇಲೆ ಮೂಡುವಂತೆ ಅನುಗ್ರಹಿಸಿ, ಇನ್ನು ಮುಂದೆ ಗರುಡನ ಭಯವು ಇರುವುದಿಲ್ಲವೆಂದು ತಿಳಿಸಿ, ಮತ್ತು ಆತನ ಮೂಲಸ್ಥಾನವಾದ ರಮಣಕ ದ್ವೀಪಕ್ಕೆ ಕಳುಹಿಸುವುದರ ಮೂಲಕ ಸಕಲರನ್ನು ಕಾಪಾಡಿದನು.

**3. ದ್ವಾರಕಾದ್ವೀಪ :** ದ್ವಾರಕನಗರದಿಂದ (ನೋಡಿ- ಸಪ್ತ ಮೋಕ್ಷಪುರಿಗಳು) ಈ ದ್ವೀಪವು 18 ಮೈಲು ದೂರದಲ್ಲಿದೆ. ಇದರ ಸಮೀಪದಲ್ಲಿ ಗೋಪೀತಲಾದವೆಂಬ ಪುಣ್ಯ ಕ್ಷೇತ್ರವಿದ್ದು, ಅಲ್ಲಿ ಶುಭ್ರವಾದ ಗೋಪೀ ಚಂದನವು ದೊರೆಯುವುದು. ಇದರಲ್ಲಿ ಶ್ರೀಕೃಷ್ಣಸ್ವರೂಪವಾದ ಚಕ್ರಾಯುಧದ ಗುರುತುಗಳಿರುತ್ತವೆ. ಈ ಸ್ಥಳದಲ್ಲಿ ಗೋಪಿಕಾಸ್ತ್ರೀಯರು ಶ್ರೀಕೃಷ್ಣ ಪರಮಾತ್ಮನ ವಿಯೋಗವನ್ನು ತಡೆಯಲಾರದೆ ತಮ್ಮ ಪಾರ್ಥಿವ ಶರೀರಗಳನ್ನು ತ್ಯಜಿಸಿದರೆಂದು ಹೇಳಲಾಗಿದೆ.

**4. ಸಿಂಹಳ :** ರಾಮಾಯಣದ ಪ್ರಕಾರ ಇದರ ಉದ್ದವು 800 ಮೈಲುಗಳಿದ್ದವು. ಇಂದಿನ ಸಿಲೋನ್ ಅಥವಾ ಶ್ರೀಲಂಕಾ ದ್ವೀಪವು, ಹಿಂದಿನ ಬೃಹತ್ತಾದ ಸಿಂಹಳ ದ್ವೀಪದ ಭಾಗವು. ಲಂಕೆಯು ಇದರಲ್ಲಿ ಒಂದು ಭಾಗವು. ಹಿಂದೂ ಭೂಗೋಳಶಾಸ್ತ್ರದಂತೆ ಈ ದ್ವೀಪವು ಭೂಮಿಯ (0$^{o}$ಅಕ್ಷಾಂಶ) ಸಮಭಾಜಕ ವೃತ್ತದ ಮೇಲಿದೆಯೆಂಬ ಉಲ್ಲೇಖವಿದೆ. ಈಗ ಕಾಣಸುತ್ತಿರುವ ಶ್ರೀಲಂಕಾ ದ್ವೀಪವು ಉತ್ತರ ಅಕ್ಷಾಂಶ 8$^{o}$ಯಲ್ಲಿರುವುದರಿಂದ, ಮಿಕ್ಕ ಭಾಗಗಳು ಸಮುದ್ರದಲ್ಲಿ ಮುಳುಗಡೆಯಾಗಿರುವುದೆಂಬುದು ಸ್ಪಷ್ಟವಾದ ವಿಚಾರವಾಗಿದೆ. (ನೋಡಿ - ಷಟ್ಪಂಚಾಶತ್ ದೇಶಗಳು)

**5. ಮಲಯಾಶ್ವ :** ಒಂದು ಉಪಪರ್ವತ, ಸುತ್ತಲೂ ನೀರಿನಿಂದ ಆವೃತವಾದ ಸ್ಥಳ. ಪಶ್ಚಿಮಘಟ್ಟಗಳಿಗೆ ಸೇರಿದ್ದು, ಕೃತಮಾಲ, ತಾಮ್ರ, ಉತ್ಪಲಾವತಿ, ಪುಷ್ಪಜಾ ಮೊದಲಾದ ನದಿಗಳು ಹುಟ್ಟುತ್ತವೆ. (ಮತ್ಸ್ಯ 114)

**6. ಗೋಭಿಲ :** ಪ್ಲಕ್ಷ ದ್ವೀಪಕ್ಕಿರುವ ಮತ್ತೊಂದು ಹೆಸರು. ಇಲ್ಲಿ ಗೋಮೇಧವೆಂಬ ಗಿರಿಯಿರುವುದರಿಂದ ಈ ದ್ವೀಪಕ್ಕೆ ಈ ಹೆಸರೂ ಸಹ ಅನ್ವಯವಾಗುತ್ತದೆ. (ವಾಯು. 49)

**7. ಅವಂತಿ :** ನೋಡಿ - ಷಟ್ಪಂಚಾಶತ್ ದೇಶಗಳು

**8. ಪುಷ್ಕರ :** (i) ದಧಿ ಸಮುದ್ರದಿಂದ ಬಳಸಲ್ಪಟ್ಟಿರುವ ದೇಶ. ಇಲ್ಲಿ ಪುಷ್ಕರವೆಂಬ ಪರ್ವತವಿರುವುದರಿಂದ ಈ ಹೆಸರು. ಇಲ್ಲಿ ಸ್ವಯಂ ಬ್ರಹ್ಮದೇವರ ಆವಿರ್ಭಾವವಿದ್ದು ದೇವತೆಗಳು ಬ್ರಹ್ಮದೇವರನ್ನು ಉಪಾಸಿಸುತ್ತಿರುವ ಸ್ಥಳ. (ಭಾರತ -12) (ii) ಪ್ರಿಯವ್ರತರಾಜನ ಮಗ ವೀತಿಹೋತ್ರನೆಂಬುವನು ಆಳುತ್ತಿದ್ದ ದೇಶ. ಈ ದ್ವೀಪದಲ್ಲಿ ಮಾನಸವೆಂಬ ಪರ್ವತವೂ ಸಹ ಇದೆ. (ವಿಷ್ಣು 2.4).

**9. ಋಷಭ :** ಬೆಟ್ಟ ಪ್ರದೇಶ. ಇಲ್ಲಿ ಶಾಂಡಿಲಿ ಎಂಬ ಬ್ರಾಹ್ಮಣಿ ತಪಸ್ಸು ಮಾಡಿದಳು. (ಭಾರತ ವನ. 113). ಪ್ಲಕ್ಷ ದ್ವೀಪಕ್ಕೆ ಸೇರಿದ ಉಪದ್ವೀಪ. ಈ ಸ್ಥಳದಲ್ಲಿಯೇ ವರಾಹ ರೂಪದಿಂದ ಪರಮಾತ್ಮನು ಅವತರಿಸಿ ಹಿರಣ್ಯಾಕ್ಷ ರಾಕ್ಷಸನನ್ನು ಸಂಹರಿಸಿದನು. (ವಾಯು 49)

**10. ರೈವತ :** ದ್ವಾರಕಾಸಮೀಪದಲ್ಲಿರುವ ಒಂದು ಪರ್ವತ ಪ್ರದೇಶ. ತೀರ್ಥಯಾತ್ರಾ ಸಮಯದಲ್ಲಿ ಅರ್ಜುನನು ಇಲ್ಲಿ ಬಂದಿದ್ದ. (ಭಾರತ ಆದಿ 238-239). ಶ್ರೀಕೃಷ್ಣನು ಉದಂಕಮುನಿಗೆ ವರಪ್ರದಾನ ಮಾಡಿದ ಸ್ಥಳ. (ಭಾರತ ಅಶ್ವ. 59)

**11. ಲಂಕಾ :** ಲಂಕೆಯು ಧನುಷ್ಕೋಟಿಯಿಂದ 100 ಯೋಜನ(800 ಮೈಲು) ದೂರದಲ್ಲಿರುವುದು. (ವಾ. ರಾಮಾ). ಭೂಗೋಳ ಶಾಸ್ತ್ರದಂತೆ ಈ ಸ್ಥಳವು ಭೂಮಿಯ ಸಮಭಾಜಕ ವೃತ್ತದ ಮೇಲಿದೆಯೆಂದು ಉಲ್ಲೇಖಿಸಲ್ಪಟ್ಟಿದೆ. ಆದ್ದರಿಂದ ಇಂದಿನ ಶ್ರೀಲಂಕಾ (CEYLON) ದ್ವೀಪದ ವೃದ್ಧಿಸಿದ ಭಾಗದಲ್ಲಿ ಪುರಾಣಲಂಕೆಯಿದ್ದಿತೆಂದು ನಿರ್ಣಯಿಸಲ್ಪಟ್ಟಿದೆ. ಅಂದಿನ ಲಂಕೆಯು 800 ಮೈಲು ಉದ್ದವಿರುವ ದ್ವೀಪವೆಂದು ಉಲ್ಲೇಖವಿದೆ. ಗಾರ್ಗ್ಯ ಸಂಹಿತೆಯಂತೆ ಲಂಕೆಯು ಹಿಂದೂಮಹಾಸಾಗರದಲ್ಲಿ (ದಕ್ಷಿಣ ಸಮುದ್ರ) ಮುಳುಗಿಹೋಗಿದೆ. ಕುಬೇರ, ರಾವಣಾಸುರ, ವಿಭೀಷಣಾದಿಗಳಿಂದ ಆಳಲ್ಪಟ್ಟ ರಾಜ್ಯ. ಈ ದ್ವೀಪವು ಸುವರ್ಣಮಯವಾದ ಕೋಟೆ ಕೊತ್ತಲಗಳಿಂದ ಕೂಡಿ, ಅನೇಕ ಅರಮನೆಗಳಿಂದ ವಿರಾಜಿಸುತ್ತಿತ್ತು (ವಾಯು ಪು.) ಈ ದ್ವೀಪದ ಪೂರ್ವ ಭಾಗದಲ್ಲಿ ಗೋಕರ್ಣನಾಮಕವಾದ ಪರಮೇಶ್ವರನ ದೇವಾಲಯವಿರುವುದು. ಭೌಗೋಳಿಕವಾಗಿ ಭಾರತ ದೇಶದ ಭಾಗವೇ ಆಗಿದ್ದ ಲಂಕಾ ಪ್ರದೇಶವು 10,000 ವರ್ಷಗಳಿಂದ ಹಿಂದೆ ಬೇರ್ಪಟ್ಟು ದ್ವೀಪವಾಯಿತೆಂದೂ ಸಹ ಕೆಲವರ ಅಭಿಮತವಿದೆ. (South Asian handbook - 1992).

**12. ಕೃತಮಾಲಾ :** ಕೃತಮಾಲಾ ಎಂಬ ನದಿಯು ಮಲಯ ಪರ್ವತದಲ್ಲಿ ಹುಟ್ಟುವುದು (ಮತ್ಸ್ಯ 114). ಈ ನದಿಯಿಂದ ಬಳಸಲ್ಪಟ್ಟ ಒಂದು ಚಿಕ್ಕ ಉಪದ್ವೀಪ.

**೨೯. (ಪಂಚಾಶತ್ಕೋಟಿಯೋಜನವಿಸ್ತೀರ್ಣೇ)**

ಇಲ್ಲಿ ಉಲ್ಲೇಖಿಸಿರುವ ಹದಿನೆಂಟು ಉಪದ್ವೀಪಗಳಲ್ಲದೆ, ಅನೇಕ ಭೂಪ್ರದೇಶಗಳನ್ನೊಳಗೊಂಡ ಪೃಥ್ವಿಯನ್ನು ಪಂಚಾಶತ್ಕೋಟಿಯೋಜನಾ ವಿಸ್ತೀರ್ಣ ಉಳ್ಳದ್ದೆಂದು ವರ್ಣಿಸಲ್ಪಟ್ಟಿದೆ.

**ಪಂಚಾಶತ್ಕೋಟಿ ವಿಸ್ತಾರಾ ಸೇಯಮುರ್ವೀ ಮಹಾಮುನೇ ।**
**ಸಹ್ಯಾವಾಂಡ ಕಟಾಹೇನ ಸದ್ವೀಪಾಬ್ಧಿಮಹೀಧರಾ ॥**

ಗೋಳಾಕಾರದ ಬೃಹತ್ ಮಂಡಲಗಳಿಂದ ತುಂಬಿರುವ ಈ ಬ್ರಹ್ಮಾಂಡವೆಂಬ ಕಟಾಹದಲ್ಲಿರುವ ಸಮಸ್ತ ದ್ವೀಪ ಸಮುದ್ರ ಪರ್ವತಗಳಿಂದ ಒಡಗೂಡಿದ ಈ ಭೂಮಂಡಲವು ಐವತ್ತು ಕೋಟಿ ಯೋಜನ ವಿಸ್ತಾರವಾದದ್ದು. (ವಿಷ್ಣು ಪುರಾಣ 2-14-97)



shrinath.udupa@gmail.com

**೩೦. (ಅಸ್ಮಿನ್ ಭೂಮಂಡಲೇ ...... ಪಾರಿಜಾತಾದ್ಯನೇಕಾನೇಕ ನಿವಹ ...... ದಿವ್ಯಜನ ನಿವಾಸ ಸಮಲಂಕೃತೇ)**

ಅನೇಕಾನೇಕ ಗಿಡ, ಬಳ್ಳಿ, ವೃಕ್ಷಗಳಿಂದ ಕೂಡಿರುವ ಮನೋಹರವಾದ ಕ್ರೀಡಾವನಗಳನ್ನು ವಿಹಾರಕ್ಕಾಗಿ ಹಾಗೂ ನಂದನವನವನ್ನು ನಿವಾಸವನ್ನಾಗಿ ಹೊಂದಿರುವ ದಿವ್ಯಜನ ಗಳೆಂಬುವರಿಂದ ಈ ಭೂಮಂಡಲವು ಅಲಂಕೃತವಾಗಿದೆಯೆಂದು ಇಲ್ಲಿ ವರ್ಣಿತವಾಗಿದೆ. ಆಯುರ್ವೇದ ಶಾಸ್ತ್ರವನ್ನು ಅವಲೋಕಿಸಿದವರಿಗೆ ಭಾರತೀಯರ ಅಗಾಧವಾದ ವನೌಷಧಿಗಳ ಜ್ಞಾನದ ಬಗ್ಗೆ ಅರಿವು ಮೂಡುವುದು. ಮಹಾಸಂಕಲ್ಪದಲ್ಲಿ ಪ್ರಾಸಬದ್ಧವಾದ ಸಾಹಿತ್ಯರಚನೆಯ ದೃಷ್ಟಿಯಿಂದ ನಿರೂಪಿತವಾಗಿರುವ ಈ ಸಣ್ಣ ಪಟ್ಟಿಯು ಅದರ ಸಾಗರದಷ್ಟು ಜ್ಞಾನಕ್ಕೆ ಒಂದು ಮಾದರಿಯಾಗಿದೆ. ದಿವ್ಯಜನಗಳೆಂಬುವವರು ದಕ್ಷ ಪ್ರಜಾಪತಿಯ ಪುತ್ರಿಯರಿಂದ ಉತ್ಪನ್ನರಾದವರೆಂದು ಹೇಳಲ್ಪಟ್ಟಿದೆ. ದಕ್ಷ ಪ್ರಜಾಪತಿಯು ತನ್ನ 60 ಜನ ಪುತ್ರಿಯರಲ್ಲಿ, 10 ಜನರನ್ನು ಧರ್ಮದೇವತೆಗೂ, 13 ಜನರನ್ನು ಕಶ್ಯಪರಿಗೂ, 27 ಜನರನ್ನು ಚಂದ್ರದೇವತೆಗೂ, ಇಬ್ಬಿಬ್ಬರನ್ನು (ಅಂದರೆ 6 ಜನರನ್ನು) ಕ್ರಮವಾಗಿ ಭೂತಾ, ಅಂಗಿರಾ ಮತ್ತು ಕೃಶಾಶ್ವರೆಂಬ ಋಷಿಗಳಿಗೂ; ಉಳಿದ 4 ಜನರನ್ನು ತ್ರ್ಯಕ್ಷನೆಂಬ ಹೆಸರಿನ ಕಶ್ಯಪ ಋಷಿಗೂ ಕೊಟ್ಟು ವಿವಾಹವನ್ನು ಮಾಡಿ, ಪ್ರಜಾಸೃಷ್ಟಿಗೆ ಕಾರಣರಾಗಬೇಕೆಂದು ಅವರುಗಳಿಗೆ ತಿಳಿಸಿದನು (ಭಾಗವತ 6-6). ಆದ್ದರಿಂದಲೇ ದಕ್ಷಪುತ್ರಿಯರು ಲೋಕಮಾತೆಯರೆಂದು ಪ್ರಸಿದ್ಧರಾದರು. ಇಡೀ ಸೃಷ್ಟಿಯು ಮುಂದುವರೆದಿರುವುದು ಇವರುಗಳಿಂದಲೇ. ಈ ದಿವ್ಯಜನರು ದಿವ್ಯದೃಷ್ಟಿಗೆ ಮಾತ್ರ ಗೋಚರಿಸತಕ್ಕಂತಹವರು. ಇವರುಗಳ ವಿವರಣೆಯು ಈ ರೀತಿ ಹೇಳಲ್ಪಟ್ಟಿದೆ.

**1. ದೇವತೆಗಳು :** ವೇದಗಳಲ್ಲಿ ಮುಖ್ಯವಾದ ದೇವತೆಗಳು 33 ಎಂದು ಉಕ್ತವಾಗಿದೆ. 33 ಕೋಟಿ ದೇವತೆಗಳೆನಿಸಿಕೊಂಡಿರುವವರೆಲ್ಲರೂ ಇವರಲ್ಲಿಯೇ ಅಂತರ್ಗತರಾಗಿರುತ್ತಾರೆ. ಇವರುಗಳು - ಧರ್ಮದೇವತೆಯಿಂದ ವಸು ಎಂಬವಳಿಗೆ ಜನಿಸಿದ ಅಷ್ಟವಸುಗಳು (8), 'ಭೂತಾ' ಎಂಬ ಋಷಿಯಿಂದ ಸರೂಪೆ ಎಂಬುವಳಿಗೆ ಜನಿಸಿದ ಏಕಾದಶರುದ್ರರೂ (11), ಕಶ್ಯಪ ಮಹರ್ಷಿಗಳಿಂದ ಅದಿತಿಗೆ ಜನಿಸಿದ ದ್ವಾದಶಾದಿತ್ಯರು (12), ಇಂದ್ರ ಮತ್ತು ಪ್ರಜಾಪತಿ ಇವರುಗಳು ದೇವತೆಗಳೆಂದು ಪ್ರಸಿದ್ಧರಾಗಿರುವರು. (ಹೆಚ್ಚಿನ ವಿವರಗಳಿಗೆ ಭಾಗವತ 6-6)

**2. ದಾನವರು :** ಕಶ್ಯಪಮಹರ್ಷಿಗಳಿಂದ 'ದನು' ಎಂಬುವಳಿಗೆ ಜನಿಸಿ ದಾನವರೆಂದಾದರು. ಇವರುಗಳು ಯಾವಾಗಲೂ ದೇವತೆಗಳನ್ನು ವಿರೋಧಿಸುವವರು. ಇವರಲ್ಲಿ 34 ಮಂದಿ ಪ್ರಮುಖರು (ಭಾರತ - ಆದಿ 66)

**3. ಗರುಡ :** ತಾರ್ಕ್ಷ್ಯನೆಂಬ ಹೆಸರಿನ ಕಶ್ಯಪ ಮಹರ್ಷಿಗಳಿಂದ 'ವಿನತಾ' ಎಂಬುವಳಿಗೆ ಜನಿಸಿದವನು ಮತ್ತು ಸಕಲ ಪಕ್ಷಿಗಳ ಕುಲಕ್ಕೆ ರಾಜನು. ಈತನು ಪರಮಾತ್ಮನಾದ ವಿಷ್ಣುವಿಗೆ ವಾಹನವೆನಿಸಿ ಗರುಡ ದೇವನೆಂದು ಪ್ರಸಿದ್ಧಿ ಹೊಂದಿರುವನು.

**4. ಗಂಧರ್ವ :** ಕಶ್ಯಪ ಮಹರ್ಷಿಗಳಿಂದ 'ಅರಿಷ್ಟಾ' ಎಂಬುವಳಿಗೆ ಜನಿಸಿದವರು (ಭಾಗವತ). ಭಾರತದ ಆದಿ ಪರ್ವದಲ್ಲಿ, ಗಂಧರ್ವರು ಮೂರು ಬಗೆಯೆಂದೂ ಇವರಲ್ಲಿ 16 ಮೌನ ದೇವಗಂಧರ್ವರೆಂಬುವರು 'ಮುನಿ' ಎಂಬುವಳಿಂದಲೂ 10 ಪ್ರಾಧೇಯ ದೇವ ಗಂಧರ್ವರು 'ಪ್ರಾಧಾ' ಎಂಬುವಳಿಂದಲೂ 4 ದೇವಗಂಧರ್ವರೆಂಬುವರು 'ವಿಶ್ವಾ' ಎಂಬುವಳಿಂದಲೂ ಉತ್ಪನ್ನರಾದರೆಂದು ವಿವರಿಸಲ್ಪಟ್ಟಿದೆ.

ವಿವಿಧ ಸಂಗ್ರಹಗಳಲ್ಲಿ ಉಕ್ತವಾಗಿರುವಂತೆ, ಗಂಧರ್ವರು ದೇವವರ್ಗಕ್ಕೆ ಸೇರಿದವರು. ವೇದಗಳ ಪ್ರಕಾರ, ಆಕಾಶದಲ್ಲಿ ವಾಸಿಸುತ್ತಾ, ಸೋಮರಸವನ್ನು ರಕ್ಷಿಸುವ ವಿಶ್ವಾವಸು, ಚಂದ್ರದೇವತೆ, ಸೃಷ್ಟಿಯಲ್ಲಿ ಪ್ರಥಮ ಪ್ರಜೆಗಳಾದ ಯಮ-ಯಮಿಯರ ತಂದೆ, ಇವರೆಲ್ಲರೂ ಗಂಧರ್ವರೇ. ವಿವಾಹ ಸಂದರ್ಭಗಳಲ್ಲಿ ಗಂಧರ್ವರನ್ನು ಆಹ್ವಾನಿಸಿ ಪೂಜಿಸುವ ಪದ್ಧತಿಯೂ ಇದೆ. ಋತುಮತಿಯರಾದ ಕನ್ಯೆಯರು ಇವರ ಅಧೀನ. ಅಪ್ಸರೆಯರನ್ನು ಗಂಧರ್ವಸ್ತ್ರೀಯರೆಂದು ಹೇಳಿದೆ. ಕ್ಷತ್ರಿಯವರ್ಗದಲ್ಲಿ ಗಾಂಧರ್ವ ವಿವಾಹವೆಂಬುದು ಪ್ರಸಿದ್ಧವು. ಅನೇಕ ವಿಧವಾಗಿ ಇವರುಗಳನ್ನು ವರ್ಣಿಸಲಾಗಿದೆ.

**5. ಕಿನ್ನರ ಮತ್ತು ಕಿಂಪುರುಷ :** ಇವರುಗಳು ಪುಲಸ್ತ್ಯ ಮಹರ್ಷಿಗಳಿಂದ ಜನಿಸಿದವರೆಂದು (ಭಾರತ - ಆದಿ) ಹೇಳಲ್ಪಟ್ಟಿದೆ. ಕೆಲವಡೆ ಇವರುಗಳು ಕಶ್ಯಪ ಸಂತಾನವೆಂದು ತಿಳಿಸಿದೆ. ಕೆಲವು ಪುರಾಣಗಳ ಪ್ರಕಾರ ಬ್ರಹ್ಮನ ಕಾಲ್ಬೆರಳುಗಳಿಂದ ಉತ್ಪನ್ನರಾದವರು. ಇವರೂ ಸಹ ದೇವತೆಗಳ ಪಂಗಡದವರೆಂದೇ ಪ್ರಸಿದ್ಧವು. ಕಿನ್ನರರ ದೇಹವು ಮನುಷ್ಯರಂತೆಯೇ ಆದರೂ ಮುಖವು ಮಾತ್ರ ಕುದುರೆಯಂತೆ; ಮತ್ತು ಕಿಂಪುರುಷರ ದೇಹವು ಕುದುರೆಯಂತೆ, ಆದರೆ ಮುಖವು ಮಾತ್ರ ಮನುಷ್ಯರಂತೆ ಎಂಬುದಾಗಿ ವಿವರಿಸಲ್ಪಟ್ಟಿದೆ. ಇವರು ಕುಬೇರ ದೇವತೆಯ ಅನುಯಾಯಿಗಳು ಮತ್ತು ಸೇವಕರೂ ಆಗಿರುತ್ತಾರೆ. ಇವರ ವಾಸಸ್ಥಾನವು ಜಂಬೂ ದ್ವೀಪದ ನವ ವರ್ಷಗಳಲ್ಲಿ ಕಿಂಪುರುಷ ವರ್ಷವೆಂಬುದು. ಇವರುಗಳ ಬಗ್ಗೆ ಪ್ರಪಂಚದ ಬೇರೆ ಬೇರೆ ಸಂಸ್ಕೃತಿಗಳಲ್ಲೂ ಸಹ ನಂಬಿಕೆಯಿದೆ. (ವಿವರಗಳಿಗೆ - ಕನ್ನಡ ಜಾನಪದ ಕೋಶ)

**6. ಸಿದ್ಧ :** ಕಶ್ಯಪ ಮಹರ್ಷಿಗಳಿಂದ 'ದನಾಯು' ಎಂಬವಳಿಗೆ ಜನಿಸಿದವರು. ದೇವತೆಗಳ ಒಂದು ವರ್ಗಕ್ಕೆ ಸೇರಿದವರು.

**7. ಸಾಧ್ಯ :** ದೇವತೆಗಳ ವರ್ಗಕ್ಕೆ ಸೇರಿದ ಇವರು 12 ಜನ. ಧರ್ಮದೇವತೆಯ ಪತ್ನಿಯರಲ್ಲಿ 'ಸಾಧ್ಯಾ' ಎಂಬವಳಿಂದ ಉತ್ಪನ್ನರಾದವರು. ಸಿದ್ಧಿ ಪಡೆದವರೆಂದು ವಿವರಿಸಲ್ಪಟ್ಟಿದೆ. ಇವರ ಹೆಸರುಗಳು ಕ್ರಮವಾಗಿ - ಮನು, ಮಂತ್ರ, ಪ್ರಾಣದಾ, ಚೇತನಾಯ, ವೀರ್ಯವಂತ, ವಿತ್ತಿ, ಜಯ, ನಮ, ಹಂಸ, ನಾರಾಯಣ, ಪ್ರಭವ ಮತ್ತು ವಿಧು ಎಂಬುದಾಗಿದೆ. (ವಾಯು. ಪು.). ಇವರು ದೇವಗಣಗಳೆಂಬ ಹೆಸರಿನಿಂದ ಪ್ರಸಿದ್ಧರು.



**8. ವಿದ್ಯಾಧರ :** ಇವರುಗಳನ್ನು ಅರ್ಧ ದೇವತೆಗಳೆಂದು ಪರಿಗಣಿಸಿದೆ. ಕಶ್ಯಪ ಸಂತಾನವೆಂದೇ ಪರಿಗಣಿಸಲ್ಪಟ್ಟಿದೆ. ಇವರು ಹೂಮಾಲೆಗಳಿಂದ ಅಲಂಕರಿಸಲ್ಪಟ್ಟಿರುತ್ತಾರೆ. ಭೂಮಿ ಮತ್ತು ಆಕಾಶಗಳ ಮಧ್ಯ ಪ್ರದೇಶದಲ್ಲಿ ವಾಸಿಸುತ್ತಾರೆ. ಧರ್ಮಶೀಲರಾದ ಅತಿಮಾನುಷ ಜೀವಿಗಳ ಒಂದು ಪಂಗಡ. ಇವರು ಅನೇಕ ವಿಧವಾಗಿ ರೂಪಾಂತರಹೊಂದತಕ್ಕವರು. ಜನಮೇಜಯನ ಸರ್ಪಯಾಗದಲ್ಲಿ ಮಂತ್ರಗಳಿಂದ ಆಕರ್ಷಿಸಲ್ಪಟ್ಟ ಇಂದ್ರನು ಅಲ್ಲಿಗೆ ಬಂದಾಗ, ಅವನ ಹಿಂದೆ ವಿದ್ಯಾಧರರೂ ಹೋದರೆಂದು ಮಹಾಭಾರತದ ಆದಿಪರ್ವದಲ್ಲಿ ಉಲ್ಲೇಖವಾಗಿದೆ.

**9. ಯಕ್ಷ :** ಇವರೂ ಸಹ ಅರ್ಧ ದೇವತೆಗಳು. ಸೃಷ್ಟ್ಯಾದಿಯಲ್ಲಿ ಚತುರ್ಮುಖ ಬ್ರಹ್ಮನು ಮೊದಲು ಉದಕವನ್ನು ಸೃಷ್ಟಿಸಿ, ಅನಂತರ ಅವುಗಳ ರಕ್ಷಣೆಗಾಗಿ ಕೆಲವು ಪ್ರಾಣಿಗಳನ್ನು ಸೃಷ್ಟಿಸಿದನು. ಅವುಗಳಲ್ಲಿ ಕೆಲವರು ಜಕ್ಷ (ತಿನ್ನು) ಎಂದರು; ಮತ್ತೆ ಕೆಲವರು ರಕ್ಷ(ಕಾಪಾಡು) ಎಂಬುದಾಗಿ ಹೇಳಿದರು. ಆಗ ಬ್ರಹ್ಮನು 'ಜಕ್ಷ' ಎಂದವರನ್ನು ಯಕ್ಷರೆಂತಲೂ 'ರಕ್ಷ' ಎಂದವರನ್ನು ರಾಕ್ಷಸರೆಂತಲೂ ಕರೆದನು (ರಾಮಾ-ಉತ್ತರ 4, ಭಾರತ -ಸಭಾ10); ಕುಬೇರನು ಕಾವೇರೀ ನರ್ಮದಾ ನದಿಗಳ ಸಂಗಮ ಸ್ಥಳದಲ್ಲಿ ಶಿವನನ್ನು ಕುರಿತು ತಪಸ್ಸನ್ನಾಚರಿಸಿ ಯಕ್ಷ ರಾಜ್ಯವನ್ನು ಪಡೆದ (ಮತ್ಸ್ಯ). ಉತ್ತರ ದಿಕ್ಕಿನಲ್ಲಿ ಕುಬೇರನ ರಾಜ್ಯವಿದ್ದು, ಯಕ್ಷರು ಅಲ್ಲಿನ ಪ್ರಜೆಗಳೆಂಬ ವಿವರಣೆಯಿದೆ. ಇಲ್ಲಿಗೆ ಅಲಕಾವತಿಯೆಂದು ಹೆಸರು. ಪುಲಸ್ತ್ಯರಿಂದ ಇವರು ಉತ್ಪನ್ನರಾದರೆಂದು ಹೇಳಿದೆ (ಭಾರತ -ಆದಿ) (ಉತ್ತರ ಭಾರತದಲ್ಲೂ ಕಾವೇರಿಯೆಂಬ ಒಂದು ಪ್ರಸಿದ್ಧ ನದಿ ಇತ್ತು)

**10. ರಾಕ್ಷಸರು :** ಕಶ್ಯಪ ಮಹರ್ಷಿಗಳಿಂದ "ಕ್ರೂರ" ಎಂಬುವಳಲ್ಲಿ ಜನಿಸಿದವರು. (ಭಾರತ -ಆದಿ). ಕೃತಯುಗಾರಂಭದಲ್ಲಿ ಬ್ರಹ್ಮದೇವರು ವೇದಗಳನ್ನು ಪಠಿಸುತ್ತಿರಲು, ವಿಪರೀತವಾದ ಹಸಿವೆಯಿಂದ ಬಳಲಿದಾಗ ಉತ್ಪನ್ನವಾದ ಸಿಟ್ಟಿನಿಂದ ಇವರುಗಳ ಜನನವಾಯಿತು. (ರಾಮಾ) ಇವರು ಸ್ವಭಾವದಿಂದ ಯಾವಾಗಲೂ ಗೋವು ಮತ್ತು ಬ್ರಾಹ್ಮಣರನ್ನು ದ್ವೇಷಿಸುವರು. ಪ್ರಹೇತಿ ಮತ್ತು ಹೇತಿ ಎಂಬುವರು ಮೊದಲು ಹುಟ್ಟಿದ ರಾಕ್ಷಸರು. ನಂತರ ಇವರ ವಂಶದಲ್ಲಿ ಸುಮಾಲಿ ಮತ್ತು ಮಾಲಿ ಎಂಬವರು ಪ್ರಮುಖರು. ಈ ವಂಶದಲ್ಲೇ ಹುಟ್ಟಿದ ರಾವಣಾಸುರನು ಲಂಕೆಯನ್ನು ಕುಬೇರನಿಂದ ಕಸಿದುಕೊಂಡು ಕೊನೆಗೆ ಶ್ರೀರಾಮಚಂದ್ರನಿಂದ ಹತನಾದನು. ಆದರೂ ಇಂತಹ ರಾಕ್ಷಸವಂಶದಲ್ಲಿ ಜನಿಸಿದ ವಿಭೀಷಣನು ವಿಷ್ಣುಭಕ್ತನಾಗಿ, ಚಿರಂಜೀವಿಯಾಗಿ ಇಂದಿಗೂ ದಿವ್ಯ ರೂಪದಲ್ಲಿ ಇರುವನೆಂದು ಹೇಳಲ್ಪಟ್ಟಿದೆ. ರಾಕ್ಷಸರ ವಂಶದಲ್ಲಿ ಜನಿಸಿದ ಪ್ರಹ್ಲಾದನೂ ಹಾಗೆಯೇ ವಿಷ್ಣುಭಕ್ತನಾಗಿ ಪ್ರಸಿದ್ಧನಾದನು. ಭಾಗವತದಲ್ಲಿ 'ದಿತಿ'ಯೆಂಬುವಳಿಗೆ ದೈತ್ಯರೆಂಬುವರು ಜನಿಸಿದರೆಂದೂ ರಾಕ್ಷಸರು ಈ ಗುಂಪಿನವರೆಂದೂ ಉಕ್ತವಾಗಿದೆ.

ಇಂತಹ ದಿವ್ಯಜನಗಳಿಗೆ ಆಶ್ರಯಸ್ಥಾನವಾದ ಪೃಥ್ವಿಯನ್ನು ಇಲ್ಲಿ ಸ್ಮರಿಸಲಾಗಿದೆ.

shrinath.udupa@gmail.com

೩೧. (ಬಿಂದು ಮುಕುಂದ ..... ಕೇಸರ ಶಿಖರಿ ವಿಸರಭಾಸುರ ಮೇರುಧರಾಧರಸ್ಯ)

ಪೃಥ್ವಿಗೆ ಕೇಂದ್ರ ಸ್ಥಾನದಲ್ಲಿ ಮೇರು ಪರ್ವತವನ್ನು ಭಾವಿಸಿ, ಸೃಷ್ಟಿಯನ್ನು ಮೇರುಧರಾಧರಸ್ಯ ಎಂಬುದಾಗಿ ಸ್ತುತಿಸಲಾಗಿದೆ. ಇಲ್ಲಿ ಹೆಸರಿಸಿರುವ ಪರ್ವತಗಳು ಮೇರು ಪರ್ವತದ ಸುತ್ತಿನಲ್ಲೂ ಇರುವುದಾಗಿರುವುದರಿಂದ ಇವುಗಳನ್ನು ಮೇರುಪರ್ವತಕ್ಕೆ ಸೇರಿಸಿದ ರೂಪದಲ್ಲಿ ಇಲ್ಲಿ ಸ್ತುತಿಸಿದೆ. ಬಿಂದು, ಮಂದರ, ವೈಕಂಕತ, ಮಣಿಶೈಲ ಪರ್ವತಗಳು ಸಿದ್ಧರೇ ಮೊದಲಾದವರು ವಾಸಿಸುವ ಉತ್ತಮ ಪರ್ವತಗಳೆಂದು ಹೇಳಲ್ಪಟ್ಟಿದೆ. (ವಾಯು- ಅ. 36)

ಮೇರುವಿನ ಪೂರ್ವಭಾಗದಲ್ಲಿ ಶೀತಾಂಭಶ, ಮುಕುಂದ, ವೈಕಂಕತ ಮುಂತಾದ ಪರ್ವತಗಳೂ; ದಕ್ಷಿಣ ಭಾಗದಲ್ಲಿ ತ್ರಿಕೂಟ, ಕಲಿಂದ, ಗಜಶೈಲ, ಪಂಚಶೈಲ ಮುಂತಾದವುಗಳೂ; ಪಶ್ಚಿಮ ಭಾಗದಲ್ಲಿ ಶಿಖಿವಾಸ, ಗಂಧಮಾದನ, ವೈಢೂರ್ಯ, ಕಪಿಲ, ಕುಮುದ, ಮಕುಟ ಮುಂತಾದವುಗಳೂ ಮತ್ತು ಉತ್ತರ ಭಾಗದಲ್ಲಿ ಶಂಖಕೂಟ, ಹಂಸ, ನಾಗ, ಕಾಲಂಜ, ಮಹಾಶೈಲ, ಸುರಸಹಂಸನಾಗ, ಕನಕ ಇತ್ಯಾದಿ ಪರ್ವತಗಳೂ ಇದ್ದು, ಪಾಂಡುರವೆಂಬುದು ಹಿಮಾಲಯಕ್ಕೆ ಸೇರಿದ ಪರ್ವತಗಳ ಗುಂಪೆಂದು ಹೇಳಲ್ಪಟ್ಟಿದೆ. (ವಾಯು 38, ವಿಷ್ಣು). ಜಂಬೂದ್ವೀಪದಲ್ಲಿ (ಇಂದಿನ ಏಷ್ಯಾಖಂಡ) ಭಾರತದೇಶಕ್ಕೆ ಉತ್ತರ ಭಾಗದಲ್ಲಿರುವ ಇಂದಿನ ಹಿಮಾಲಯ ಪರ್ವತ ಭಾಗಗಳೂ ಸೇರಿದ ಪ್ರದೇಶದಲ್ಲಿನ ಮಧ್ಯಭಾಗವು ಮೇರು ಪರ್ವತವೆನಿಸಿದೆ. ಈ ಪರ್ವತಗಳನ್ನೊಳಗೊಂಡ ಸುತ್ತಲಿನ ಪ್ರದೇಶವು ಇಲಾವೃತ ವರ್ಷವೆಂದು ಹೇಳಲ್ಪಟ್ಟಿದೆ. ಈ ಇಲಾವೃತ ವರ್ಷದಲ್ಲಿ ಮೇರುಪರ್ವತದ ಸುತ್ತಲೂ ಇರುವ ಚಿಕ್ಕ ಚಿಕ್ಕ ಶಿಖರಗಳುಳ್ಳ ಪರ್ವತಗಳನ್ನು ಕೇಸರ ಪರ್ವತಗಳೆಂದು ಹೇಳುತ್ತಾರೆ. ಪೃಥ್ವಿಯನ್ನು ಕಮಲವೆಂದು ಭಾವಿಸಿ, ಮೇರುಪರ್ವತವನ್ನು ಹೂವಿನ ಕರ್ಣಿಕೆಗೆ ಹೋಲಿಸಿರುತ್ತಾರೆ (ವಿಷ್ಣು ಪು.) ಇದರಿಂದ ಸುತ್ತಲಿನ ಪರ್ವತ ಶ್ರೇಣಿಗಳು ಹೂವಿನ ಕೇಸರಗಳೆಂದು ಹೇಳಲ್ಪಟ್ಟಿದೆ.

೩೨. ದಕ್ಷಿಣ ದಿಗ್ಭಾಗೇ... ನವ ವರ್ಷಾಣಾಂ ಮಧ್ಯೇ ಭಾರತವರ್ಷೇ

ಪೃಥ್ವಿಯ ಮೇಲೆ ಕಂಗೊಳಿಸುತ್ತಿರುವ ಮೇರುಪರ್ವತಕ್ಕೆ ದಕ್ಷಿಣ ದಿಕ್ಕಿನಲ್ಲಿ ಜಂಬೂದ್ವೀಪವೆಂಬ ಪ್ರಸಿದ್ಧವಾದ ವಿಶಾಲ ಪ್ರದೇಶವಿದೆ. ಪೃಥ್ವಿಯ ಮೇಲ್ಭಾಗವು ಏಳು ದ್ವೀಪಗಳಿಂದ ಕೂಡಿದುದೆಂದು ವರ್ಣಿತವಾಗಿದೆ (ನೋಡಿ-ಸಪ್ತ ಸಮುದ್ರಗಳ ವಿವರಣೆ). ಈ ಸಪ್ತ ದ್ವೀಪಗಳಲ್ಲಿ ಒಂದಾದ ಜಂಬೂದ್ವೀಪವು ಕರ್ಮಭೂಮಿ ಎಂದೆನಿಸಿದ ಭಾರತ ದೇಶವನ್ನು ಹೊಂದಿರುವುದರಿಂದ ಅತ್ಯಂತ ಪ್ರಸಿದ್ಧವು. ಆಧುನಿಕ ವಿದ್ವಾಂಸರು ಅನೇಕ ರೀತಿ ವಿವರಣೆಗಳಿಂದ ವಿಮರ್ಶಿಸಿ ಜಂಬೂದ್ವೀಪವನ್ನು ಇಂದಿನ ಏಷ್ಯಾಖಂಡವೆಂದು ನಿರ್ಣಯಿಸಿರುತ್ತಾರೆ. ಧ್ರುವ ಪ್ರದೇಶಕ್ಕೆ (ಮೇರು) ದಕ್ಷಿಣ ಭಾಗದಲ್ಲಿ ಇದರ ಸ್ಥಾನವೆಂಬುದು ಆಧುನಿಕ ಮತಕ್ಕೂ ಹೊಂದಿಕೆಯಾಗಿದೆ. ವಿಷ್ಣುಪುರಾಣದ ವಿವರಣೆಯಂತೆ, ಸ್ವಾಯಂಭುವ ಮನುವಿನ ಪುತ್ರನಾದ



ಪ್ರಿಯವ್ರತನು ತನ್ನ ಆಡಳಿತದಲ್ಲಿದ್ದ ಸಪ್ತ ದ್ವೀಪಗಳಲ್ಲಿ (ಇಂದಿನ ಏಳು ಖಂಡಗಳು), ಜಂಬೂದ್ವೀಪವನ್ನು ತನ್ನ ಪುತ್ರ ಆಗ್ನೀಧ್ರನೆಂಬುವನಿಗೆ ರಾಜ್ಯಭಾರಮಾಡಲು ಒಪ್ಪಿಸಿದನು (ನೋಡಿ- ಸಪ್ತಸಮುದ್ರಗಳು). ಆಗ್ನೀಧ್ರನಿಗೆ, ಪ್ರಜಾಪತಿಗಳಿಗೆ ಸರಿಸಮರಾದ ಒಂಭತ್ತು ಮಂದಿ ಪುತ್ರರು ಜನಿಸಿದರು. ನಾಭಿ, ಕಿಂಪುರುಷ, ಹರಿವರ್ಷ, ಇಲಾವೃತ, ರಮ್ಯ, ಹಿರಣ್ವಾನ್, ಕುರು, ಭದ್ರಾಶ್ವ, ಕೇತುಮಾಲಾ - ಎಂದು ಅವರ ಹೆಸರುಗಳು. ಜಂಬೂದ್ವೀಪವನ್ನು ಒಂಭತ್ತು ಭಾಗ ಮಾಡಿ ಈ ಪುತ್ರರಿಗೆ ಆಗ್ನೀಧ್ರನು ಹಂಚಿ, ತಾನು ಶಾಲಿಗ್ರಾಮ ಪುಣ್ಯಕ್ಷೇತ್ರಕ್ಕೆ ತಪಸ್ಸಿಗಾಗಿ ಹೊರಟುಹೋದನು. ಇವರು ಆಳಿದ ಈ ಭಾಗಗಳು ಅವರುಗಳ ಹೆಸರಿನಿಂದಲೇ ನವವರ್ಷಗಳೆನಿಸಿದವು. ಈ ಪ್ರದೇಶಗಳನ್ನೂ ವರ್ಷಗಳೆಂದು ಸಂಬೋಧಿಸಲಾಗಿದೆ.

ಆಗ್ನೀಧ್ರನ ಪುತ್ರರಲ್ಲಿ ಹಿರಿಯವನಾದ ನಾಭಿಯೆಂಬುವನು ಅಜನಾಭ ಮತ್ತು ಭಾರತನೆಂಬ ಹೆಸರಿನಿಂದಲೂ ಪ್ರಸಿದ್ಧನು. ಈ ರಾಜನು ಆಳಿದ ಭಾಗಕ್ಕೆ ನಾಭಿ, ಅಜನಾಭ ಅಥವಾ ಭಾರತವರ್ಷವೆಂದು ಹೆಸರು. (ಭಾಗ- 5,1,3) : ಇದು ಜಂಬೂದ್ವೀಪದ (ಏಷ್ಯಾಖಂಡ) ಒಂಭತ್ತನೆಯ ಒಂದು ಭಾಗ. ಈ ಭಾರತವರ್ಷವನ್ನು ಇಲ್ಲಿ ಸ್ಮರಿಸಿದೆ.

ಪೃಥ್ವಿಯ ಭೂಭಾಗದ ವಿವರಣೆಗಳು

ಪೃಥ್ವಿಯು ಪುರಾಣಗಳ ಪ್ರಕಾರ ಏಳು ದ್ವೀಪಗಳಿಂದ ಕೂಡಿದೆ. ಆಧುನಿಕ ವಿದ್ವಾಂಸರುಗಳು ಇಂದು ಖಂಡಗಳೆಂದು (continents) ಕರೆಯಲ್ಪಡುತ್ತಿರುವ ಪ್ರದೇಶಗಳೇ ಈ ಸಪ್ತದ್ವೀಪಗಳೆಂದು ಹೇಳುತ್ತಾರೆ. (ಹೆಚ್ಚಿನ ವಿವರಗಳಿಗೆ ನೋಡಿ- Bharathiya Bhutatwa Rahasyam-Pub by Kalpataru Research Acadamy Shree Shringeri Shankara Matha - Bangalore-4)

| | | |
|---|---|---|
| 1. ಜಂಬೂದ್ವೀಪ | - | ಏಷ್ಯಾ |
| 2. ಪ್ಲಕ್ಷ ದ್ವೀಪ | - | ದಕ್ಷಿಣ ಅಮೇರಿಕಾ |
| 3. ಪುಷ್ಕರ ದ್ವೀಪ | - | ಉತ್ತರ ಅಮೇರಿಕಾ |
| 4. ಕ್ರೌಂಚ | - | ಆಫ್ರಿಕಾ |
| 5. ಶಾಕ | - | ಯುರೋಪ್ |
| 6. ಶಾಲ್ಮಲೀ | - | ಆಸ್ಟ್ರೇಲಿಯ ಮತ್ತು ಅಂಟಾರ್ಟಿಕಾ |
| 7. ಕುಶ | - | ಓಷನೀಯ |

ವಿಷ್ಣು ಪುರಾಣದಲ್ಲಿ ಜಂಬೂದ್ವೀಪವು ಈ ರೀತಿಯಾಗಿ ವಿವರಿಸಲ್ಪಟ್ಟಿದೆ. ಜಂಬೂದ್ವೀಪವು (ಇಂದಿನ ಏಷ್ಯಾಖಂಡ) 9 ಭಾಗಗಳಾಗಿ ವಿಭಾಗಿಸಲ್ಪಟ್ಟು ನವವರ್ಷಗಳೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

shrinath.udupa@gmail.com

ಜಂಬೂ ದ್ವೀಪದ ನಡುವೆ ಮೇರು ಪರ್ವತವಿದ್ದು, ಇದರ ಸುತ್ತಲೂ ಹರಡಿಕೊಂಡಿರುವ ಪ್ರದೇಶಗಳೇ ನವ ವರ್ಷಗಳೆಂದು ವಿಭಾಗಿಸಲ್ಪಟ್ಟಿವೆ. ಮೇರು ಪರ್ವತಕ್ಕೆ ದಕ್ಷಿಣ ಭಾಗದಲ್ಲಿ ಹೇಮಕೂಟ, ನಿಷಧ ಮತ್ತು ಹಿಮಾಲಯ ಪರ್ವತಗಳಿದ್ದು, ಉತ್ತರ ಭಾರತದಲ್ಲಿ ನೀಲ, ಶ್ವೇತ ಮತ್ತು ಶೃಂಗವಾನ್ ಪರ್ವತಗಳಿವೆ. ಈ ಪರ್ವತಗಳ ಸುತ್ತಲಿನ ಪ್ರದೇಶಗಳೇ ವರ್ಷಗಳೆಂದು ಪ್ರಸಿದ್ಧವು.

ಮೇರುವಿಗೆ ದಕ್ಷಿಣ ಭಾಗದಲ್ಲಿ ಭಾರತ, ಕಿಂಪುರುಷ ಮತ್ತು ಹರಿವರ್ಷಗಳು ಇದ್ದು, ಉತ್ತರ ಭಾಗದಲ್ಲಿ ರಮ್ಯಕ, ಹಿರಣ್ಮಯ ಮತ್ತು ಕುರುವರ್ಷಗಳು ಇರುತ್ತವೆ. ಮೇರುವಿನ ಸುತ್ತಲಿನ ಪ್ರದೇಶವೇ ಇಲಾವೃತವೆಂಬ ವರ್ಷವು. ಮೇರುವಿನ ಪೂರ್ವಭಾಗದಲ್ಲಿ ಭದ್ರಾಶ್ವ ವರ್ಷವೂ ಮತ್ತು ಪಶ್ಚಿಮ ಭಾಗದಲ್ಲಿ ಕೇತುಮಾಲವೆಂಬ ವರ್ಷವು ಇರುತ್ತದೆ. ಜಂಬೂದ್ವೀಪದಲ್ಲಿ ಈ ಒಂಭತ್ತು ವರ್ಷಗಳು ಆಗ್ನೀಧ್ರನೆಂಬ ರಾಜನ ಮಕ್ಕಳ ಹೆಸರಿನಲ್ಲಿ ಪ್ರಸಿದ್ಧವಾಗಿವೆ. ಹಿಮಾಲಯಕ್ಕೆ ದಕ್ಷಿಣ ಭಾಗದಲ್ಲಿರುವ ಪ್ರದೇಶವೇ ಪವಿತ್ರ ಭಾರತ ದೇಶವು.

ಮೇಲಿನ ವಿವರಣೆಗಳಲ್ಲಿ ಕೆಲವು ಭಿನ್ನಾಭಿಪ್ರಾಯಗಳಿದ್ದರೂ ಭಾರತೀಯರಿಗೆ ಪೃಥ್ವಿಯ ಮೇಲಿನ ಭೂಭಾಗಗಳ ವ್ಯಾಪಕ ಪರಿಚಯವಿತ್ತೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಈ ನವವರ್ಷಗಳಲ್ಲಿ ಭಾರತ ದೇಶವನ್ನು ಬಿಟ್ಟು ಮಿಕ್ಕ ಭಾಗಗಳು ಭೋಗ ಭೂಮಿಯೆಂದು ಕರೆಯಲ್ಪಟ್ಟಿವೆ. ಪುರಾಣಗಳಲ್ಲಿ ವರ್ಣಿತವಾಗಿರುವ ಯುಗಾನುರೂಪವಾದ ಸಮಾಜ ವ್ಯವಸ್ಥೆಗಳು ಆ ದೇಶಗಳಿಗೆ ಅನ್ವಯಿಸುವುದಿಲ್ಲ. ಕರ್ಮಭೂಮಿಯೆಂದು ಪ್ರಸಿದ್ಧವಾಗಿರುವ ಈ ಹಿಮವರ್ಷವೆಂಬ ಭಾಗವು ನಾಭಿರಾಜನಿಂದ ಆಳಲ್ಪಟ್ಟು, ನಂತರ ಆತನ ಪುತ್ರ ಋಷಭನ ಆಳ್ವಿಕೆಯಲ್ಲಿ ಮುಂದುವರೆಯಿತು. ಋಷಭ ರಾಜನ ನೂರು ಜನ ಪುತ್ರರಲ್ಲಿ ಭರತನೆಂಬುವನು ಬಹಳ ಪ್ರಸಿದ್ಧಿ ಹೊಂದಿದನು. ಈತನಿಂದ ಆಳಲ್ಪಟ್ಟ ದೇಶವು 'ಭಾರತ ವರ್ಷ'ವೆಂದೇ ಪ್ರಖ್ಯಾತವಾಯಿತು. ಈತನೂ ತನ್ನ ಪೂರ್ವಜರಂತೆಯೇ ಅನೇಕ ಯಜ್ಞಗಳನ್ನು ಆಚರಿಸಿ ಅಂತ್ಯಕಾಲದಲ್ಲಿ ಶಾಲಿಗ್ರಾಮ ಕ್ಷೇತ್ರಕ್ಕೆ ತಪಸ್ಸನ್ನಾಚರಿಸಲು ಹೋದನು. ಈ ಭರತ ಚಕ್ರವರ್ತಿಯ ಸಂತತಿಯೇ ಭಾರತ ವರ್ಷವನ್ನು ಮುಂದೆ ಆಳಿತೆಂದು ಹೇಳಲಾಗಿದೆ. ಶಕುಂತಲೆ -ದುಷ್ಯಂತರ ಪುತ್ರ ಭರತನೆಂಬುವನಿಂದ ಭಾರತ ದೇಶವೆಂದು ಹೆಸರಾಯಿತೆಂದು ಮತ ಭೇದಗಳಿವೆ. (ನೋಡಿ- ಷೋಡಶ ಭೂಪಾಲರು- ಭರತ)

### ೩೩. ನವಖಂಡಾನಾಂ ಮಧ್ಯೇ ಭರತಖಂಡೇ

ಇಂದಿನ ಭರತಖಂಡದ ಮೇಲ್ಭಾಗದ ಮತ್ತು ಅದರ ಅಕ್ಕಪಕ್ಕ ಪ್ರದೇಶಗಳೂ ಸೇರಿ ಭಾರತ ವರ್ಷವೆನಿಸಿತ್ತು. (ವಿಶಾಲಭಾರತ - ಮಧ್ಯಏಷ್ಯದವರೆಗೆ, ಅಕ್ಕಪಕ್ಕದಲ್ಲಿ ಪಾಕಿಸ್ಥಾನ, ಬಲೂಚಿಸ್ಥಾನ, ಬಾಂಗ್ಲಾದೇಶ್, ಚೀನಾ ದೇಶದ ಸ್ವಲ್ಪ ಭಾಗಗಳು, ಬರ್ಮಾ ಸಿಂಹಳ ದ್ವೀಪವೇ ಆದಿಯಾಗಿ ಕೆಲವು ದ್ವೀಪಗಳು ಸೇರಿದ ಭಾಗ). ಈ ಭಾರತ ವರ್ಷವನ್ನು ಒಂಭತ್ತು



shrinath.udupa@gmail.com

ಭಾಗಗಳಾಗಿ ವಿಂಗಡಿಸಿ, ಅತಿ ಕೆಳಗಿನ ಭಾಗವು ಭರತಖಂಡವೆಂದೂ ನಂತರ ಇಂದ್ರ, ಕಶೇರು, ತಾಮ್ರ, ಗಭಸ್ತಿ, ಪುನ್ನಾಗ, ಗಂಧರ್ವ, ಸೌಮ್ಯ ಮತ್ತು ವರುಣ ಎಂಬ ಹೆಸರಿನಿಂದ ಉಳಿದ ಎಂಟು ಭಾಗಗಳು ವರ್ಣಿತವಾಗಿವೆ. ಭರತಖಂಡವನ್ನು ಈ ರೀತಿ ವರ್ಣಿಸಲಾಗಿದೆ.

"ಆಯತಸ್ತು ಕುಮಾರೀತೋ ಗಂಗಾಯಾಃ ಪ್ರವಹಾವಧಿಃ |
ತಿರ್ಯಗೂರ್ಧ್ವಂ ತು ವಿಸ್ತೀರ್ಣಂ ಸಹಸ್ರಾಣಿ ದಶೈವ ತು || (ಮತ್ಸ್ಯ 114.10)

ಕನ್ಯಾಕುಮಾರಿಯಿಂದ ಗಂಗಾನದಿಯ ಉತ್ಪತ್ತಿ ಸ್ಥಾನದವರೆಗೆ ಇದು ವ್ಯಾಪಿಸಿದೆ. ಮೇಲ್ಗಡೆ ಈ ಖಂಡವು ಪೂರ್ವ ಪಶ್ಚಿಮವಾಗಿ ಹತ್ತು ಸಾವಿರ ಯೋಜನ ಅಗಲವಾಗಿದೆ.

ಸಂಕಲ್ಪಪಚ್ಯಮಾನಾತ್ತು ಆಶ್ರಮಾಣಾಂ ಯಥಾವಿಧಿ |
ಇಹ ಸ್ವರ್ಗಾಪವರ್ಗಾರ್ಥಂ ಪ್ರವೃತ್ತಿರಿಹ ಮಾನುಷೇ ||

ಜೀವರಾಶಿಗಳ ಕರ್ಮವು ಕ್ಷಯಿಸಲೆಂದು ಸಂಕಲ್ಪಿಸಿ ಭಗವಂತನು ಆಶ್ರಮಧರ್ಮಗಳನ್ನು ಗೊತ್ತುಮಾಡಿರುವನು. ಶಾಸ್ತ್ರೋಕ್ತವಾದ ನಿಯಮದಂತೆ ಅವುಗಳನ್ನು ಈ ಭಾರತ ಭೂಮಿಯಲ್ಲಿ ಅನುಷ್ಠಾನ ಮಾಡಿದರೆ ಮಾನವನಿಗೆ ಸ್ವರ್ಗಾದಿ ಸುಖವೂ ಮತ್ತು ಮೋಕ್ಷವೂ ಲಭಿಸುವುದು. ಭಾರತದೇಶವಲ್ಲದೇ ಬೇರೆ ಖಂಡಾದಿ ಪ್ರದೇಶಗಳಲ್ಲಿ ಇಂದು ಧರ್ಮಪ್ರಚಾರ ಮಾಡುವ ಉದ್ದೇಶದಿಂದ, ಹಿಂದೂ ಧರ್ಮದ ಆಚರಣೆಗಳನ್ನು ತರುವ ಪ್ರಯತ್ನ ಶ್ಲಾಘನೀಯವೆನಿಸಿದರೂ- ಋಷಿಮುನಿಗಳ ತಪಸ್ಸಿನ ಪ್ರಭಾವದಿಂದಲೂ ಪುಣ್ಯನದೀ ಪರ್ವತಗಳು ಇಲ್ಲಿರುವುದರಿಂದಲೂ, ಪರಮಾತ್ಮನ ಅವತಾರಗಳ ಜನ್ಮಸ್ಥಾನವಾಗಿರುವುದ ರಿಂದಲೂ, ವರ್ಣಾಶ್ರಮ ಧರ್ಮಾಚರಣೆ ಈ ನೆಲದ ಗುಣವಾಗಿರುವುದರಿಂದಲೂ ಭಾರತ ದೇಶವೆಂಬ ಈ ಭಾಗವು ಇಂದೂ ಸಹ ಆಧ್ಯಾತ್ಮಿಕ ಸಾಧನೆಗಳಿಗೆ ಅನುಕೂಲಕರವಾದ ಸ್ಥಳವೆಂಬುದರಲ್ಲಿ ಸಂದೇಹವಿಲ್ಲ. ಪುಣ್ಯವಶದಿಂದ ನಾವೆಲ್ಲರೂ ಇಲ್ಲಿಯೇ ಜನ್ಮವೆತ್ತಿರುವುದರಿಂದ ಭರತಖಂಡವನ್ನು ಇಲ್ಲಿ ಸ್ಮರಿಸಿದೆ.

ವಿಷ್ಣು ಪುರಾಣದಲ್ಲಿ ಈ ರೀತಿ ಹೇಳಲ್ಪಟ್ಟಿದೆ;

ಅತ್ರಾಪಿ ಭಾರತಂ ಶ್ರೇಷ್ಠಂ ಜಂಬೂದ್ವೀಪೇ ಮಹಾಮುನೇ |
ಯತೋ ಹಿ ಕರ್ಮಭೂರೇಷಾ ಹ್ಯತೋಽನ್ಯಾ ಭೋಗಭೂಮಯಃ ||

ಜಂಬೂದ್ವೀಪದಲ್ಲಿಯೂ ಭಾರತ ವರ್ಷವು ಸರ್ವಶ್ರೇಷ್ಠವಾದುದು. ಏಕೆಂದರೆ ಇದು ಕರ್ಮಭೂಮಿಯು; ಉಳಿದವು ಭೋಗ ಭೂಮಿಗಳು.

ಅತ್ರ ಜನ್ಮಸಹಸ್ರಾಣಾಂ ಸಹಸ್ರೈರಪಿ ಸತ್ತಮ |
ಕದಾಚಿಲ್ಲಭತೇ ಜನ್ತುರ್ಮಾನುಷ್ಯಂ ಪುಣ್ಯಸಂಚಯಾತ್ ||

ಸಾವಿರಾರು ಜನ್ಮಗಳಲ್ಲಿ ಸಂಪಾದಿಸಿದ ಪುಣ್ಯಬಲದಿಂದ, ಕೊನೆಗೆ ಯಾವಾಗಲೋ ಒಮ್ಮೆ ಜೀವಿಗೆ ಭರತಖಂಡದಲ್ಲಿ ಮನುಷ್ಯ ಜನ್ಮವು ಲಭಿಸುತ್ತದೆ.

ಗಾಯನ್ತಿ ದೇವಾಃ ಕಿಲ ಗೀತಕಾನಿ
ಧನ್ಯಾಸ್ತು ತೇ ಭಾರತಭೂಮಿಭಾಗೇ ।
ಸ್ವರ್ಗಾಪವರ್ಗಾಸ್ಪದಮಾರ್ಗಭೂತೇ
ಭವನ್ತಿ ಭೂಯಃ ಪುರುಷಾಃ ಸುರತ್ವಾತ್ ॥

ದೇವತೆಗಳು ಈ ರೀತಿಯಾಗಿ ಗಾನ ಮಾಡುತ್ತಾರೆ -

ಆಹಾ! ಭರತಖಂಡದಲ್ಲಿ ಹುಟ್ಟಿರತಕ್ಕಂತಹ ಜನರೇ ಧನ್ಯರು. ದೇವತೆಗಳಿಗಿಂತ ಮನುಷ್ಯ ಜನ್ಮವೇ ಉತ್ತಮವು. ಭರತಖಂಡವು ಸ್ವರ್ಗ ಮತ್ತು ಮೋಕ್ಷಗಳಿಗೆ ಅವಕಾಶವಿರುವ ಮಾರ್ಗವನ್ನು ತೋರಿಸತಕ್ಕ ಶ್ರೇಷ್ಠವಾದ ಕರ್ಮಭೂಮಿಯಾಗಿದೆ.

ಕರ್ಮಾಣ್ಯಸಂಕಲ್ಪಿತ ತತ್ ಫಲಾನಿ
ಸಂನ್ಯಸ್ಯ ವಿಷ್ಣೌ ಪರಮಾತ್ಮಭೂತೇ ।
ಅವಾಪ್ಯ ತಾಂ ಕರ್ಮಮಹೀಮನಂತೇ
ತಸ್ಮಿನ್‌ಲಯಂ ಯೇ ತ್ವಮಲಾಃ ಪ್ರಯಾನ್ತಿ ॥

ಈ ಕರ್ಮ ಭೂಮಿಯಲ್ಲಿ ಜನ್ಮಪಡೆದು, ಫಲಾಶೆಗಳಿಲ್ಲದೇ ನಿಷ್ಕಾಮ ಕರ್ಮಗಳನ್ನು ಮಾಡಿ, ಪರಮಾತ್ಮನಾದ ವಿಷ್ಣುವಿನಲ್ಲಿ ಸಮರ್ಪಿಸಿ ನಿರ್ಮಲರಾಗಿ, ಅನಂತನಾದ ಭಗವಂತನಲ್ಲಿ ಲಯಹೊಂದುವ ಭರತಖಂಡ ನಿವಾಸಿಗಳು ಧನ್ಯರು.

ಜಾನೀಮ ನೈತತ್ ಕ್ವ ವಯಂ ವಿಲೀನೇ
ಸ್ವರ್ಗಪ್ರದೇ ಕರ್ಮಣಿ ದೇಹಬಂಧಮ್ ।
ಪ್ರಾಪ್ಸ್ಯಾಮ ಧನ್ಯಾಃ ಖಲು ತೇ ಮನುಷ್ಯಾ
ಯೇ ಭಾರತೇ ನೇನ್ದ್ರಿಯವಿಪ್ರಹೀನಾಃ ॥

ನಮಗೆ ಪ್ರಾಪ್ತವಾಗಿರುವ ಸ್ವರ್ಗವು ಮತ್ತು ನಮ್ಮ ಪುಣ್ಯ ಕರ್ಮಗಳು ಸವೆದ ಮೇಲೆ, ಮತ್ತೆ ಎಲ್ಲಿ ಹುಟ್ಟಿ ದೇಹಸಂಬಂಧವನ್ನು ಪಡೆಯುತ್ತೇವೆಯೋ ನಮಗೆ ತಿಳಿದಿರುವುದಿಲ್ಲ! ಇಂದ್ರಿಯ ಶಕ್ತಿಗಳಿಂದೊಡಗೂಡಿ ಭರತಖಂಡದಲ್ಲಿ ಹುಟ್ಟಿದ ಮನುಷ್ಯರೇ ಧನ್ಯರು"

**೩೪. (ನಿರತಿಶಯಜನಿ .... ಕರ್ನಾಟಜನ ಪದಾಧಿಷ್ಠಾನ ..... ದಂಡಕಾರಣ್ಯೇ ಅಸ್ಮಿನ್ ಪ್ರಜಾಪತಿ ಕ್ಷೇತ್ರೇ)**

ಅನೇಕ ಗುಣಗಳಿಂದ ಸಂಪದ್ಭರಿತವಾಗಿರುವ ಈ ಕರ್ನಾಟಕ ದೇಶವು ಸಹ್ಯಾದ್ರಿ ಪರ್ವತಕ್ಕೆ ಕೆಳಗಿನ ಭಾಗದಲ್ಲಿದ್ದು, ದಂಡಕಾರಣ್ಯ ಪ್ರದೇಶವನ್ನು ಒಳಗೊಂಡಿರುವುದರಿಂದ, ನಾವು ವಾಸಿಸುತ್ತಿರುವ ಕ್ಷೇತ್ರವು " ಸಹ್ಯಾಭಿಧಾನ ಗಿರಿವರಿಷ್ಠ ಉಪರಿಭಾಗೇ, ದಂಡಕಾರಣ್ಯೇ, ಅಸ್ಮಿನ್ ಪ್ರಜಾಪತಿ ಕ್ಷೇತ್ರೇ" ಎಂಬುದಾಗಿ ಹೇಳಲ್ಪಟ್ಟಿದೆ.



**೩೫. (ಶಂಖ ಚಕ್ರ ಗದಾ ....... ಶ್ರೀ ಭಗವದಾಜ್ಞಯಾ ಪ್ರವರ್ತಮಾನಸ್ಯ)**

ಶಂಖ ಚಕ್ರ ಗದಾ ಶಾರ್ಙ್ಗ(ಧನುಸ್ಸು) ನಂದಕಗಳೆಂಬ ಪಂಚ ಮಹಾಯುಧಗಳನ್ನು ಧರಿಸಿದವನೂ, ದಿವ್ಯ ರತ್ನ ಖಚಿತ ಕಿರೀಟ ಹಾರ ಕೇಯೂರ ನೂಪುರ ಮಕರಕುಂಡಲವೇ ಮೊದಲಾದ ಆಭರಣಗಳಿಂದ ವಿಭೂಷಿತನೂ, ಲೋಕೋದ್ಧಾರಕ್ಕಾಗಿ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಭಾರ್ಗವರಾಮ, ಶ್ರೀರಾಮ, ಶ್ರೀಕೃಷ್ಣ, ಬಲರಾಮ ಬೌದ್ಧ ಕಲ್ಕ್ಯಾದಿ ಅನೇಕ ಅವತಾರಗಳಿಂದ ಆವಿರ್ಭವಿಸಿದವನೂ, ಪ್ರಹ್ಲಾದ, ನಾರದ, ಪರಾಶರ, ಪುಂಡರೀಕ, ವ್ಯಾಸ, ಅಂಬರೀಷ, ಶುಕ, ಶೌನಕ, ಭೀಷ್ಮ, ದಾಲ್ಭ್ಯ, ರುಕ್ಮಾಂಗದ, ಅರ್ಜುನ, ವಸಿಷ್ಠ, ವಿಭೀಷಣ, ಬಲಿ, ಹನುಮಂತನೇ ಮೊದಲಾದ ಷೋಡಶ ಮಹಾ ಭಕ್ತರುಗಳ ವಿಮಲತರ, ಹೃದಯಾಂತರಾಳದಲ್ಲಿ, ನಿರಂತರವಾಗಿ, ನಿರರ್ಗಳವಾಗಿ ವಿಹರಿಸುತ್ತಿರುವವನೂ, ಅನೇಕ ಕೋಟಿ ಬ್ರಹ್ಮಾಂಡಗಳನ್ನು ತನ್ನ ಉದರದಲ್ಲಿಟ್ಟುಕೊಂಡು ರಕ್ಷಿಸುತ್ತಿರುವ ಭಗವಂತನಾದ ಲಕ್ಷ್ಮೀಪತಿಯಾಗಿರುವ ನಾರಾಯಣನೂ, ನಾಭಿಯಲ್ಲಿ ಕಮಲವನ್ನು ಹೊಂದಿರುವವನೂ, ಚರಾಚರಾತ್ಮಕವಾದ ಸಕಲ ಪ್ರಪಂಚವನ್ನು ನಿರ್ಮಾಣ ಮಾಡಿರುವವನೂ, ಕಪಟನಾಟಕ ಸೂತ್ರಧಾರನೂ,.... ಆಗಿರುವ ಭಗವಂತನ ಆಜ್ಞೆಯಂತೆ ಈ ಶುಭ ಕರ್ಮದಲ್ಲಿ ಪ್ರವೃತ್ತನಾಗಿರುವೆನೆಂದು ಭಕ್ತಿಯಿಂದ ಭಾವನೆಯನ್ನು ಮಾಡಬೇಕೆಂದು ಹೇಳಿದೆ.

**೩೬. (ಆದ್ಯಬ್ರಹ್ಮಣಃ ..........ಅಸ್ಮಿನ್ ಶುಭ ಮುಹೂರ್ತೇ)**

ಕಾಲ ದೇಶಕ್ಕೆ ಒಳಪಟ್ಟಿರುವ ಕರ್ತೃವು ತನ್ನ ಸ್ಥಾನವನ್ನು ದೇಶದ ದೃಷ್ಟಿಯಿಂದ ಇಡೀ ಸೃಷ್ಟಿಯಲ್ಲಿ ಗುರುತಿಸಿಕೊಂಡು ನಂತರ ಮುಂದೆ ಕಾಲದ ದೃಷ್ಟಿಯಿಂದ ತಾನು ಕರ್ಮಪ್ರವೃತ್ತನಾಗುತ್ತಿರುವ ಕಾಲವನ್ನು ಗುರುತಿಸಿಕೊಂಡು, ಅಂತಹ ದಿವ್ಯಮುಹೂರ್ತದಲ್ಲಿ ತಾನು ಸಂಕಲ್ಪಿಸಬೇಕೆಂದು ಮಹಾಸಂಕಲ್ಪದಲ್ಲಿ ಹೇಳಲಾಗಿದೆ.

ಭಾರತೀಯತ ಕಾಲಮಾನ ಪದ್ಧತಿಯು ಪ್ರಪಂಚದಲ್ಲೇ ಅತ್ಯಂತ ಪ್ರಾಚೀನವೆಂದು ಈಗೀಗ ಹೆಚ್ಚು ಹೆಚ್ಚಾಗಿ ತಿಳಿಯಲ್ಪಡುತ್ತಿದೆ. ಇಂತಹ ಅತ್ಯದ್ಭುತವಾದ ಕಾಲಗಣನೆಯನ್ನು ತಿಳಿಯಬೇಕಾದರೆ ವೇದ, ಪುರಾಣ ಮತ್ತು ಶಾಸ್ತ್ರಗಳ ಅಧ್ಯಯನವು ಅತ್ಯಂತ ಅಗತ್ಯವು. ಆದರೂ ಸಹ ಒಂದು ಸಣ್ಣ ನೋಟವನ್ನು ಇಲ್ಲಿ ವಿವರಣೆಯ ಮೂಲಕ ತಿಳಿಯಪಡಿಸುವ ಉದ್ದೇಶದಿಂದ ಪ್ರಯತ್ನಮಾಡಿದೆ. ಪೂರ್ಣವಾಗಿ ತಿಳಿಯಲು ಸಾಕಷ್ಟು ಅಧ್ಯಯನ ಮಾಡಬೇಕಾಗಿದೆ. ಈ ವಿವರಣೆಯಿಂದ ಪೂರ್ಣವಾಗಿ ತಿಳಿಯುವ ಉತ್ಸಾಹ ಬರಬಹುದೆಂಬ ಆಶಯದಿಂದ ಋಷಿ ಪ್ರಣೀತ ಕಾಲಮಾನಗಳ ಬಗ್ಗೆ ಸೂಕ್ಷ್ಮ ಪರಿಚಯವನ್ನು ಈ ಕೆಳಗೆ ಕೊಡಲಾಗಿದೆ.

**ಋಷಿ ಪ್ರಣೀತ ಕಾಲಮಾನಗಳು ಈ ರೀತಿ ಇದೆ :**

ನಿಮೇಷವೆಂದರೆ ಒಮ್ಮೆ ಕಣ್ಣು ರೆಪ್ಪೆ ಮಿಟುಕಿಸುವ ಕಾಲವು. ಇಲ್ಲಿಂದ ಪ್ರಾರಂಭಿಸಿದಾಗ



shrinath.udupa@gmail.com

15 ನಿಮೇಷ = 1 ಕಾಷ್ಠಾ (4/115 ಸೆಕೆಂಡು)
30 ಕಾಷ್ಠಾ = 1 ಕಲಾ (8 ಸೆಕೆಂಡು)
30 ಕಲಾ = 1 ಕ್ಷಣ (4 ನಿಮಿಷಗಳು)
12 ಕ್ಷಣ = 1 ಮುಹೂರ್ತ (48 ನಿಮಿಷಗಳು)
30 ಮುಹೂರ್ತ = 1 ದಿನ (1 ಅಹೋರಾತ್ರಿ) = 1 ತಿಥಿ
15 ದಿನ = 1 ಪಕ್ಷ
2 ಪಕ್ಷ = 1ಮಾಸ (ತಿಂಗಳು)
12 ಮಾಸ = 1 ವರ್ಷ - (1 ಮಾನುಷ ವರ್ಷ ) - ಸಂವತ್ಸರ

ಮಾನುಷ ವರ್ಷಗಳಿಂದ ದೇವಮಾನಗಳ ಲೆಕ್ಕವು ಈ ರೀತಿ ಇದೆ :

1 ಮಾನುಷ ವರ್ಷ = ದೇವತೆಗಳಿಗೆ 1 ದಿನ (ಉತ್ತರಾಯಣವೇ ಹಗಲು ಮತ್ತು ದಕ್ಷಿಣಾಯನವೇ ರಾತ್ರಿಯು)

360 ಮಾನುಷ ವರ್ಷ = ದೇವತೆಗಳಿಗೆ 360 ದಿನಗಳು = ದೇವತೆಗಳ 1 ವರ್ಷ
1200 ದೇವ ವರ್ಷ = 4,32,000 ಮಾನುಷವರ್ಷ = ಕಲಿಯುಗ ವ್ಯಾಪ್ತಿ
2400 ದೇವ ವರ್ಷ = 8,64,000 ಮಾನುಷ ವರ್ಷ = ದ್ವಾಪರ ಯುಗ ವ್ಯಾಪ್ತಿ
3600 ದೇವ ವರ್ಷ = 12,96,000 ಮಾನುಷ ವರ್ಷ = ತ್ರೇತಾಯುಗ ವ್ಯಾಪ್ತಿ
4800 ದೇವ ವರ್ಷ = 17,28,000 ಮಾನುಷ ವರ್ಷ = ಕೃತಯುಗ ವ್ಯಾಪ್ತಿ
12000 ದೇವ ವರ್ಷ = 43,20,000 ಮಾನುಷ ವರ್ಷ = 1ಚತುರ್ಯುಗ ವ್ಯಾಪ್ತಿ

ಇಂತಹ 71 ಚತುರ್ಯುಗವೆಂದರೆ = 1 ಮನ್ವಂತರ
14 ಮನ್ವಂತರವೆಂದರೆ = ಬ್ರಹ್ಮನ ಒಂದು ಹಗಲು;
ಪುನಃ 14 ಮನ್ವಂತರವೆಂದರೆ = ಬ್ರಹ್ಮನ ಒಂದು ರಾತ್ರಿ

ಅಂದರೆ 28 ಮನ್ವಂತರಗಳೆಂದರೆ = ಬ್ರಹ್ಮನಿಗೆ ಒಂದು ದಿನ. **ಇಂತಹ 1 ದಿನವು ಕಲ್ಪವೆನಿಸುತ್ತದೆ.** ಈಗ ನಡೆಯುತ್ತಿರುವುದು ಶ್ವೇತವರಾಹಕಲ್ಪ.

360 ಬ್ರಹ್ಮದಿನಕ್ಕೆ ಬ್ರಹ್ಮವರ್ಷವೆಂದೂ ಇಂತಹ ನೂರು ಬ್ರಹ್ಮವರ್ಷಗಳಿಗೆ ಬ್ರಹ್ಮಪಟ್ಟವೆಂದೂ ಕರೆಯಲ್ಪಡುತ್ತದೆ.

ಈ ಕಾಲಮಾನಗಳನ್ನು ಉಪಯೋಗಿಸಿಕೊಂಡು ಪ್ರಕೃತ ಕಾಲವನ್ನು ಎರಡು ರೀತಿಯಿಂದ ಮಹಾಸಂಕಲ್ಪದಲ್ಲಿ ಸ್ಮರಿಸಿದೆ.



shrinath.udupa@gmail.com

ಮೊದಲನೇ ರೀತಿ ;

ಬ್ರಹ್ಮದೇವರ ಕಾಲಪರಿಮಿತಿಯು (ಬ್ರಹ್ಮ ಮಾನದಂತೆ) - 100 ವರ್ಷಗಳು
ಈಗ ಕಳೆದು ಹೋಗಿರುವುದು (ಪ್ರಥಮ ಪರಾರ್ಧ) - ಅಂದರೆ 50 ವರ್ಷಗಳು
ಈಗ ನಡೆಯುತ್ತಿರುವುದು (ದ್ವಿತೀಯ ಪರಾರ್ಧ) - 51ನೇ ವರ್ಷ

ಸೂಕ್ಷ್ಮವಾಗಿ 51ನೇ ವರ್ಷದ ಮೊದಲ ಮಾಸದ ಮೊದಲನೇ ಪಕ್ಷದ ಮೊದಲನೇ ದಿನದ 8 ಯಾಮಗಳಲ್ಲಿ 2ನೇ ಯಾಮವು ನಡೆಯುತ್ತಿದ್ದು, ಈ 2ನೇ ಯಾಮದಲ್ಲಿ ಮೂರನೇ ಮುಹೂರ್ತವು ನಡೆಯುತ್ತಿದೆ. ಈ ಮುಹೂರ್ತದಲ್ಲಿ ಪ್ರಥಮ ಪ್ರಾಣಾಯಾಮ ಸಮಯವು ಈಗ ನಡೆಯುತ್ತಿದೆ. (ಮಾನವನು ಒಂದು ದಿನದಲ್ಲಿ 21,600 ಬಾರಿ ಉಸಿರಾಡುವನೆಂದೂ ಅಂದರೆ 48 ನಿಮಿಷದ ಒಂದು ಮುಹೂರ್ತದಲ್ಲಿ 720 ಬಾರಿ ಉಸಿರಾಡುವನೆಂದು ಹೇಳಲ್ಪಟ್ಟಿದೆ.) **ಅಂದರೆ ಬ್ರಹ್ಮದೇವರ 51ನೇ ವಯಸ್ಸಿನ ಮೊದಲನೆಯ ಉಸಿರಿನ ಕಾಲವು ಈಗ ನಡೆಯುತ್ತಿರುವುದೆಂಬುದಾಗಿ ಇಲ್ಲಿ ಸ್ಮರಿಸಲ್ಪಟ್ಟಿದೆ.**

ಎರಡನೇ ರೀತಿ :

ಬ್ರಹ್ಮ ದೇವರ ಒಂದು ದಿನವು ಕಲ್ಪವೆಂಬ ಹೆಸರಿನಿಂದ ಕರೆಯಲ್ಪಟ್ಟು, ಪಾರ್ಥಿವ, ಕೂರ್ಮ, ಪ್ರಳಯ, ಅನಂತ, ಶ್ವೇತವರಾಹ, ಬ್ರಾಹ್ಮ, ಸಾವಿತ್ರಿ ಕಲ್ಪಗಳೆಂಬ ಏಳು ಪರ್ಯಾಯ ಕಲ್ಪಗಳಿದ್ದು, ಈಗ ಶ್ವೇತವರಾಹವೆಂಬ ಕಲ್ಪವು ನಡೆಯುತ್ತಿದೆ. ಈ ಶ್ವೇತವರಾಹ ಕಲ್ಪದ ಹಗಲಿನ 14 ಮನ್ವಂತರಗಳಲ್ಲಿ (ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸೂರ್ಯಸಾವರ್ಣಿ, ಧರ್ಮಸಾವರ್ಣಿ, ದಕ್ಷಸಾವರ್ಣಿ, ರುದ್ರ ಸಾವರ್ಣಿ, ಬ್ರಹ್ಮಸಾವರ್ಣಿ, ಇಂದ್ರಸಾವರ್ಣಿ ಮತ್ತು ವೇದ ಸಾವರ್ಣಿಯೆಂಬ 14 ಮನ್ವಂತರಗಳು) - ಆರು ಮನ್ವಂತರಗಳು ಕಳೆದು ಏಳನೆಯದಾದ ವೈವಸ್ವತ ಮನ್ವಂತರದ 71 ಚತುರ್ಯುಗಗಳಲ್ಲಿ, 27 ಚತುರ್ಯುಗಗಳು ಕಳೆದು, 28ನೇ ಚತುರ್ಯುಗ (ಮಹಾಯುಗ)ದಲ್ಲಿನ ಕೃತಯುಗ (ಅಷ್ಟಾವಿಂಶತಿ ಸಹಸ್ರೋತ್ತರ ಸಪ್ತದಶ ಲಕ್ಷಾಬ್ದೇ ಕೃತಯುಗೇ - ಅಂದರೆ 17,28,000 ವರ್ಷಗಳು), ತ್ರೇತಾಯುಗ (ಷಣ್ಣವತಿ ಸಹಸ್ರೋತ್ತರ ದ್ವಾದಶಲಕ್ಷಾಬ್ದೇ ತ್ರೇತಾಯುಗೇ - ಅಂದರೆ 12,96,000 ವರ್ಷಗಳು), ದ್ವಾಪರಯುಗ (ಚತುಷ್ಷಷ್ಟಿ ಸಹಸ್ರೋತ್ತರ ಅಷ್ಟಲಕ್ಷಾಬ್ದೇ ದ್ವಾಪರಯುಗೇ - ಅಂದರೆ 8,64,000 ವರ್ಷಗಳು) ಪೂರ್ತಿಯಾಗಿ ಕಳೆದು, ಈಗ ನೆಡೆಯುತ್ತಿರುವ ಕಲಿಯುಗ (ದ್ವಾತ್ರಿಂಶತ್ಸಹಸ್ರಾನ್ವಿತ ಚತುರ್ಲಕ್ಷಾಬ್ದೇ - ಅಂದರೆ 4,32,000 ವರ್ಷಗಳು)ದಲ್ಲಿ ಪ್ರಥಮ ಪಾದವು ನಡೆಯುತ್ತಿದೆ. ಈಗ (2004 ಇಸವಿ ಚೈತ್ರಶುಕ್ಲ ಪ್ರತಿಪದಿಗೆ) 5105 ವರ್ಷಗಳು ಕಳೆದಿವೆ.

**"ಯುಧಿಷ್ಠಿರೋ ವಿಕ್ರಮಶಾಲಿವಾಹನೌ ತತೋ ನೃಪೋऽಸೌ ವಿಜಯಾಭಿನಂದನಃ |**
**ತತಸ್ತು ನಾಗಾರ್ಜುನ ಕಲ್ಕಿಭೂಪತೀ ಕಲೌಯುಗೇ ಷಟ್‌ಶಕಕಾರಕಾ ನೃಪಾಃ ||**

ಈ ಕಲಿಯುಗದಲ್ಲಿ ಯುಧಿಷ್ಠಿರ, ವಿಕ್ರಮ, ಶಾಲಿವಾಹನ, ವಿಜಯಾಭಿನಂದನ,

ನಾಗಾರ್ಜುನ ಮತ್ತು ಕಲಿಭೂಪರೆಂಬ ಆರು ಪ್ರಮುಖ ಶಕಪುರುಷರ ಹೆಸರಿನಲ್ಲಿ ವರ್ಷಗಳು ಪರಿಗಣಿಸಲ್ಪಟ್ಟಿದ್ದು- ಪ್ರಕೃತ ಮಹಾಸಂಕಲ್ಪದಲ್ಲಿ ಕರ್ನಾಟಕ ದೇಶಕ್ಕೆ ಅನ್ವಯಿಸುವ ಶಾಲಿವಾಹನ ಶಕೆಯನ್ನು ಸ್ಮರಿಸಿದೆ. ಶಾಲಿವಾಹನ ರಾಜನು ವಿಕ್ರಮ ಶಕೆಯು ಪ್ರಾರಂಭವಾದ 135ನೇ ವರ್ಷದಿಂದ ತನ್ನ ಹೆಸರಿನ ಶಕವನ್ನು ಆರಂಭಿಸಿದನು. ಈ ಶಕೆಯ ವರ್ಷಾರಂಭವು ಚೈತ್ರ ಶುದ್ಧ ಪ್ರತಿಪದೆಯಿಂದ ಆಗುತ್ತದೆ. ಇದರ ಪ್ರಮಾಣವು 18,000 ವರ್ಷಗಳು. ಈಗ (2004ನೇ ಇಸವಿಯಲ್ಲಿ) ಶಾಲಿವಾಹನ ಶಕೆಯಲ್ಲಿ 1926 ವರ್ಷಗಳು ಮುಗಿದಿವೆ. ದಕ್ಷಿಣ ಭಾರತದಲ್ಲಿ ನಿತ್ಯದಲ್ಲೂ ಆಚರಿಸುವ ಸಕಲ ಶುಭಕರ್ಮಗಳಲ್ಲಿಯೂ ಸಂಕಲ್ಪ ಮಾಡುವಾಗ ಶಾಲಿವಾಹನ ಶಕೆಯನ್ನೇ ಸ್ಮರಿಸುವ ಸಂಪ್ರದಾಯವು ಪ್ರಾಚೀನವಾದುದು.

ಪ್ರಸಿದ್ಧ ಶಕ ಪುರುಷನಾದ ಶಾಲಿವಾಹನನು ಕರ್ನಾಟಕದಲ್ಲಿ ಜನ್ಮ ತಾಳಿದವನೆಂಬುದು ಈ ನಾಡಿಗೇ ಅತ್ಯಂತ ಹೆಮ್ಮೆಯ ವಿಷಯವಾಗಿದೆ. ಭಾರತದಲ್ಲಿ ಅತ್ಯಂತ ಪ್ರಸಿದ್ಧ ಚಕ್ರವರ್ತಿಯಾಗಿ, ಉಜ್ಜಯಿನಿಯನ್ನು ಆಳುತ್ತಿದ್ದ ವಿಕ್ರಮಾದಿತ್ಯನು ವಿಧಿವಶದಿಂದ ಶಾಲಿವಾಹನನೊಡನೆ ಏರ್ಪಟ್ಟ ಯುದ್ಧದಲ್ಲಿ ಮಡಿದು, ಆ ರಾಜ್ಯವು ಶಾಲಿವಾಹನನ ವಶಕ್ಕೆ ಬರಲಾಗಿ, ಆತನು ವಿಕ್ರಮಾದಿತ್ಯನ ಪುತ್ರಿ ಪುಷ್ಪಮಾಲಿನಿಯೆಂಬುವಳನ್ನು; ತನ್ನ ಧರ್ಮಪತ್ನಿಯಾಗಿ ಸ್ವೀಕರಿಸಿದನು. ಕರ್ನಾಟಕ ಜನರು ತಿಳಿದಿರಲೇ ಬೇಕಾದ ಈತನ ಚರಿತ್ರೆಯು ಅತ್ಯಂತ ಸೋಜಿಗವಾದದ್ದಾಗಿದೆ.

ಬಹಳ ಹಿಂದೆ ಪೈಠಣವೆಂಬ ರಾಜ್ಯವು ಉತ್ತರಭಾರತದಲ್ಲಿ ಪ್ರಸಿದ್ಧವಾಗಿದ್ದು ಸತ್ಯಧರ್ಮನೆಂಬ ಬ್ರಾಹ್ಮಣನ ಆಡಳಿತಕ್ಕೆ ಒಳಪಟ್ಟಿದ್ದಿತು. ವಿಧಿವಶದಿಂದ ಈತನು ಮೋಸಕ್ಕೆ ಒಳಗಾಗಿ ತನ್ನ ರಾಜ್ಯವನ್ನು ಕಳೆದುಕೊಂಡು, ದೇಶಭ್ರಷ್ಟನಾಗಿ ಊರೂರು ಅಲೆದು ಕೊನೆಗೆ ಕರ್ನಾಟಕ ದೇಶವನ್ನು ತಲಪಿ- ಇಂದು ತುಮಕೂರು ಜಿಲ್ಲೆಗೆ ಸೇರಿರುವ ಮತ್ತು ತುರುವೇಕೆರೆಗೆ ಸಮೀಪದಲ್ಲಿರುವ 'ತಂಡಗ'ವೆಂಬ ಗ್ರಾಮವನ್ನು ಸೇರಿದನು. ಅಂದು ಈ ಗ್ರಾಮವು ಚಿತ್ರಕೂಟವೆಂಬ ಹೆಸರಿನಿಂದ ಪ್ರಸಿದ್ಧವಾಗಿದ್ದಿತು. ಸತ್ಯಧರ್ಮನು ನಿರ್ಗತಿಕನಾಗಿ ಅಲೆಯುತ್ತಿರಲು, ಇದೇ ಗ್ರಾಮದಲ್ಲಿ ಭೈರ ಶೆಟ್ಟಿಯೆಂಬ ಕುಂಬಾರನ ಮನೆಯಲ್ಲಿ ಆಶ್ರಯ ದೊರಕಿ, ಕಾಲಕ್ರಮದಲ್ಲಿ ಈತನ ಪುತ್ರಿ ಶಾಂತಿಮತಿಯೆಂಬುವಳನ್ನು ಅದೇ ಗ್ರಾಮದ ಬಳಿ ತಪಸ್ಸು ಮಾಡುತ್ತಿದ್ದ ತಾಂಡವ ಋಷಿಗಳೆಂಬುವರ ಆಶೀರ್ವಾದ ಪಡೆದು ವಿವಾಹವಾದನು. ಗರ್ಭವತಿಯಾಗಿದ್ದ ಈಕೆಯನ್ನು ತಂದೆಯ ಬಳಿಯೇ ಬಿಟ್ಟು ಈತನು, ದ್ರವ್ಯ ಸಂಪಾದನೆಗಾಗಿ ಉಜ್ಜಯಿನಿ ನಗರಕ್ಕೆ ತೆರಳಿದನು. ಕಾರಣಾಂತರಗಳಿಂದ ಏನೂ ತಪ್ಪು ಮಾಡದಿದ್ದರೂ ರಾಜಾಗ್ರಹಕ್ಕೆ ಒಳಗಾಗಿ ಬಂದಿಯಾದನು. ಗ್ರಾಮದಲ್ಲಿದ್ದ ಈತನ ಪತ್ನಿಗೆ ಕಾಲಾಂತರದಲ್ಲಿ ಪುತ್ರ ಸಂತಾನವಾಯಿತು. ಋಷಿಗಳು ಈತನು ಮುಂದೆ ಶಕಪುರುಷನಾಗುವನೆಂದು ತಿಳಿಸಿ ಶಾಲಿವಾಹನನೆಂದು ನಾಮಕರಣ ಮಾಡಿದರು. ಈ ಬಾಲಕನು ಬೆಳೆದು ದೊಡ್ಡವನಾಗುತ್ತಿದ್ದಂತೆ ಅತ್ಯಂತ ಧೈರ್ಯಶಾಲಿಯಾಗಿ ತಾಂಡವ ಋಷಿಗಳಿಂದ ಶಿವಪಂಚಾಕ್ಷರೀ ಮಂತ್ರದ ಉಪದೇಶ ಪಡೆದು ತೇಜೋವಂತನಾದನು. ಮುಂದೆ ತನ್ನ ಅತುಲ ಪರಾಕ್ರಮದಿಂದಲೂ ತನ್ನ ತಾಯಿಗೆ,



shrinath.udupa@gmail.com

ತನ್ನ ತಂದೆಯಿಂದ ಅನುಗೃಹೀತವಾಗಿದ್ದ ಇಷ್ಟಾರ್ಥಪ್ರದವಾದ ನಾಗಮಣಿಯ ಸಹಾಯದಿಂದಲೂ- ವಿಕ್ರಮಾದಿತ್ಯನೊಡನೆ ಯುದ್ಧದಲ್ಲಿ ಜಯಗಳಿಸಿ ತನ್ನ ತಂದೆಯು ಕಳೆದುಕೊಂಡಿದ್ದ ರಾಜ್ಯವನ್ನು ಮತ್ತೆ ಪಡೆದನು. ಶಾಲಿವಾಹನನ ಮಗನು ಶಾಂತರಾಜ ಒಡೆಯನೆಂದು ಪ್ರಸಿದ್ಧಿಯಾದನು.

ಹೀಗಿರಲಾಗಿ ಮೈಸೂರು ರಾಜ್ಯದ ಅರಸರುಗಳಿಗೆ ಸಂತಾನವಿಲ್ಲದೇ ಸಿಂಹಾಸನ ಬರಿದಾಗುವ ಸಂದರ್ಭ ಬಂದು, ಶಾಂತರಾಜ ಒಡೆಯರು ದತ್ತು ಪುತ್ರರಾಗಿ ಮೈಸೂರು ರಾಜಮನೆತನ ಸೇರಿದರು. ವಿಕ್ರಮಾದಿತ್ಯನ ಕಿರೀಟ, ಸಿಂಹಾಸನಗಳು ಮೈಸೂರು ಅರಮನೆ ಸೇರಿತು. ಇಂದಿಗೂ ಈ ಸಿಂಹಾಸನವು ಪ್ರಪಂಚದ ಅತ್ಯಾಕರ್ಷಕ ವಸ್ತುಗಳಲ್ಲೊಂದಾಗಿ, ಜಗತ್ಪ್ರಸಿದ್ಧವಾಗಿದೆ.

ಕೊನೆಯಲ್ಲಿ ಕ್ಷೇತ್ರಪ್ರೀತಿಗೆ ಒಳಗಾಗಿ ಶಾಲಿವಾಹನನು ತಂಡಗ ಗ್ರಾಮದಲ್ಲೇ ನೆಲೆಸಿದನೆಂದು ಪ್ರತೀತಿ. ಉತ್ಖನನಕ್ಕೆ ಯೋಗ್ಯವಾದ ಈ ಸ್ಥಳವು ಇನ್ನೂ ಸರಿಯಾದ ಅಧಿಕಾರಿಗಳ ದೃಷ್ಟಿಗೆ ಒಳಪಡದಿರುವುದರಿಂದ ಅಜ್ಞಾತವಾಗಿಯೇ ಇದೆ.(ಸ್ವಾರಸ್ಯವಾದ ಈ ವಿಷಯವನ್ನು ಪೂರ್ಣವಾಗಿ ತಿಳಿಯಲು ಈಚನೂರು ಸಹೋದರರೆಂಬುವರಿಂದ ಪ್ರಕಾಶಿಸಲ್ಪಟ್ಟಿರುವ ಮತ್ತು ಚನ್ನಬಸವೇಗೌಡರೆಂಬುವರಿಂದ ಸಂಗ್ರಹಿಸಲ್ಪಟ್ಟಿರುವ "ಶಾಲಿವಾಹನ ಚರಿತ್ರೆ" ಯನ್ನು ನೋಡಬಹುದು.)

ಪರಮಾತ್ಮನ ಅವತಾರಗಳಲ್ಲಿ ಬೌದ್ಧಾವತಾರ ಮುಗಿದು ಕಲ್ಕ್ಯಾವತಾರದ ನಿರೀಕ್ಷೆಯ ಕಾಲವಿದಾಗಿರುವುದರಿಂದ, ಈಗ ತಾನೇ ಮುಗಿದಿರುವ ಬೌದ್ಧಾವತಾರವನ್ನು ಇಲ್ಲಿ ಸ್ಮರಿಸಿದೆ.

ವರ್ಷಗಳನ್ನು ನವ(9) ವಿಧವಾಗಿ ನಿರೂಪಿಸುವ ಪದ್ಧತಿಯಿದೆ. ದೇಶಾಚಾರಕ್ಕೆ ಅನುಗುಣವಾಗಿ ಭಾರತ ದೇಶದ ಬೇರೆ ಬೇರೆ ಪ್ರದೇಶದಲ್ಲಿರುವ ಜನರು ಬೇರೆ ಬೇರೆ ವಿಧವಾದ ವರ್ಷಗಳನ್ನು ಆಚರಣೆಯಲ್ಲಿ ತಂದಿರುತ್ತಾರೆ. ಇವುಗಳ ಸೂಕ್ಷ್ಮ ವಿವರಣೆಯು ಈ ರೀತಿ ಇದೆ.

**1. ಬ್ರಾಹ್ಮವರ್ಷ** - ನೋಡಿ-ಋಷಿ ಪ್ರಣೀತ ಕಾಲಮಾನಗಳು (ಪುಟ 108)

**2. ದೈವ ವರ್ಷ** - ನೋಡಿ- ಋಷಿ ಪ್ರಣೀತ ಕಾಲಮಾನಗಳು (ಪುಟ 108)

**3. ಪಿತೃವರ್ಷ** - ಮಾನುಷ ಕಾಲಮಾನದ ಒಂದು ತಿಂಗಳು ಪಿತೃಗಳಿಗೆ ಒಂದು ದಿನವೆನಿಸುವುದು. ಈ ಪ್ರಕಾರ ಅಮಾವಾಸ್ಯೆಯು ಪಿತೃಗಳಿಗೆ ಭೋಜನ ಕಾಲವಾಗುವುದರಿಂದ- ಅಂದು ಪಿತೃಪೂಜನವು ವಿಧಿಸಲ್ಪಟ್ಟಿದೆ.

**4.ಪ್ರಾಜಾಪತ್ಯ ವರ್ಷ** - ಚಂದ್ರೋದಯದಿಂದ ಚಂದ್ರೋದಯಕ್ಕೆ ಆಗುವ ಕಾಲವನ್ನು ದಿನವೆಂದು ಪರಿಗಣಿಸಿ, ಕಾಲಗಣನೆ ಮಾಡುವ ಪದ್ಧತಿ. ವೇದಗಳ ಕಾಲದಲ್ಲಿ ಯಜ್ಞಗಳ ಆಚರಣೆಗಾಗಿ ಈ ಪದ್ಧತಿಯು ಪ್ರಚಲಿತವಿದ್ದಿತು.

**5. ಬಾರ್ಹಸ್ಪತ್ಯ ವರ್ಷ -** ಬೃಹಸ್ಪತಿ ಗ್ರಹವು ಒಂದು ರಾಶಿಯನ್ನು ಕ್ರಮಿಸುವ ಕಾಲವು. ರಾಶಿಯ 1/12 ಭಾಗವನ್ನು ಕ್ರಮಿಸುವ ಕಾಲವು ಮಾಸವೆನಿಸುತ್ತದೆ. ವರ್ಷಾರಂಭವು ಬೃಹಸ್ಪತಿ ಗ್ರಹವು ಕುಂಭರಾಶಿಯನ್ನು ಪ್ರವೇಶ ಮಾಡುವ ಕಾಲವೆಂದು ಪರಿಗಣಿಸಲ್ಪಟ್ಟಿದೆ.

**6. ಸೌರವರ್ಷ -** ಸೂರ್ಯನು 12 ರಾಶಿಗಳನ್ನು ಕ್ರಮಿಸುವ ಕಾಲವು. ಒಂದು ರಾಶಿಯನ್ನು ಕ್ರಮಿಸುವ ಕಾಲವು ಸೌರ ಮಾಸವೆನಿಸುತ್ತದೆ. ಭೂಮಿಯು ಸೂರ್ಯನನ್ನು ಸುತ್ತುವ ಕಾಲವೂ ಸಹ ಇದೇ ಆಗಿರುತ್ತದೆ. ಈ ಮಾರ್ಗಗಳನ್ನು ಮೇಷಾದಿ ರಾಶಿಗಳ ಹೆಸರಿನಿಂದ ಕರೆಯುತ್ತಾರೆ. ಚಾಂದ್ರ ಮಾಸದ ಪಕ್ಷಗಳನ್ನು ಸೇರಿಸಿಕೊಂಡೇ ಈ ಮಾಸಗಳನ್ನು ವ್ಯವಹರಿಸುತ್ತಾರೆ. ಈ ಮಾಸಗಳು ವೇದಗಳ ಕಾಲದಲ್ಲಿದ್ದವೆಂದೂ, ಮಧು-ಮಾಧವ-ಶುಕ್ರ-ಶುಚಿ-ನಭ-ನಭಸ್ಯ-ಇಷ-ಊರ್ಜ-ಸಹ-ಸಹಸ್ಯ-ತಪ-ತಪಸ್ಯ ಎಂಬ 12 ನಾಮಗಳಿಂದ ಕರೆಯಲ್ಪಡುತ್ತಿದ್ದವು. ಈಗ ಇದೇ ವೈದಿಕ ಮಾಸಗಳನ್ನು ರಾಷ್ಟ್ರೀಯ ಪಂಚಾಂಗದಲ್ಲೂ ಅಳವಡಿಸಲಾಗಿದೆ.

**7. ಚಾಂದ್ರವರ್ಷ -** ಈಗ ಹೆಚ್ಚಾಗಿ ಪ್ರಚಲಿತವಿರುವ ಶುಕ್ಲ, ಕೃಷ್ಣ ಪಕ್ಷಗಳೊಡಗೂಡಿ, ಪಾಡ್ಯಾದಿ ತಿಥಿಗಳಿಗನುಸಾರವಾಗಿ, ಚಂದ್ರ ಸೂರ್ಯರ ಗತಿಗಳೆರಡನ್ನೂ ಗಮನದಲ್ಲಿಟ್ಟು ಗುಣಿಸಿರುವ ಚೈತ್ರಾದಿ 12 ಮಾಸಗಳಿಂದ ಗುರುತಿಸಲ್ಪಟ್ಟಿರುವ ವರ್ಷ. ಪ್ರತಿಮಾಸದ ಪೌರ್ಣಮಿಯಂದು ಚಂದ್ರನಿರುವ ನಕ್ಷತ್ರಗಳನ್ನನುಸರಿಸಿ ಈ ಮಾಸಗಳನ್ನು ಹೆಸರಿಸಲಾಗಿದೆ (ಉದಾ: ಚೈತ್ರಮಾಸದಲ್ಲಿ ಸಾಮಾನ್ಯವಾಗಿ ಚಿತ್ರಾ ನಕ್ಷತ್ರದಲ್ಲಿ ಪೌರ್ಣಮಿಯುಂಟಾಗುವುದು). ಸೂರ್ಯಗತಿಯನ್ನು ಅನುಸರಿಸುವ ಸೌರವರ್ಷದ ಕಾಲಕ್ಕೆ ಸರಿಹೊಂದಿಸುವ ಸಲುವಾಗಿ, ಈ ಎರಡು ರೀತಿಯ ವರ್ಷಗಳಿಗೆ ವ್ಯತ್ಯಾಸ ಬರುವ ದಿನಗಳನ್ನು 'ಅಧಿಕ ಮಾಸ'ವೆಂಬುದನ್ನು ಸೇರಿಸುವುದರ ಮೂಲಕ ಸರಿಪಡಿಸಲಾಗಿದೆ.

**8. ಸಾವನವರ್ಷ -** ಸೂರ್ಯೋದಯದಿಂದ ಸೂರ್ಯೋದಯಕ್ಕೆ ಒಂದು ದಿನವೆಂದು ಗಣಿಸಿ, ಇಂತಹ 360 ದಿನಗಳಿಗೆ ಆಗುವ ಕಾಲವು ಒಂದು ಸಾವನ ವರ್ಷವು. 30 ದಿನಗಳ ವ್ಯಾಪ್ತಿಯುಳ್ಳ 12 ಮಾಸಗಳಿಂದ ಕೂಡಿರುವ ವರ್ಷವು.

**9. ನಾಕ್ಷತ್ರ ವರ್ಷ -** ಒಂದು ನಕ್ಷತ್ರವನ್ನು ಚಂದ್ರನು ಕ್ರಮಿಸುವ ಕಾಲವು ನಾಕ್ಷತ್ರ ದಿನ. ಇಂತಹ 27 ದಿನಗಳಿಗೆ ಒಂದು ಮಾಸ ಮತ್ತು 12 ಮಾಸಗಳಿಗೆ ಒಂದು ನಕ್ಷತ್ರ ವರ್ಷ.

ಮೇಲೆ ಹೇಳಿರುವ 9 ರೀತಿಯ ವರ್ಷಗಳು ಭಾರತದಲ್ಲಿ ಅವರವರ ದೇಶಾಚಾರದಂತೆ ಜನರಿಂದ ಆಚರಿಸಲ್ಪಡುತ್ತವೆ. ಇವುಗಳನ್ನು ಸಂವತ್ಸರವೆಂಬ ಹೆಸರಿನಿಂದ ವ್ಯವಹರಿಸುತ್ತಾರೆ. 60 ಸಂವತ್ಸರಗಳಿಗೆ ಒಂದು ಪರ್ಯಾಯವೆಂದು ಹೇಳಲ್ಪಟ್ಟಿದೆ. ಈ 60 ಸಂವತ್ಸರಗಳನ್ನು ಪ್ರಭವ, ವಿಭವ ಇತ್ಯಾದಿ ಹೆಸರುಗಳಿಂದ ಕರೆಯಲಾಗಿದೆ. ಈ ಹೆಸರುಗಳು ಆಯಾ ಸಂವತ್ಸರಗಳಲ್ಲಿ ಆವಿರ್ಭವಿಸಬಹುದಾದ ಪ್ರಧಾನ ಗುಣಗಳ ಸಂಕೇತವೆಂದು ಹೇಳುತ್ತಾರೆ.



ಭಾರತದಲ್ಲಿ ಆಚರಿಸುವ ಕಾಲಮಾನಗಳನ್ನು ಮೇಲ್ಕಂಡ ರೀತಿಯಲ್ಲಿ, ಕರ್ಮವನ್ನು ಆಚರಿಸುವ ಕರ್ತೃವು ಮನಸ್ಸಿನಲ್ಲಿ ಸ್ಮರಿಸಿದ ನಂತರ, ಪ್ರಕೃತ ತಾನು ಆಚರಿಸುತ್ತಿರುವ ಶುಭ ಮುಹೂರ್ತಕ್ಕೆ ಅನ್ವಯಿಸುವ ಸಂವತ್ಸರಾದಿ ಕಾಲವನ್ನು ಹೇಳಿಕೊಂಡು ಕರ್ಮ ಪ್ರವೃತ್ತನಾಗಬೇಕೆಂದು ಮಹಾಸಂಕಲ್ಪವು ಅಪ್ಪಣೆ ಕೊಡಿಸುತ್ತದೆ. ಇದನ್ನು ಈ ಕೆಳಗೆ ಸೂಚಿಸಿರುವ ಕ್ರಮದಲ್ಲಿ ಸಂಕಲ್ಪಿಸಬೇಕಾಗಿದೆ.

ಕರ್ತೃವು ಕರ್ಮವನ್ನು ಆಚರಿಸುತ್ತಿರುವ ಕಾಲದಲ್ಲಿರುವ - (ಅಮುಕ - ಎಂದರೆ ಸದ್ಯದಲ್ಲಿ ನಡೆಯುತ್ತಿರುವ ಕಾಲ) - ಇದರ ವಿವರಣೆಗಳು ನಾವು ನಿತ್ಯವೂ ಉಪಯೋಗಿಸುವ ಪಂಚಾಂಗಗಳಲ್ಲಿ ಲಭ್ಯ. (ನವವರ್ಷಗಳ ವಿವರಣೆ ಹಿಂದಿನ ಪುಟದಲ್ಲಿದೆ)

1. 60 ಸಂವತ್ಸರಗಳಲ್ಲಿ ಪ್ರಕೃತ ನಡೆಯುತ್ತಿರುವ ಸಂವತ್ಸರ.
2. ನವ ವರ್ಷಗಳಲ್ಲಿ ತಾನು ಆಚರಿಸುತ್ತಿರುವ ವರ್ಷ (ಚಾಂದ್ರಮಾನ ಇತ್ಯಾದಿ)
3. ಉತ್ತರ ಮತ್ತು ದಕ್ಷಿಣಾಯನದಲ್ಲಿ ಪ್ರಕೃತ ನಡೆಯುತ್ತಿರುವ ಅಯನ.
4. ವಸಂತಾದಿ ಆರು ಋತುಗಳಲ್ಲಿ ಪ್ರಕೃತ ನಡೆಯುತ್ತಿರುವ ಋತು.
5. ಚೈತ್ರಾದಿ 12 ಮಾಸಗಳ ಮಧ್ಯೆ ಪ್ರಕೃತ ನಡೆಯುತ್ತಿರುವ ಮಾಸ.
6. ಶುಕ್ಲ ಕೃಷ್ಣ ಪಕ್ಷಗಳಲ್ಲಿ ಸದ್ಯದಲ್ಲಿ ನಡೆಯುತ್ತಿರುವ ಪಕ್ಷ.
7. ಪಾಡ್ಯಾದಿ ತಿಥಿಗಳಲ್ಲಿ ಅಂದಿನ ತಿಥಿ.
8. ಭಾನುವಾರಾದಿ ದಿನಗಳಲ್ಲಿ ಅಂದಿನ ವಾರ.
9. ಅಶ್ವಿನ್ಯಾದಿ 27 ನಕ್ಷತ್ರಗಳಲ್ಲಿ ಅಂದಿನ ನಕ್ಷತ್ರ.
10. ವಿಷ್ಕಂಭಾದಿ ಯೋಗಗಳಲ್ಲಿ ಅಂದಿನ ಯೋಗ.
11. ಭವಾದಿ ಕರಣಗಳಲ್ಲಿ ಅಂದಿನ ಕರಣ.
12. ಕರ್ಮ ಮಾಡುತ್ತಿರುವ ಮುಹೂರ್ತ ಅಂದರೆ ಆ ಕಾಲದಲ್ಲಿರುವ ಲಗ್ನ.

ಇವುಗಳನ್ನು ಸ್ಮರಿಸಿ, ಇಂತಹ ಶುಭಕಾಲದಲ್ಲಿ ಭಗವಂತನ ಸಂಕಲ್ಪದಿಂದ ತಾನು ಮಾಡುವ ಕರ್ಮದಲ್ಲಿ ಪ್ರವೃತ್ತನಾಗುತ್ತಿರುವೆನೆಂದು ಭಾವಿಸಬೇಕು.

ಭಾರತ ದೇಶದಲ್ಲಿ ವರ್ಷದ ಆರಂಭದ ಶುಭದಿನವನ್ನು ಯುಗಾದಿಯೆಂಬ ವ್ರತಾಚರಣೆಯಿಂದ ಪ್ರಾರಂಭಿಸುವ ಪದ್ಧತಿ ಅತ್ಯಂತ ಪ್ರಾಚೀನ ಕಾಲದಿಂದಲೂ ನಡೆದುಬಂದಿದೆ. ವಿಶೇಷ ಸಂಗತಿಯೆಂದರೆ, ಭಾರತದಲ್ಲಿ ವರ್ಷದ ಮೊದಲನೇ ದಿನವನ್ನು ಅತ್ಯಂತ ಸಾತ್ವಿಕ ರೀತಿಯಲ್ಲಿ, ಆಧ್ಯಾತ್ಮಿಕ ಭಾವನೆಯಿಂದ, ವ್ರತವೆಂಬ ರೂಪದಲ್ಲಿ ಆಚರಿಸುವ ಪದ್ಧತಿಯಿದೆ. ಅಂದು ಪ್ರಾತಃಕಾಲದಲ್ಲಿ ಸ್ನಾನಾದಿಗಳಿಂದ ಪರಿಶುದ್ಧಿ ಹೊಂದಿದ ನಂತರ, ನೂತನ ವಸ್ತ್ರಾಭರಣಗಳನ್ನು ಧರಿಸಿ, ಪರಮಾತ್ಮನನ್ನು ಭಕ್ತಿಯಿಂದ ಪೂಜಿಸಬೇಕು. ಸುಖ-ದುಃಖಗಳನ್ನು ಸಮನಾದ ದೃಷ್ಟಿಯಿಂದ ನೋಡುವ ಶಕ್ತಿಯನ್ನು ನೀಡಬೇಕೆಂದು

shrinath.udupa@gmail.com

ಪ್ರಾರ್ಥಿಸಿ, ನೈವೇದ್ಯ ಮಾಡಿದ ಬೇವುಬೆಲ್ಲವನ್ನು ಸಂಕೇತ ರೂಪವಾಗಿ ಪ್ರಸಾದದ ರೂಪದಲ್ಲಿ ಸ್ವೀಕರಿಸಿ ಅನಂತರ ಬಂಧು ಬಳಗಗಳೊಡನೆ ಸಂತೋಷದಿಂದ ಭೋಜನವನ್ನು ಮಾಡಬೇಕು. ಮಧ್ಯಾಹ್ನದ ನಂತರ ಆಚಾರ್ಯರಿಂದ ಪಂಚಾಂಗವನ್ನು ಪಠನ ಮಾಡಿಸಿ, ಭಕ್ತಿಯಿಂದ ಅದರ ಶ್ರವಣ ಮಾಡಬೇಕು. ಇಂತಹ ಪಂಚಾಂಗಶ್ರವಣವ್ರತದಲ್ಲಿ ಭಾಗವಹಿಸಿ, ಈ ಕಾಲಗಣನೆಯನ್ನು ಸಕಲರೂ ಚೆನ್ನಾಗಿ ತಿಳಿಯಬಹುದಾದ ಅವಕಾಶವನ್ನು ಕಲ್ಪಿಸಲಾಗಿದೆ. ಈ ಪದ್ಧತಿ ಅನೂಚಾನವಾಗಿ ಇಂದಿಗೂ ಭಾರತದಲ್ಲಿ ನಡೆದುಬರುತ್ತಿದ್ದರೂ, ಕೆಲವೇ ವಯಸ್ಸಾದವರು ಇದರಲ್ಲಿ ಭಾಗವಹಿಸುವುದರಿಂದ, ಹೇಳುವವರೂ ವಯೋವೃದ್ಧರೇ ಆಗಿರುವುದರಿಂದ ಸರಿಯಾದ ಪ್ರಯೋಜನವಾಗುತ್ತಿಲ್ಲ. ಅರ್ಥವತ್ತಾಗಿ ಈ ಪದ್ಧತಿಯನ್ನು ಉಪನ್ಯಾಸರೂಪದಲ್ಲಿ ಆಚರಣೆಗೆ ತರುವುದರಿಂದ, ಇಂದಿನ ಪೀಳಿಗೆಗೆ ಮಹತ್ವವಾದ ಉಪಯೋಗವಾಗುವುದರಲ್ಲಿ ಸಂದೇಹವಿಲ್ಲ. ಇಂದಿನ ಸ್ಥಿತಿಯಲ್ಲಿ ಇದು ಕರ್ತವ್ಯವೂ ಆಗಿದೆ. ಇಂತಹ ಭವ್ಯ ಪರಂಪರೆಯನ್ನು ಮರೆತು ಇಂದು ಭಾರತದಲ್ಲಿ ಸಾರ್ವತ್ರಿಕವಾಗಿ ಆಚರಿಸಲ್ಪಡುತ್ತಿರುವ ಮಧ್ಯರಾತ್ರಿಯ ಕ್ರೈಸ್ತ ವರ್ಷಾರಂಭ ಸಮಾರಂಭವು ನಿಜಕ್ಕೂ ತಲೆತಗ್ಗಿಸುವಂತಹುದಾಗಿದೆ.

**೩೭. ಗಂಗಾ.. ವಾಲುಕಾಭಿಃ .........**

ಕರ್ತೃವು ಕಾಲದೇಶಾನುಸಾರವಾಗಿ ಸೃಷ್ಟಿಯಲ್ಲಿ ತನ್ನ ಸ್ಥಾನವನ್ನು ಗುರುತಿಸಿಕೊಳ್ಳುವುದರ ಮೂಲಕ ಪರಮಾತ್ಮನ ರೂಪವೇ ಆಗಿರುವ ಸೃಷ್ಟಿಸ್ತುತಿಯನ್ನು ಮಾಡಿ, ಇನ್ನುಮುಂದೆ ತಾನು ಮಾಡುತ್ತಿರುವ ಕರ್ಮದ ಉದ್ದೇಶವನ್ನು ಸಂಕಲ್ಪಿಸಿಕೊಳ್ಳುತ್ತಾನೆ. ಒಟ್ಟಿನಲ್ಲಿ ಅದು ಈ ರೀತಿ ವರ್ಣಿತವಾಗಿದೆ.

ಪವಿತ್ರ ಗಂಗಾ ನದಿಯು ಹುಟ್ಟುವ ಸ್ಥಳವು ಗೋಮುಖಿ ಎಂಬ ಹೆಸರಿನಿಂದ ಪ್ರಸಿದ್ಧವು (ನೋಡಿ - ಅನೇಕ ನದೀ ವಿರಾಜಿತೇ). ಇಲ್ಲಿನ ಅತ್ಯಂತ ಆಶ್ಚರ್ಯಕರ ವಿಷಯವೇನೆಂದರೆ ಸಾವಿರಾರು ವರ್ಷಗಳಿಂದಲೂ ಒಂದೇ ಸಮನಾಗಿ ಮರಳಿನಿಂದ ಕೂಡಿದ ನೀರು ಬರುತ್ತಿರುವುದು. ಅಕ್ಷಯವಾಗಿ ಈಗಲೂ ಈ ಮರಳು ಬರುತ್ತಲೇ ಇದೆ. ಈ ಸ್ಥಳವನ್ನೇ ಕೇಂದ್ರವಾಗಿರಿಸಿಕೊಂಡು - ಇಲ್ಲಿಂದ ಸಪ್ತರ್ಷಿ ಮಂಡಲದವರೆಗೂ ಈ ಮರಳನ್ನು ತೆಗೆದುಕೊಂಡು ಗುಡ್ಡೆಗಳನ್ನು ಸಹಸ್ರಾರು ವರ್ಷಗಳ ಕಾಲ ಮಾಡಿ, ನಂತರ ಒಂದೊಂದೇ ಮರಳಿನ ಕಣಗಳನ್ನು ತೆಗೆಯುತ್ತಾ, ಪೂರ್ತಿಯಾಗಿ ಈ ಗುಡ್ಡೆಗಳನ್ನು ತೆಗೆಯಲು ಎಷ್ಟು ದಿವ್ಯ ವರ್ಷಗಳು ಬೇಕಾಗುವುದೋ ಅಷ್ಟು ವರ್ಷಗಳ ಕಾಲ ಮತ್ತು ಇದೇ ರೀತಿ ಸೂರ್ಯಮಂಡಲದವರೆಗೆ ಗೋಧಿಕಾಳುಗಳನ್ನೂ, ಚಂದ್ರ ಮಂಡಲ ಪರ್ಯಂತ ಉದ್ದಿನ ಕಾಳುಗಳನ್ನೂ, ಧ್ರುವ ಮಂಡಲದ ಪರ್ಯಂತ ಸಾಸಿವೆ ಕಾಳುಗಳನ್ನೂ, ನಕ್ಷತ್ರ ಮಂಡಲ ಪರ್ಯಂತ ಎಳ್ಳು ಕಾಳುಗಳನ್ನೂ, ಬ್ರಹ್ಮಾಂಡದ ಆಚೆಗಿನ ಲೋಕಗಳವರೆಗೆ ತ್ರ್ಯಣುಕು ಕಾಳುಗಳನ್ನೂ ಗುಡ್ಡೆ ಮಾಡಿ ಒಂದೊಂದೇ ಕಾಳಿನಂತೆ ಪೂರ್ತಿಯಾಗಿ ತೆಗೆಯಲು



shrinath.udupa@gmail.com

ಬೇಕಾಗುವಷ್ಟು ದಿವ್ಯ ಸಹಸ್ರ ವರ್ಷಗಳ ಕಾಲ - ತನ್ನ ವಂಶದಲ್ಲಿ ಮೊದಲು ಮತ್ತು ಅನಂತರದ ಪಿತೃಗಳೆಲ್ಲರೂ ನರಕ ಲೋಕಗಳನ್ನು ಹೊಂದದೇ - ಶಾಶ್ವತವಾದ ಬ್ರಹ್ಮಲೋಕ ಸಿದ್ಧಿ ಹೊಂದಲೆಂದು ಮತ್ತು ಅಗ್ನಿಷ್ಟೋಮ, ಅತಿರಾತ್ರ, ವಾಜಪೇಯ, ಪೌಂಡರೀಕ, ರಾಜಸೂಯ ಅಶ್ವಮೇಧಾದಿ ಸಮಸ್ತ ಯಾಗಗಳ ಫಲವನ್ನು ಹೊಂದುವುದಕ್ಕಾಗಿಯೂ; ಜನ್ಮಜನ್ಮಾಂತರದಲ್ಲೂ; ಬಾಲ್ಯ ಯೌವ್ವನ ವಾರ್ಧಕಾವಸ್ಥೆಯಲ್ಲಿಯೂ; ಎಚ್ಚರ, ಸ್ವಪ್ನ, ನಿದ್ರಾವಸ್ಥೆಗಳಲ್ಲಿಯೂ ತಿಳಿದೋ ಅಥವಾ ತಿಳಿಯದೆಯೋ ಮಾಡಿದ ಸಕಲ ಪಾಪಗಳ ಕ್ಷಯವಾಗುವುದಕ್ಕಾಗಿಯೂ; ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಫಲ ಪ್ರಾಪ್ತಿಗಾಗಿಯೂ; ಇಷ್ಟದೇವತಾ ಪ್ರೀತ್ಯರ್ಥವಾಗಿಯೂ; ಕ್ಷೇಮಸ್ಥೈರ್ಯ ವಿಜಯ ಆಯುರಾರೋಗ್ಯ ಐಶ್ವರ್ಯಾದಿಗಳು ಮತ್ತು ಮುಂದಿನ ಅಭಿವೃದ್ಧಿಗಾಗಿಯೂ ಸದ್ಯದ ಶುಭ ದಾನ, ಯಜ್ಞ ಅಥವಾ ಕರ್ಮದಲ್ಲಿ ಉದ್ಯುಕ್ತನಾಗುತ್ತಿರುವನೆಂದು ಸಂಕಲ್ಪಿಸಿ, ಮುಂದಿನ ಕಾರ್ಯವನ್ನು ಪ್ರಾರಂಭಿಸಬೇಕೆಂಬುದಾಗಿ ವರ್ಣಿತವಾಗಿದೆ.

**"ತದ್ವಾಚಾ ವದತಿ| ತತ್ಕರ್ಮಣಾ ಕರೋತಿ| ತದೇಷಾಭ್ಯನೂಕ್ತಾ"** ಎಂಬ ಶ್ರುತಿವಾಕ್ಯದಂತೆ, - (ಯಜುರಾರಣ್ಯಕ - ಅರುಣ ಪ್ರಶ್ನ) ತ್ರಿಕರಣ ಶುದ್ಧಿಯಿಂದ ಸೃಷ್ಟಿಗೀತೆಯನ್ನು ಪಠಿಸಿ, ಅದರಿಂದ ಉತ್ಪನ್ನವಾದ ಭಾವನೆಯಿಂದ ಮನಸ್ಸು ಉದಾತ್ತಮಟ್ಟಕ್ಕೇರಿದಾಗ, ಆಚರಿಸುವ ಯಜ್ಞ, ದಾನ, ಕರ್ಮಗಳು ತಕ್ಕ ಫಲವನ್ನು ಹೊಂದುವ ಶಕ್ತಿಯುಳ್ಳದ್ದಾಗುವುದೆಂಬುದು ಮಹಾಸಂಕಲ್ಪದ ವಾಕ್ಯವಾಗಿದೆ.

●-● ಸಮಾಪ್ತಿ ●-●

# ಉಪಯುಕ್ತ ಜ್ಯೌತಿಷ ವಿಷಯಗಳು

## ಸಂವತ್ಸರಗಳು - 60

| | | |
|---|---|---|
| 1. ಪ್ರಭವ | 21. ಸರ್ವಜಿತ್ | 41. ಪ್ಲವಂಗ |
| 2. ವಿಭವ | 22. ಸರ್ವಧಾರಿ | 42. ಕೀಲಕ |
| 3. ಶುಕ್ಲ | 23. ವಿರೋಧಿ | 43. ಸೌಮ್ಯ |
| 4. ಪ್ರಮೋದೂತ | 24. ವಿಕೃತಿ | 44. ಸಾಧಾರಣ |
| 5. ಪ್ರಜೋತ್ಪತ್ತಿ | 25. ಖರ | 45. ವಿರೋಧಿಕೃತ್ |
| 6. ಅಂಗೀರಸ | 26. ನಂದನ | 46. ಪರೀಭಾವಿ |
| 7. ಶ್ರೀಮುಖ | 27. ವಿಜಯ | 47. ಪ್ರಮಾದೀಚ |
| 8. ಭಾವ | 28. ಜಯ | 48. ಆನಂದ |
| 9. ಯುವ | 29. ಮನ್ಮಥ | 49. ರಾಕ್ಷಸ |
| 10. ಧಾತೃ | 30. ದುರ್ಮುಖಿ | 50. ನಳ |
| 11. ಈಶ್ವರ | 31. ಹೇವಿಳಂಬಿ | 51 ಪೈಂಗಳ |
| 12. ಬಹುಧಾನ್ಯ | 32. ವಿಳಂಬಿ | 52. ಕಾಳಯುಕ್ತಿ |
| 13. ಪ್ರಮಾಥಿ | 33. ವಿಕಾರಿ | 53. ಸಿದ್ಧಾರ್ಥಿ |
| 14. ವಿಕ್ರಮ | 34. ಶಾರ್ವರಿ | 54. ರೌದ್ರಿ |
| 15. ವೃಷ (ವಿಷು) | 35. ಪ್ಲವ | 55. ದುರ್ಮತಿ |
| 16. ಚಿತ್ರಭಾನು | 36. ಶುಭಕೃತು | 56. ದುಂದುಭಿ |
| 17. ಸ್ವಭಾನು | 37. ಶೋಭಕೃತು | 57. ರುಧಿರೋದ್ಗಾರಿ |
| 18. ತಾರಣ | 38. ಕ್ರೋಧಿ | 58. ರಕ್ತಾಕ್ಷಿ |
| 19. ಪಾರ್ಥಿವ | 39. ವಿಶ್ವಾವಸು | 59. ಕ್ರೋಧನ |
| 20. ವ್ಯಯ | 40. ಪರಾಭವ | 60. ಅಕ್ಷಯ (ಕ್ಷಯ) |

## ಆಯನ - 2

(1) ಉತ್ತರಾಯಣ (2) ದಕ್ಷಿಣಾಯನ

## ಋತುಗಳು - 6

| ಚಾಂದ್ರಮಾನ ಮಾಸಗಳು | ಋತುಗಳು | ಸೌರಮಾನ ಮಾಸಗಳು |
|---|---|---|
| 1. ಚೈತ್ರ-ವೈಶಾಖ | ವಸಂತರ್ತು (ವಸಂತಕಾಲ) | ಮೀನ-ಮೇಷ |
| 2. ಜ್ಯೇಷ್ಠ-ಆಷಾಢ | ಗ್ರೀಷ್ಮರ್ತು (ಬೇಸಿಗೆಕಾಲ) | ವೃಷಭ-ಮಿಥುನ |
| 3. ಶ್ರಾವಣ-ಭಾದ್ರಪದ | ವರ್ಷರ್ತು (ಮಳೆಗಾಲ) | ಕಟಕ-ಸಿಂಹ |
| 4. ಆಶ್ವಯುಜ-ಕಾರ್ತಿಕ | ಶರದೃತು (ಶರತ್ಕಾಲ) | ಕನ್ಯಾ-ತುಲಾ |
| 5. ಮಾರ್ಗಶಿರ-ಪೌಷ | ಹಿಮಂತರ್ತು (ಮಂಜಿನಕಾಲ) | ವೃಶ್ಚಿಕ-ಧನುಸ್ಸು |
| 6. ಮಾಘ-ಫಾಲ್ಗುಣ | ಶಿಶಿರರ್ತು (ಮರಗಳು ಚಿಗುರುವಕಾಲ) | ಮಕರ-ಕುಂಭ |

shrinath.udupa@gmail.com

## ಚಾಂದ್ರಮಾನ ಮಾಸಗಳು - 12

| | | | |
|---|---|---|---|
| 1. ಚೈತ್ರ | 4. ಆಷಾಢ | 7. ಆಶ್ವಯುಜ | 10. ಪೌಷ |
| 2. ವೈಶಾಖ | 5.ಶ್ರಾವಣ | 8. ಕಾರ್ತಿಕ | 11.ಮಾಘ |
| 3. ಜ್ಯೇಷ್ಠ | 6. ಭಾದ್ರಪದ | 9. ಮಾರ್ಗಶಿರ | 12. ಫಾಲ್ಗುಣ |

## ರಾಶಿ ಮತ್ತು ಸೌರಮಾನ ಮಾಸಗಳು - 12

| | | |
|---|---|---|
| 1. ಮೇಷ (ಚಿತ್ತಿರೈ) | 5. ಸಿಂಹ (ಅವಣಿ) | 9. ಧನುಸ್ಸು (ಮಾರ್ಗಳಿ) |
| 2. ವೃಷಭ (ವೈಯ್ಯಾಶಿ) | 6. ಕನ್ಯಾ (ಪೆರಾಟ್ಟಾಶಿ) | 10. ಮಕರ (ತೈ) |
| 3. ಮಿಥುನ (ಅಣಿ) | 7. ತುಲಾ (ಅಲ್ಪಿಶಿ) | 11. ಕುಂಭ (ಮಾಶಿ) |
| 4. ಕರ್ಕಟಕ (ಅಡಿ) | 8. ವೃಶ್ಚಿಕ (ಕಾರ್ತ್ತಿಕೈ) | 12. ಮೀನ (ಪಂಗುನಿ) . |

## ತಿಥಿಗಳು - 30

| ಶುಕ್ಲ ಪಕ್ಷ | | ಕೃಷ್ಣ ಪಕ್ಷ | |
|---|---|---|---|
| 1. ಪ್ರತಿಪತ್ | 9. ನವಮೀ | 1. ಪ್ರತಿಪತ್ | 9. ನವಮೀ |
| 2. ದ್ವಿತೀಯಾ | 10. ದಶಮೀ | 2. ದ್ವಿತೀಯಾ | 10. ದಶಮೀ |
| 3. ತೃತೀಯಾ | 11. ಏಕಾದಶೀ | 3. ತೃತೀಯಾ | 11. ಏಕಾದಶೀ |
| 4. ಚತುರ್ಥೀ | 12. ದ್ವಾದಶೀ | 4. ಚತುರ್ದೀ | 12. ದ್ವಾದಶೀ |
| 5. ಪಂಚಮೀ | 13. ತ್ರಯೋದಶೀ | 5. ಪಂಚಮೀ | 13. ತ್ರಯೋದಶೀ |
| 6. ಷಷ್ಠೀ | 14. ಚತುರ್ದಶೀ | 6. ಷಷ್ಠೀ | 14. ಚತುರ್ದಶೀ |
| 7. ಸಪ್ತಮೀ | 15. ಪೂರ್ಣಿಮಾ | 7. ಸಪ್ತಮೀ | 15. ಅಮಾವಾಸ್ಯೆ |
| 8. ಅಷ್ಟಮೀ | | 8. ಅಷ್ಟಮೀ | |

## ನಕ್ಷತಗಳು - 27

| | | |
|---|---|---|
| 1. ಅಶ್ವಿನಿ | 10. ಮಖೆ | 19. ಮೂಲ |
| 2. ಭರಣಿ | 11. ಪುಬ್ಬೆ | 20. ಪೂರ್ವಾಷಾಢ |
| 3. ಕೃತ್ತಿಕೆ | 12. ಉತ್ತರೆ | 21. ಉತ್ತರಾಷಾಢ |
| 4. ರೋಹಿಣಿ | 13. ಹಸ್ತ | 22. ಶ್ರವಣ |
| 5. ಮೃಗಶಿರೆ | 14. ಚಿತ್ತೆ | 23. ಧನಿಷ್ಠೆ |
| 6. ಆರ್ದ್ರೆ | 15. ಸ್ವಾತಿ | 24. ಶತಭಿಷೆ |
| 7. ಪುನರ್ವಸು | 16. ವಿಶಾಖ | 25. ಪೂರ್ವಾಭಾದ್ರೆ |
| 8. ಪುಷ್ಯ | 17. ಅನೂರಾಧ | 26. ಉತ್ತರಾಭಾದ್ರೆ |
| 9. ಆಶ್ಲೇಷ | 18. ಜ್ಯೇಷ್ಠ | 27. ರೇವತಿ |

shrinath.udupa@gmail.com

## ಯೋಗಗಳು - 27

| | | |
|---|---|---|
| 1. ವಿಷ್ಕಂಭ | 10. ಗಂಡ | 19. ಪರಿಘ |
| 2. ಪ್ರೀತಿ | 11. ವೃದ್ಧಿ | 20. ಶಿವ |
| 3. ಆಯುಷ್ಮಾನ್ | 12. ಧ್ರುವ | 21. ಸಿದ್ಧ |
| 4. ಸೌಭಾಗ್ಯ | 13. ವ್ಯಾಘಾತ | 22. ಸಾಧ್ಯ. |
| 5. ಶೋಭನ | 14. ಹರ್ಷಣ | 23. ಶುಭ |
| 6. ಅತಿಗಂಡ | 15. ವಜ್ರ | 24. ಶುಕ್ಲ |
| 7 ಸುಕರ್ಮ | 16. ಸಿದ್ಧಿ | 25. ಬ್ರಹ್ಮ |
| 8. ಧೃತಿ | 17. ವ್ಯತೀಪಾತ | 26. ಐಂದ್ರ |
| 9. ಶೂಲ | 18. ವರಿಯಾನ್ | 27. ವೈಧೃತಿ |

## ಕರಣಗಳು - 11

| | |
|---|---|
| 1. ಬವ | 7. ಭದ್ರೆ |
| 2. ಬಾಲವ | 8. ಶಕುನಿ |
| 3. ಕೌಲವ | 9. ಚತುಷ್ಪಾತ್ |
| 4. ತೈತಲೆ | 10. ನಾಗವಾನ್ |
| 5. ಗರಜೆ | 11. ಕಿಂಸ್ತುಘ್ನ |
| 6. ವಣಿಕ್ | |


shrinath.udupa@gmail.com

## ಸಹಾಯಕ ಗ್ರಂಥಗಳು

( ಈ ಗ್ರಂಥಗಳಿಂದ ಬಹಳ ಸಹಾಯವಾಗಿದೆ. ಅದಕ್ಕಾಗಿ ಇವುಗಳನ್ನು ಪ್ರಕಟಿಸಲು ಕಾರಣಕರ್ತರಾದವರೆಲ್ಲರಿಗೂ ಕೃತಜ್ಞತೆಯನ್ನು ಅರ್ಪಿಸಲಾಗಿದೆ.)


1. ಭಾರತ ದರ್ಶನ, ತ್ಯಾಗರಾಜನಗರ, ಬೆಂಗಳೂರು - 28 ಇವರು ಪ್ರಕಟಿಸಿರುವ ಶ್ರೀಮದ್ಭಾಗವತ (9 ಸಂಪುಟಗಳು) ಶ್ರೀಮನ್ಮಹಾಭಾರತ ( 32 ಸಂಪುಟಗಳು), ಶ್ರೀಮದ್ವಾಲ್ಮೀಕಿ ರಾಮಾಯಣ (11 ಸಂಪುಟಗಳು), ಮತ್ತು ವಿಶೇಷಾಂಕಗಳು
2. ಪುರಾಣನಾಮ ಚೂಡಾಮಣಿ
3. ಪುರಾಣ ಭಾರತ ಕೋಶ
4. ಶ್ರೀವತ್ಸ ನಿಘಂಟು
5. ಸಂಜ್ಞಾರ್ಥ ತತ್ವಕೋಶ
6. ಸಂಖ್ಯೆಗಳಿಂದ ಸ್ಫೂರ್ತಿ
7. ಕನ್ನಡ ಜಾನಪದ ವಿಶ್ವಕೋಶ- ಕನ್ನಡ ಸಾಹಿತ್ಯ ಪರಿಷತ್ತು
8. ಜಯಚಾಮರಾಜೇಂದ್ರ ಗ್ರಂಥಮಾಲೆಯಲ್ಲಿ ಪ್ರಕಟವಾಗಿರುವ ಪುರಾಣ ಗ್ರಂಥಗಳು
9. ಪವಿತ್ರ ಕ್ಷೇತ್ರಗಳು - ತಿರುಮಲ್ಲೆ ತಲಂಗಳ್ ಪ್ರಕಟಣ ಸಮಿತಿ
10. ಉತ್ತರ ಕರ್ನಾಟಕದರ್ಶನ- ಕನ್ನಡ ಸಾಹಿತ್ಯ ಪರಿಷತ್ತು
11. ಶಾಲೀವಾಹನ ಚರಿತ್ರೆ - ಈಚನೂರು ಪ್ರಕಾಶಕರು
12. ಭಾರತದ ಗ್ಯಾಸಿಟಿಯರ್ ಗ್ರಂಥಗಳು- ಕರ್ನಾಟಕ ಸರ್ಕಾರ
13. Immortal India - Bhavan's Series ( I,II,III, IV).
14. South Asian Hand book - Tourist India.
15. India - A Hand book of travel.
16. Birth place of Lord Sri Krishna( Brief History and Development.
( Pubished by Srikrishna Janmasthan Seva Samsthan- **Mathura**)
17. ಕಲ್ಯಾಣ್ - ಶಕ್ತಿ ಅಂಕ್( ಹಿಂದಿ)
18. Kalpatharu Research Academy Publications
(i) Bharathiya Bhutatwa Rahasyam
(ii) Art and Architechture of Indian Temples
(iii) ಶ್ರೀ ತತ್ತ್ವ ನಿಧಿ
(iv) Rigveda Darshana
(v) Navagraha Kosha
19. Introduction to Hindhu culture- Ramakrishna Mutt
20. ಸಂದರ್ಭಕ್ಕೆ ಒದಗಿದ ಲೇಖನಗಳು


shrinath.udupa@gmail.com

## ಈ ಕೃತಿಯ ಮುದ್ರಣಕ್ಕೆ ಸಹಕರಿಸಿದ ದಾನಿಗಳು

- ಸೀತಾಬಾಯಿ ರಾಮರಾವ್ ಬಾಪಟ್ ಚಾರಿಟೇಬಲ್ ಟ್ರಸ್ಟ್, ಸಾಗರ
- ದಿ। ಡಾ। ಪಿ. ನಾರಾಯಣ ಭಟ್, ಉಕ್ಕಿನಡ್ಕ ಸ್ಮರಣಾರ್ಥ - ಮಕ್ಕಳು
- ದಿ। ಶ್ರೀಮತಿ ಶಾಂತಾವೆಂಕಟೇಶ ಕಾಮತ್, ಕಾಸರಗೋಡು ಸ್ಮರಣಾರ್ಥ-ಮಕ್ಕಳು
- ದಿ। ವೇದಮೂರ್ತಿ ದೇವಳಿ ವೆಂಕಟಾಚಲ ಐತಾಳ, ತ್ರಾಸಿ-ಕುಂದಾಪುರ ಇವರ ಸ್ಮರಣಾರ್ಥ
- ಡಾ। ಬಲೆಕಳ ಅನಂತಪದ್ಮನಾಭ ಭಟ್, ಕಾಸರಗೋಡು
- ಡಾ। ರಾಜಗೋಪಾಲ ಶರ್ಮ, ವಿದ್ಯಾನಗರ, ಕಾಸರಗೋಡು
- ಶ್ರೀ ದೇವದಾಸ್ ನಾಯಕ್, ಕಾಸರಗೋಡು
- ಶ್ರೀ ಕಲ್ಲಕಟ್ಟ ಈಶ್ವರ ಭಟ್ (ಖಂಡಿಗೆ), ಕಾಸರಗೋಡು
- ಶ್ರೀ ಸುಂದರರಾವ್, ಪ್ರಕಾಶ್ ಸ್ಟುಡಿಯೋ, ಕಾಸರಗೋಡು
- ಶ್ರೀ ನಾಗೇಶ್ ಭಾಸ್ಕರ್ ಕಾಮತ್, ಕಾಸರಗೋಡು
- ಶ್ರೀ ಎಸ್. ಎಸ್. ಶಿರಸ್ಯಾಡ್, ಬಸವೇಶ್ವರನಗರ, ಬೆಂಗಳೂರು

shrinath.udupa@gmail.com